ಜೈನಸಾಹಿತ್ಯಪ್ರಚಾರಸಂಘದ ಜೈನಧಾರ್ಮಿಕ ಕನ್ನಡ ಮಾಸಿಕಮುಖಪತ್ರಿಕೆ

# ಜಿನವಾಣಿ



## ನವಂಬರ್ 10



# ಭಕ್ತಾಮರ ಸ್ತೋತ್ರ ಯಂತ್ರದ ಚಿತ್ರದ ಬಿಡುಗಡೆ

ಮೂಡಬಿದ್ರಿ ಜೈನ ಮಠದ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕರು ಇತ್ತೀಚೆಗೆ ನಗರದ ಎಂ ಎಲ್. ವರ್ಧಮಾನಯ್ಯನವರ ಜೈನ ವಿದ್ಯಾರ್ಥಿ ನಿಲಯದಲ್ಲಿ ಭಕ್ತಾಮರ ಸ್ತೋತ್ರ ಯಂತ್ರದ ಫೋಟೋ ಬಿಡುಗಡೆ ಮಾಡುತ್ತಿರುವುದನ್ನು ಚಿತ್ರದಲ್ಲಿ ಕಾಣಬಹುದು.

ಭಕ್ತಾಮರ ಯಂತ್ರವನ್ನು ಭಕ್ತಿಯಿಂದ ಪೂಜಿಸುವುದರಿಂದ ಮನಸ್ಸಿಗೆ ಶಾಂತಿ ಏರ್ಪಟ್ಟು ಕರ್ಮಗಳು ಕಳೆಯುತ್ತವೆ. ಹಾಗೂ ಸರ್ವಸಿದ್ಧಿ ಸಂಪತ್ತು ತಾನಾಗಿಯೇ ಬರುತ್ತದೆ. ಇದನ್ನು ಪ್ರತಿಯೊಬ್ಬ ಮಾನವರು ತನ್ನ ಜೀವನದಲ್ಲಿ ಅಳವಡಿಸಿಕೊಂಡು ಸಾರ್ಥಕಗೊಳಿಸಿಕೊಳ್ಳಬೇಕೆಂಬುದೇ ಚಾರುಕೀರ್ತಿ ಸ್ವಾಮಿಯವರ ಉಪದೇಶವಾಗಿದೆ,

ಭಕ್ತಾಮರ ಯಂತ್ರದ ಫೋಟೋಗಳು ದೊರೆಯುವ ಸ್ಥಳ:

ಶ್ರೀಮತಿ ರತ್ನಮ್ಮ ದೇವೇಂದ್ರಯ್ಯ,<br>
೫೭೫, ದಿವಾನರ ರಸ್ತೆ,<br>
ಚಾಮರಾಜಮೊಹಲ್ಲಾ, ಮೈಸೂರು.

||ಓಮ್||

|| ಓಮ್ ನಮಸ್ಸಿದ್ಧೇಭ್ಯಃ ||

# ಜಿನವಾಣಿ

# JINAVANI

ಜೈನಸಾಹಿತ್ಯ ಪ್ರಚಾರಸಂಘದ ಮುಖಪತ್ರಿಕೆ

ಜೈನ ಧಾರ್ಮಿಕ

ಕನ್ನಡ ಮಾಸಪತ್ರಿಕೆ

KANNADA MONTHLY MAGZINE

ಸತ್ವೇಷು ಮೈತ್ರೀಂ ಗುಣಿಷು ಪ್ರಮೋದಂ ಕ್ಲಿಷ್ಟೇಷು ಜೀವೇಷು ಕೃಪಾಪರತ್ವಮ್ ।
ಮಾಧ್ಯಸ್ಥಭಾವಂ ವಿಪರೀತವೃತ್ತೌ ಸದಾ ಮಮಾತ್ಮಾ ವಿದಧಾತು ದೇವ ।।

–ಅಮಿತಗತಿ

ಎಲೈ ! ದೇವನೇ ! ಪ್ರಾಣಿಗಳಲ್ಲಿ ಸ್ನೇಹವನ್ನೂ, ಗುಣವಂತರಲ್ಲಿ ಸಂತೋಷವನ್ನೂ, ಕಾಯಕ್ಲೇಶ ಮನಃಕ್ಲೇಶಗಳಲ್ಲಿ ತೊಳಲಾಡುವ ಪ್ರಾಣಿಗಳಲ್ಲಿ ದಯೆಯನ್ನೂ, ಶಾಸ್ತ್ರಾಗಮಾಪ್ತವ್ಯತಿರೇಕಮಾರ್ಗಾಶ್ರಯಿಗಳಲ್ಲಿ ಮಾಧ್ಯಸ್ಥಭಾವನೆಯನ್ನೂ ನನಗೆ ಉಂಟುಮಾಡು

MIA ತಿಲಕ್, ಮೈಸೂರು.

ಮಂಡಲ ೩೨-೩೩) ಮೈಸೂರು ೧೦ನೆಯ ನವಂಬರ್ ೧೯೮೩ (ಕಿರಣ– ೧)

(ಗೊಮ್ಮಟ.ಚಾವುಂಡರಾಯ ಶಕ– ೧೦೦೩)

## ಅರಹಂತರ ಸ್ವರೂಪ

ಘನಘಾತಿ ಕರ್ಮರಹಿತಾಃ ಕೇವಲಜ್ಞಾನಾದಿ ಪರಮಗುಣ ಸಹಿತಾಃ ।
ಚತುಸ್ತ್ರಿಂಶದತಿಶಯಯುಕ್ತಾ ಅರ್ಹಂತ ಈದೃಶಾ ಭವಂತಿ ।।

–ಭಗವಾನ್ ಕುಂದಕುಂದಾಚಾರ್ಯರು

ವಿವರಣೆ: ಅರಹಂತರು ಜ್ಞಾನಾವರಣೀಯಾದಿ ನಾಲ್ಕು ಘಾತಿ ಕರ್ಮಗಳನ್ನು ಕೆಡಿಸಿರುವರು. ಅದರಿಂದ ಅವರಿಗೆ ನಿರ್ಮಲಗಳಾದ ಕೇವಲಜ್ಞಾನಾದಿ

ಅನಂತ ಚತುಷ್ಟಯಗಳುಂಟಾಗಿ ಅವರು ೩೪ ಅತಿಶಯಗಳನ್ನು ಹೊಂದಿರುವರು. ಇಲ್ಲಿ ಟೀಕಾಕಾರರು "ಶ್ರೀ ಪದ್ಮಪ್ರಭ ತೀರ್ಥಂಕರರು ಪರಮೌದಾರಿಕಾದಿ ವ್ಯದೇಹಧರರು, ನೇತ್ರವು ಪ್ರಫುಲ್ಲಿತ ಕಮಲದಂತಿರುವುದು, ತೀರ್ಥಂಕರ ಗೋತ್ರಧಾರಿಗಳು ಪಂಡಿತರೆಂಬ ಕಮಲಗಳನ್ನರಳಿಸುವ ಸೂರ್ಯಪ್ರಾಯರು. ಮುನಿಜನವೆಂಬ ವನಕ್ಕೆ ಚೈತ್ರಪ್ರಾಯರು ಕರ್ಮವೆಂಬ ಸೇನೆಗೆ ಶತ್ರುಗಳು. ಸರ್ವಪ್ರಾಣಿಮಾತ್ರಕ್ಕೆ ಪ್ರಿಯರು. ಕಾಮದೇವನುವೆಂಬ ಆನೆಗೆ ಸಿಂಹಪ್ರಾಯರು. ವಾಂಛಿತ ಫಲಪ್ರದಾತರು. ಸಂಸಾರದಿಂದ ಬಿಡಲ್ಪಟ್ಟವರು, ಸರ್ವವಿದ್ಯೇಶ್ವರರು ಹೀಗಿರುವಾಗ ಭಗವಾನರು ಜಯವಂತರಾಗಲಿ" ಎಂಬ ಮನೋಹರ ಪದ್ಯಗಳಿಂದ ಸ್ತುತಿಸಿರುತ್ತಾರೆ.

## ಸಂಪಾದಕೀಯ

### ಭಗವಾನ್ ಮಹಾವೀರರು ಮತ್ತು ನಾವು

ಭಗವಾನ್ ಮಹಾವೀರರು ಈ ಜಗತ್ತಿನಲ್ಲಿ ನಮ್ಮ ಇಂದಿನ ಧರ್ಮಪ್ರವರ್ತಕರಾಗಿ ಉಪಕಾರ ಮಾಡಿರುತ್ತಾರೆ ಅವರ ಪವಿತ್ರ ಜಿನಧರ್ಮದಲ್ಲಿರುವ ಸೌಭಾಗ್ಯವು ನಮಗೆಲ್ಲಾ ದೊರೆತಿದೆ ಮಹಾವೀರರು ತೃತೀಯ ಕಾಲದಲ್ಲಿಲ್ಲ ಆದಿನಾಥ ತೀರ್ಥಂಕರರ ಕಾಲದಲ್ಲೇ ಮುಕ್ತಿ ಪಡೆಯಬಹುದಾಗಿತ್ತು ಆದರೆ ಮಿಥ್ಯಾತ್ವದಿಂದ ಉದಯದಿಂದ ಅನೇಕ ಕಪಿಲಮತ ಸಿದ್ಧಾಂತಗಳನ್ನು ಸ್ಥಾಪಿಸಿ ವಿಪರೀತಮಾರ್ಗಕ್ಕೆ ಹೋದಕಾರಣ ಬಹುಕಾಲ ಸಂಸಾರದಲ್ಲಿ ತಿರುಗಿ ಚತುರ್ಥ ಕಾಲದ ಅಂತ್ಯದಲ್ಲಿ ಭಗವಾನ್ ಮಹಾವೀರನ ಜೀವವು ಕುಂಡಲಪುರದ ಅಧಿಪತಿ ಸಿದ್ಧಾರ್ಥರಾಜನಿಗೂ ತ್ರಿಶಲಾದೇವಿಗೂ ವಸುಧಾರಾದಿ ಮಹಾವೈಭವದಿಂದ ಚೈತ್ರಶುದ್ಧ ತ್ರಯೋದಶಿಯಲ್ಲಿ ಜನಿಸಿ ಧರ್ಮನಾಯಕರಾಗಿದ್ದು ಬಾಲ್ಯದ ೩೦ ವರ್ಷ ಕಳೆದು ವಿರಕ್ತರಾಗಿ ಪಂಚಮುಷ್ಟಿಯಿಂದ ತಲೆಯಕೂದಲನ್ನು ನಮಃಸಿದ್ಧೇಭ್ಯಃ ಎಂಬ ಮಂತ್ರೋಚ್ಚಾರಣೆ ಮಾಡಿ ಕಿತ್ತುಕೊಂಡು ಜಿನಮುನಿಗಳಾಗಿ ೧೨ವರ್ಷಕಾಲ ದೀರ್ಘ ತಪಸ್ಸನ್ನು

ಆಚರಿಸಿ ಕೇವಲಜ್ಞಾನವನ್ನು ಪಡೆದರು. ದೇವೇಂದ್ರಾದಿ ದೇವತೆಗಳು ರಚಿಸಿದ ಸಮವಸರಣ ಸಭೆಯಲ್ಲಿ ವಿರಾಜಮಾನರಾಗಿ ೪೦ ವರ್ಷಕಾಲ ಧರ್ಮಾಮೃತದ ಮಳೆಯನ್ನೇ ಸುರಿಸಿದರು. ಸಕಲ ಪ್ರಾಣಿಗಳೂ ಎಚ್ಚೆತ್ತು ಆತ್ಮಾರಾಧಕರಾದರು. ಅಂದಿನಿಂದ ಇಂದಿನವರೆಗೆ ೨೫೦೦ವರ್ಷಗಳ ಮೇಲಾಯಿತು. ಜಿನಧರ್ಮವು ನಿರಂತರ ಪ್ರಚಾರದಲ್ಲಿದ್ದು ಅನಂತ ಜೀವಿಗಳ ನಿತ್ಯಸುಖಕ್ಕೆ ಕಾರಣವಾಯಿತು ಮಹಾತ್ಮರ ಕೆಲಸವೆಲ್ಲ ಪರೋಪಕಾರದ್ದೇ ಆಗಿರುತ್ತದೆ

ಮಾನವ ಪರ್ಯಾಯವು ಅದರಲ್ಲೂ ಜಿನಧರ್ಮಾರಾಧನೆ ದೊರಕುವುದು ಬಹಳ ಕಷ್ಟ ಸಿಕ್ಕಿದ ಅಮೂಲ್ಯ ಭವಗಳನ್ನು ಸಾರ್ಥಕಪಡಿಸಿಕೊಂಡು ನಿತ್ಯಸುಖಕ್ಕೆ ಪಾತ್ರರಾಗಬೇಕು ಜೈನಸಿದ್ಧಾಂತವು ಕರ್ತೃತ್ವ ಮತ್ತು ಭೋಕ್ತೃತ್ವ- ಅಂದರೆ ಮಾಡುವುದು, ಭೋಗಿಸುವುದು ಒಬ್ಬನೇ ಆಗಿರುವುದರಿಂದ ತನ್ನ ತನ್ನ ಕರ್ಮಗಳಿಗೆ ತಾನೇ ಹೊಣೆಗಾರನಾಗುತ್ತಾನೆ ಆದುದರಿಂದ ಸತ್ಕರ್ಮವನ್ನು ಪಾಲಿಸಿ ಶಾಶ್ವತಸುಖ ಪಡೆಯಲು ಪ್ರಯತ್ನಿಸಬೇಕು

## ಜಿನವಾಣಿ ೩೩ನೆ ವರ್ಷ ಪ್ರಾರಂಭ

ಜಿನವಾಣಿ ಪ್ರಾರಂಭಿಸಿ ೧೯೮೩ನೆ ನವಂಬರ್ ೧ನೇ ತಾರೀಖಿಗೆ ೩೨ವರ್ಷವಾಯಿತು ಈಗ ೩೩ನೆ ವರ್ಷ ಪ್ರಾರಂಭವಾಗಿದೆ ಈ ೩೨ ವರ್ಷಕಾಲ ನಿರಂತರ ಸಹಕಾರ ನೀಡಿದ ಜೈನಬಾಂಧವರಿಗೆ ಸ್ತ್ರೀ ಪುರುಷರುಗಳಿಗೆ ಹೃತ್ಪೂರ್ವಕವಾದ ವಂದನೆಗಳು ಮತ್ತು ೧೯೮೦ರಿಂದ ಜಿನವಾಣಿ ಸ್ಥಾಯೀ ವ್ಯವಸ್ಥೆಗೆ ಬಹು ಜನರು ಉದಾರವಾಗಿ ಸಹಕಾರ ನೀಡಲು ಮುಂದೆ ಬಂದಿರುತ್ತಾರೆ ನಿಜಕ್ಕೂ ಹರ್ಷದ ಸಂಗತಿಯೇ ಹೌದು ಧರ್ಮಾತ್ಮರಿಲ್ಲದೆ ಧರ್ಮರಕ್ಷಣೆಯಾಗದು ಅದರಂತೆ ತಮ್ಮ ತಮ್ಮ ಕೈಲಾದ ಸಹಕಾರ ನೀಡಿ ನಿರಂತರ ನಡೆಯಲು ಉತ್ತಮ ವ್ಯವಸ್ಥೆ ಮಾಡಿರುತ್ತಾರೆ ಉದಾರವಾಗಿ ಸಹಕರಿಸಿದ ಮಹಾದಾನಿಬಂಧುಗಳಿಗೆ ಹೃತ್ಪೂರ್ವಕವಾದ ಅಭಿನಂದನೆಗಳು

## ಸ್ಥಾಯೀಸದಸ್ಯರು

ಅನೇಕ ಮಂದಿ ಭವ್ಯ ಸ್ತ್ರೀ-ಪುರುಷರು ೧೦೧ರೂಪಾಯಿ ಕೊಟ್ಟು ಸ್ಥಾಯೀ ಸದಸ್ಯರಾಗಿ ಸಹಕರಿಸಿರುತ್ತಾರೆ ೧೦೧ರೂಪಾಯಿ ಕೊಡುವವರು ಚಂದಾ ಹಣ ಕೊಡಬೇಕಾಗಿಲ್ಲ ಈಗ ಚಂದಾಹಣದ ವ್ಯವಸ್ಥೆಯಲ್ಲಿ ಸ್ಥಾಯೀ ಸದಸ್ಯರಾಗಿ ೧೦೧ ರೂಪಾಯಿ ಕೊಟ್ಟಿರುವವರಿಗೆ ಮಾತ್ರ ಜಿನವಾಣಿ ಕಳುಹಿಸುವ ವ್ಯವಸ್ಥೆ

ಮಾಡಲಾಗಿದೆ ೧೯೮೩ನೆ ನವಂಬರ್‌ನಿಂದ ೧೦೧.ರೂಪಾಯಿ ಕೊಡದವರಿಗೆ ಪತ್ರಿಕೆ ಕ್ರಮವಾಗಿ ಸಿಲ್ಲಿಸಲಾಗುತ್ತದೆ. ಇಂದಿನ ದುಬಾರಿ ಖರ್ಚಿನಲ್ಲಿ ಪತ್ರಿಕೆಗಳು ನಡೆಯುವುದೆ ಬಹಳ ಕಷ್ಟ ಹೀಗಿದ್ದರೂ ಬಹುಜನರು ಉತ್ಸಾಹದಿಂದ ಸಹಕರಿಸಿರುತ್ತಾರೆ ಅವರಿಗೆಲ್ಲ ಹೃತ್ಪೂರ್ವಕವಾದ ಅಭಿನಂದನೆಗಳು ಮಾನ್ಯ ಲೇಖಕರುಗಳು ಉದಾರವಾಗಿ ಲೇಖನಗಳನು ಕಳುಹಿಸಿ ಸಹಕರಿಸುತ್ತಿರುವರು. ಅವರುಗಳಿಗೆ ಅಭಿನಂದನೆಗಳು

ಧಾರ್ಮಿಕ ಪತ್ರಿಕೆಗಳಿಂದಾಗುವಷ್ಟು ಧರ್ಮಪ್ರಚಾರಕಾರ್ಯ ಮತ್ಯಾವುದರಿಂದಲೂ ಯಾರಿಂದಲೂ ಸಾಧ್ಯವಾಗದು ಪ್ರಚಾರಕಾರ್ಯಗಳು ಪತ್ರಿಕೆಗಳಿದ್ದರೇನೆ ಆಗಬೇಕು. ಈ ನಮ್ಮ ಧರ್ಮಪ್ರಚಾರ ಕಾರ್ಯಗಳಲ್ಲಿ ತನುಮನಧನಗಳಿಂದ ಸಹಕಾರನೀಡಿದ ಸರ್ವ ಭವ್ಯಬಂಧುಗಳಿಗೆ ಹೃತ್ಪೂರ್ವಕವಾದ ಅಭಿನಂದನೆಗಳು

ಜೈ ಜಿನೇಶ

ಸಂಪಾದಕ, ಜಿನವಾಣಿ



## ಚಾವುಂಡರಾಯ ಪುರಾಣದಲ್ಲಿ ಬರುವ

### ಭಗವಾನ್ ವೃಷಭದೇವನ

## ಅಚ್ಯುತೇಂದ್ರ-ವಜ್ರನಾಭಿಚಕ್ರವರ್ತಿ ಮತ್ತು ಸರ್ವಾರ್ಥ ಸಿದ್ಧಿದೇವ

ಸುವಿಧಿ ಮಹಾರಾಜನು ಶ್ರಾವಕರ ಹನ್ನೊಂದು ಶ್ರಾವಕರ ನೆಲೆಯನ್ನು ಕ್ರಮವಾಗಿ ಆಚರಿಸಿ ಕೊನೆಯಲ್ಲಿ ಸಮಾಧಿಮರಣದಿಂದ ಶರೀರ ತ್ಯಾಗ ಮಾಡಿ ಅಚ್ಯುತೇಂದ್ರನಾಗಿ ೧೬ನೆ ಸ್ವರ್ಗದ ಜನಿಸಿದ್ದನು

ಅಚ್ಯುತೇಂದ್ರನು ೨೨ ಸಾಗರೋಪಮ ಆಯುಷ್ಯ, ೪೪ ತಿಂಗಳಿಗೊಮ್ಮೆ ಉಸಿರಾಡುವುದು ೪೦ ತಿಂಗಳಿಗೊಮ್ಮೆ ಆಹಾರ ಸ್ವೀಕರಿಸುವುದು, ಅಮೂದಿ ಪಟ್ಟ

ಶ್ರೀಯಃರುಳ್ಳವನಾಗಿ ತನ್ನ ಪುಣ್ಯಕ್ಕನುಗುಣವಾಗಿ ಪ್ರಾಪ್ತವಾದ ಸಕಲ ಭೋಗ ಗಳನ್ನು ಅನುಭವಿಸುತ್ತಿದ್ದನು

ಶಾರ್ದೂಲ ಮೊದಲಾದ ೪ ಪ್ರಾಣಿಗಳು ಅಚ್ಯುತ ಸ್ವರ್ಗದಲ್ಲಿ ಸರಾಗ ದೇವರಾಗಿ ಜನಿಸಿ ಅವುಗಳೂ ಸಹ ಸುಖವನ್ನು ಅನುಭವಿಸುತ್ತ ತಮ್ಮ ಕಾಲ ವನ್ನು ಕಳೆಯುತ್ತಿದ್ದನು ಸುವಿಧಿಪುತ್ರ ಶೇಕರನು ಸಹ ಬೇರೊಂದು ಸ್ವರ್ಗದಲ್ಲಿ ಜನಿಸಿ ಸುಖವನ್ನು ಅನುಭವಿಸುತ್ತಿದ್ದನು ಹೀಗೆ ಅಚ್ಯುತೇದ್ರನು ೨೨ಸಾಗರೋ ಪಮ ಕಾಲ ಕಳೆಯುತ್ತಿರಲು ಆಯುಷ್ಯದ ಕೊನೆಯಲ್ಲಿ ಅಕೃತ್ರಿಮ ಚೈತ್ಯಾಲ ಯಗಳ ದರ್ಶನ-ಪೂಜೆ-ಸ್ತುತಿಗಳಿಂದ ಉಳಿದ ಆರು ತಿಂಗಳನ್ನು ಕಳೆದು ಕೊನೆ ಯಲ್ಲಿ ಜಂಬೂದ್ವೀಪದ ಪುಂಡರೀಕನಲ್ಲಿ ಜಯಸೇನವೆಂಬ ರಾಜನಿಗೆ ವಜ್ರನಾಭಿ ಯಾಗಿ ಜನಿಸಿದ್ದನು ಜಯಸೇನನು ಮಗನಿಗೆ ರಾಜ್ಯಭಾರ ವಹಿಸಿ ದೀಕ್ಷಿತನಾ ದನು.

೧೨ ವರ್ಷಗಳ ನಂತರ ಕೇವಲಜ್ಞಾನೋತ್ಪತ್ತಿಯಾಯಿತು. (ತೀರ್ಥಂಕರ ನಾಗಿ) ಕೇವಲಜ್ಞಾನವನ್ನು ಪಡೆದನು. ಅದೇ ದಿನ ವಜ್ರನಾಭಿಗೆ ಚಕ್ರರತ್ನವು ಆದಾಗಿ ಆತಿಶಯವಾದ ಆನಂದದಿಂದ ಇದ್ದನು ಉಳಿದ ಸಾಮಾನಿಕ ದೇವರು ಗಳು ಸಸ ವಜ್ರನಾಭಿಚಕ್ರಿಗೆ ಸಹೋದರರಾಗಿ ಜನಿಸಿದರು. ಕೇಶವನು ಸಹ ಬೇ ರೊಂದು ರಾಜ್ಯದ ರಾಜನಿಗೆ ಪುತನಾಗಿ ಜನಿಸಿದನು.

---

# ಜೈನ ವಿವಿಧ ವಾರ್ತೆಗಳು
# ಮತ್ತು
# ಪ್ರಕಟಣ ವಿಮರ್ಶಾದಿಗಳು

---

**ಸಂತಾಪಸೂಚನೆ-**

ದಿನಾಂಕ: ೧೮ ೮-೧೯೮..ರಂದು ಸ್ವರ್ಗಸ್ಥರಾದ ನ್ಯಾಯಮೂರ್ತಿ ಟಿ. ಕೆ. ತುಕೋಳ್ ಆವರಿಗೆ ಶ್ರೀ ಮಹಾವೀರ ವಿರ್ಷ ಆಶ್ರಯದಲ್ಲೆ ತಾ॥ ೩-೯--೮೩

ರಂದು ಶ್ರೀ ಆದಿನಾಥ ಜೈನ ಮಂದಿರದ ಸಭಾಂಗಣದಲ್ಲಿ ಶ್ರದ್ಧಾಂಜಲಿ ಸಭೆಯನ್ನು ಏರ್ಪಡಿಸಲಾಗಿತ್ತು ಶ್ರೀಮಾನ್ ಜಿ. ಹೆಚ್. ಆದಿರಾಜಯ್ಯನವರು ಸಭೆಯ ಅಧ್ಯಕ್ಷತೆ ವಹಿಸಿದ್ದರು ಶ್ರೀಯುತರಾದ ಜೈ, ನಾರಾಯಣ, ಹಿ/ ಮಾ, ನಾಗಯ್ಯ, ಶ್ರೀಮತಿ ಕನುಲಾ ಹಂಸನಾ, ಡಾ. ಎಂ ಎಸ್ ಅನಂತರಾಜು ಮತ್ತು ಶ್ರೀ ಎ ಎರ್ ಚಂದ್ರಕೀರ್ತಿ ಅವರು ದಿವಂಗತರ ಬಗ್ಗೆ ಮಾತನಾಡಿದರು ಶ್ರೀ ಮಹಾವೀರ ವಿಷನ್ ಅಧ್ಯಕ್ಷರಾದ ಶ್ರೀ ಜೆ ಎಸ್ ಬ್ರಹ್ಮದೇವಯ್ಯನವರು ದಿವಂಗತ ತುಕೋಳ್ ಅವರು ಮಿಷನ್ನಿಗೆ ಸಲ್ಲಿಸಿದ ಅಪಾರ ಸೇವೆಯನ್ನು ನೆನೆಸಿಕೊಂಡು ಅವರ ಗುಣಗಾನ ಮಾಡಿದರು

ಸುದ್ಧಿ: ಕೆ ವೈ ರತ್ನರಾಜ್,
ಶ್ರೀ ಮಹಾವೀರ ಮಿಷನ್, ಬೆಂಗಳೂರು



## ಶ್ರೀ ಕ್ಷೇತದಲ್ಲಿ ಕಾರ್ತಿಕ ದೀಪೋತ್ಸವ

ಶ್ರೀ ಹೊಂಬುಜ ಅತಿಶಯ ಮಹಾಕ್ಷೇತ್ರದಲ್ಲಿ ಕಾರ್ತಿಕ ದೀಪೋತ್ಸವಗಳು ದಿ || ೨೯-೧೧-೮೩ರಂದು ಭಗವಾನ್ ಶ್ರೀ ೧೦೦೮ ಪಾರ್ಶ್ವನಾಥಸ್ವಾಮಿ ಸನ್ನಿಧಿಯಲ್ಲೂ ದಿ|| ೩೦-೧೧-೮೩ರಂದು ಮಹಾದೇವಿ ಶ್ರೀ ಪದ್ಮಾವತಿ ಅಮ್ಮನವರ ಸನ್ನಿಧಿಯಲ್ಲೂ ನೆರವೇರಲಿರುವುದು ಪರಮಪೂಜ್ಯ ಸ್ವಸ್ತಿಶ್ರೀ ಜಗದ್ಗುರು ಶ್ರೀ ಶ್ರೀ ದೇವೇಂದ್ರ ಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯ ಮಹಾಸ್ವಾಮಿಗಳವರ ನೇತೃತ್ವದಲ್ಲಿ ನೆರವೇರಲಿರುವ ಈ ಪೂತಾ ಮಹೋತ್ಸವಗಳಲ್ಲಿ ಭಕ್ತಾದಿಗಳೆಲ್ಲರೂ ಭಾಗವಹಿಸಿ ಪುಣ್ಯಭಾಗಿಗಳಾಗಬೇಕಾಗಿ ಅಪೇಕ್ಷಿಸುತ್ತೇವೆ.

ಇತೀ ತಮ್ಮ ಆಗಮನಾಭಿಲಾಷಿಗಳು,
ವ್ಯವಸ್ಥಾಪಕರು,
ಶ್ರೀ ಹೊಂಬುಜ ಜೈನಮಠ.

---

## ಭುವನಹಳ್ಳಿ ಪದ್ಮನಾಭಶರ್ಮರಿಗೆ ಸರ್ಕಾರದ ಪ್ರಶಸ್ತಿ ಅಭಿನಂದನೆ

ಶ್ರೀ ಭುವನಹಳ್ಳಿ ಶರ್ಮರವರು ಕನ್ನಡದಲ್ಲಿ ಸ್ವತಂತ್ರವಾಗಿ ಕೃಷಿಗಳನು ಗಳಿಸಿರುವುದಲ್ಲದೆ ಅನೇಕ ಸಂಸ್ಕೃತ, ಪ್ರಾಕೃತ ಮತ್ತು ಹಿಂದಿ ಕೃತಿಗಳನ್ನು ಕನ್ನ

ಡಕ್ಕೆ ಭಾಷಾಂತರಿಸಿದ್ದಾರೆ ಬೆಂಗಳೂರಿನ ದಿಗಂಬರ ಜೈನ ಮುಮುಕ್ಷು ಮಂಡಳಿಗೆ ಸುಮಾರು ಮೂವತ್ತಕ್ಕೂ ಹೆಚ್ಚಿನ ಹಿಂದೀ ಪುಸ್ತಕಗಳನ್ನು ಕನ್ನಡಕ್ಕೆ ಅನುವಾದಿಸಿ ಕೊಟ್ಟಿರುತ್ತಾರೆ. "ಆತ್ಮಧರ್ಮ" ಪತ್ರಿಕೆಯನ್ನು ಮೂರು ವರ್ಷಗಳ ವರೆಗೆ ನಡೆಸಿ ಕನ್ನಡನಾಡಿನಲ್ಲಿ ಜನಪ್ರಿಯವಾಗುವಂತೆ ಮಾಡಿದರು. ಅನಂತರ ಕಾರಣಾಂತರದಿಂದ ಅದರಿಂದ ದೂರವಾದರು ಪೂಜ್ಯಪಾದರ "ಸರ್ವಾರ್ಥಸಿದ್ಧಿ" ಎಂಬ ಸಂಸ್ಕೃತದ ಬೃಹತ್ ಕೃತಿಗೆ ಕನ್ನಡದಲ್ಲಿ ವ್ಯಾಖ್ಯಾನ ಬರೆದು ಮುಗಿಸಿದ್ದಾರೆ ಇವರ ಸಾಹಿತ್ಯದಲ್ಲಿ ಸಿದ್ಧಾಂತ, ಸಾಹಿತ್ಯ, ನಾಟಕ, ವ್ಯಾಕರಣ, ಕಾದಂಬರಿ ಮೊದಲಾದ ಎಲ್ಲಾ ಬಗೆಯ ಸಾಹಿತ್ಯಗಳೂ ಹೊರಬಂದಿವೆ. ಇವರು ಕನ್ನಡ ನಾಡಿನ ಜೈನ-ಜೈನೇತರ ಪತ್ರಿಕೆಗಳಿಗೆ ಬರೆದಿರುವ ಲೇಖನಗಳಂತು ಅಪರಿಮಿತ. ಬಹುಶಃ ಎಲ್ಲಾ ಸ್ಮರಣ ಸಂಚಿಕೆಗಳಲ್ಲೂ ವಿದ್ವತ್ಪೂರ್ಣವಾದ ಒಂದು ಲೇಖನ ಇದ್ದೇ ಇರುತ್ತದೆ. ಕಲ್ಕತ್ತ, ಬೊಂಬಾಯಿ, ಡೆಲ್ಲಿ, ಸರ್ದಾರ್‌ಶಹರ, ಅಹಮದಾಬಾದ್ ಮೊದಲಾದ ಉತ್ತಭಾರತದ ಮುಖ್ಯ ನಗರಗಳಲ್ಲೆಲ್ಲಾ ಹಲವಾರು ಧಾರ್ಮಿಕ ಸಮ್ಮೇಳನಗಳಲ್ಲಿ ಭಾಗವಹಿಸಿ ಭಾಷಣಗಳನ್ನು ಮಾಡಿದ್ದಾರೆ ಇಂಥಹ ಸನ್ಮಾನ್ಯ ವಿದ್ವಾಂಸರನ್ನು ಹೊಂದಿರುವುದು ಜೈನ ಸಮಾಜಕ್ಕೆ ಗೌರವ ಮಾತ್ರವೇ ಅಲ್ಲದೇ ಹೆಮ್ಮೆಯೂ ಆಗಿದೆ ಎಂದರೆ ಆಶ್ಚರ್ಯವಲ್ಲ.

### ಸಂಪಾದಕನ ಹರ್ಷ

ಇಂತಹ ಶ್ರೀ ಡಿ. ಪದ್ಮನಾಭಶರ್ಮರಿಗೆ ಕನ್ನಡ ಸೇವೆಗಾಗಿ ಈ ವರ್ಷದ ಅವಾರ್ಡನ್ನು ಕರ್ನಾಟಕ ಸರ್ಕಾರ ಕೊಟ್ಟಿದೆ ಅದಕ್ಕಾಗಿ ಹೆಮ್ಮೆಪಡುತ್ತೇವೆ.

ಸಂಪಾದಕ, ಜಿನವಾಣಿ



ಪರಮ ಪೂಜ್ಯ ಮಹಾಸ್ವಾಮಿಗಳವರ

## ಶ್ರೀ ಸಮ್ಮೇದ ಶಿಖರ್ಜಿ ತೀರ್ಥಯಾತ್ರೆ

ಪರಮ ಪೂಜ್ಯ ಸ್ವಸ್ತಿಶ್ರೀ ದೇವೇಂದ್ರಕೀರ್ತಿ ಭಟ್ಟಾರಕಪಟ್ಟಾಚಾರ್ಯವರ್ಯ ಮಹಾ ಸ್ವಾಮಿಗಳವರು ಶ್ರೀ ಸಮ್ಮೇದ ಶಿಖರ್ಜಿ ಮಹಾಕ್ಷೇತ್ರದ ತಮ್ಮ ಆರನೇ

ತೀರ್ಥಯಾತ್ರೆಯನ್ನು ೨೮-೧೦-೮೩ನೇ ಶುಕ್ರವಾರದಂದು ಯಶಸ್ವಿಯಾಗಿ ಪೂರ್ತಿ ಗೊಳಿಸಿದರು

ಭಟ್ಟಾರಕ ಪರಂಪರೆಯ ಇತಿಹಾಸದಲ್ಲಿಯೇ ಇಷ್ಟೊಂದು ಸಣ್ಣ ವಯಸ್ಸಿನಲ್ಲಿ ಕಷ್ಟಕರವಾದ ಶಿಖರ್ಜಿ ಮಹಾಕ್ಷೇತ್ರದ ಯಾತ್ರೆಯನ್ನು ಹೀಗೆ ೧೩ಬಾರಿ ಪೂರೈಸಿದವರು ಬೇರೊಬ್ಬರಿಲ್ಲ ಪರಮ ಪೂಜ್ಯ ಮಹಾಸ್ವಾಮಿಗಳ ಆಸನ್ನ ಭವ್ಯತೆಗೆ ಇದೊಂದು ಅಪೂರ್ವ ನಿದರ್ಶನ

ಪೂಜ್ಯಶ್ರೀಗಳವರ ಕಾರ್ಯದರ್ಶಿ

---

## ಅಕ್ಷರಾಭ್ಯಾಸ

ರಾಷ್ಟ್ರಪ್ರಶಸ್ತಿ ವಿಜೇತ ಸ್ವರ್ಗೀಯ ಕಾರ್ಕಳ ಶ್ರೀ ಎ ಸುಬ್ಬಯ್ಯಶಾಸ್ತ್ರಿಗಳವರ ಮೊಮ್ಮಗ ಮತ್ತು ಕಾರ್ಕಳದ ವಿಖ್ಯಾತ ನ್ಯಾಯವಾದಿ ಎಂ ಕೆ ವಿಜಯಕುಮಾರ್ ಇವರ ಮಗ ಕುಮಾರ ಸುವ್ರತ ಇವನ ಅಕ್ಷರಾಭ್ಯಾಸ ಕಾರ್ಯಕಮವು ದಿ|| ೧೬-೧೦-೮೩ನೆ ವಿಜಯದಶಮಿಯ ಶುಭದಿನದಂದ ಶ್ರೀ ಹೊಂಬುಜ ಅತಿಶಯ ಮಹಾಕ್ಷೇತದಲ್ಲಿ ನೆರವೇರಿತು

ಪರಮಪೂಜ್ಯ ಮಹಾಸ್ವಾಮಿಗಳವರು ಕುಮಾರ ಬಾಲಕನಿಂದ ಪಂಚಪರಮೇಷ್ಠಿವಾಚಕ ಬೀಜಾಕ್ಷರ ಮಂತ್ರಗಳನ್ನು ಬರೆಸುವುದರ ಮೂಲಕ ಅಕ್ಷರಾಭ್ಯಾಸ ಸಂಸ್ಕಾರವನ್ನು ವಿಧಿವತ್ತಾಗಿ ನೆರವೇರಿಸಿದರು

---

# ಧ ರ್ಮ ಕ ಥಾ ಶ್ರ ವ ಣಂ

## ಧರ್ಮಧ್ಯಾನದ ಉತ್ಕರ್ಷತಾ ವಿಷಯದಲ್ಲಿ

## ಹೇ ಮ ಸೇ ನ ಚ ರಿ ತಂ

**ಚಂಪಾನಗರಿಯಲ್ಲಿನ ಜಿನಧರ್ಮೀಯರ ಹಿರಿಮೆ-**

ಚಂಪಾ ಎಂಬ ಹೆಸರಿನ ನಗರ ಭರತಖಂಡದಲ್ಲಿ ವಿರಾಜಮಾನವಾಗಿತ್ತು. ಆ ಮಹಾನಗರವು ನಿತ್ಯೋತ್ಸವದಿಂದ ಬೆಳಗುತ್ತಿತ್ತು. ಈ ನಗರವು ದಿವ್ಯ ಜಿನಾಲಯಗಳಿಂದ ಕಂಗೊಳಿಸುತ್ತಿತ್ತು; ಮತ್ತು ಜಿನಧರ್ಮವನ್ನು ಆಚರಿಸತಕ್ಕ ಶ್ರಾವಕರುಗಳಿಂದ ಅದು ತುಂಬಿತ್ತು. ನಗರದ ಒಂದು ಭಾಗದಲ್ಲಿ ಬಳ್ಳಿಗಳು ಮತ್ತು ಹಸಿರು ಗಿಡಗಳು ತೂಗಾಡುತ್ತಿದ್ದವು. ನಗರದ ಇನ್ನೊಂದೆಡೆ ಸಮಸ್ತ ಪ್ರಪಂಚದ ದಿಗಂತದಲ್ಲಿ ವಿಹರಿಸುತ್ತಿರುವ ಸುಂದರ ನಾರಿಯರ ವಿಲಾಸ, ಅವರ ಚತುರ ನಡಿಗೆಯ ಕಾಲ್ಗೆಜ್ಜೆಯ ಸುಮಧುರ ನಿನಾದವು ಅಂತರಾಳದಲ್ಲಿ ಗುಂಯ್‌ಗುಡುತ್ತಿತ್ತು ನಗರದ ಮತ್ತೊಂದು ಕಡೆ ಬ್ರಾಹ್ಮಣ, ಕ್ಷತ್ರಿಯ, ಮತ್ತು ವೈಶ್ಯ ವರ್ಗದವರುಗಳಲಿ ಅನುರಾಗವನ್ನು ಹೊಂದಿರುವಂತಹ ಶೂದ್ರಜನರ ಮನೆಗಳಿದ್ದವು. ಮತ್ತೊಂದು ಕಡೆ ಅನೇಕ ದೇಶ-ವಿದೇಶದ ಬುದ್ಧಿವಂತರಾದ ಹಾಗೂ ಜ್ಞಾನಾರ್ಜನೆಯಲ್ಲಿ ಆಸಕ್ತಿಯುಳ್ಳ ವಿಧ್ಯಾರ್ಥಿಗಳು ಅಲ್ಲಿಗೆ ಗುಂಪುಗುಂಪಾಗಿ ಬರುತ್ತಿದ್ದರು. ಈ ನಗರವು ವಿಭಿನ್ನ ವಿಷಯಗಳ ಸಾವಿರಾರು ಅಧಿಕಾರಿಗಳಿಂದಲೂ, ವಿದ್ವಾಂಸರುಗಳಿಂದಲೂ ಅಲಂಕೃತವಾಗಿತ್ತು. ಆ ನಗರವಾಸಿಗಳ ಭವನಗಳು ಚಂದ್ರನಂತೆ ಶುಭ ಜ್ಯೋತಿಯಂತೆ ಕಂಗೊಳಿಸುತ್ತಿದ್ದವು.

**ಹೇಮಸೇನ ಮುನಿಗಳ ತಪಸ್ಸು, ಅವರ ಆಸನ್ನಾವಸಾನದಲ್ಲಿ ಶ್ರಾವಕರ ಮುನಿ ಪೂಜಾ ವೈಭವ-**

ಈ ನಗರದ ಒಂದು ಜಿನಾಲಯದಲ್ಲಿ ಹೇಮಸೇನ ಮುನಿರಾಜರು ಕಠಿಣ ತಪಸ್ಸನ್ನು ಮಾಡುತ್ತಿದ್ದರು. ಈ ರೀತಿಯ ಕಠಿಣ ತಪಸ್ಸನ್ನು ಮಾಡುತ್ತಾ ಅನೇಕ ದಿನಗಳು ಕಳೆದ ನಂತರ ಮುನಿರಾಜರ ಮರಣವು ಸನ್ನಿಹಿತವಾಯಿತು. ಅದನ್ನು ತಿಳಿದ ಎಲ್ಲಾ ಶ್ರಾವಕರು ಒಟ್ಟಿಗೆ ಸೇರಿ ಅವರಿಗೆ ಅನೇಕ ತರಹದ ಫಲ-ಪುಷ್ಪ

ಮೊದಲಾದವುಗಳಿಂದ ಅವರನ್ನು ಪೂಜಿಸತೊಡಗಿದರು.

ಪ್ರಾಣತ್ಯಾಗಾವಸಾನದ ಘಟನೆಯಿಂದ ಮುನಿಗಳಿಗೊದಗಿದ ಭವಾಂತರ-

ಸಂಯೋಗವಶದಿಂದ ಹೇಮಸೇನ ಮುನಿರಾಜರ ಮರಣದ ದಿವಸ ಆ ಚೈತ್ಯಾಲಯದಲ್ಲಿ ಭಗವಾನರ ಪ್ರತಿಮೆಯ ಮುಂದೆ ಒಂದು ಚೆನ್ನಾಗಿ ಮಾಗಿದ ಖರಬೂಜದ ಹಣ್ಣು ಇಟ್ಟಿದ್ದರು. ಆ ಖರಬೂಜದ ಹಣ್ಣು ಎಷ್ಟು ಮಾಗಿತ್ತೆಂದರೆ ಅದರ ವಾಸನೆಯು ಮುನಿರಾಜರ ಹತ್ತಿರ ಬಂದಿತು. ಮತ್ತು ಅವರ ಮನಸ್ಸು ಹಣ್ಣಿನ ಕಡೆ ಹೋಯಿತು. ಆ ಹಣ್ಣನ್ನು ಪಡೆಯುವ ತೀವ್ರ ಆಸೆಯಿಂದ ಪ್ರಾಣ ತ್ಯಾಗ ಮಾಡಿ ಆ ಹಣ್ಣಿನಲ್ಲಿ ಒಂದು ಹುಳುವಾಗಿ ಹುಟ್ಟಿದರು.

ಮುನಿರಾಜರ ಸಂಸ್ಕಾರ, ಚಂದಸೇನಾದಿ ಮುನಿಗಳಲ್ಲಿ ಶ್ರಾವಕರಿಂದ ಹೇಮಸೇನಪರ್ಯಾಯಜ್ಞಾನ ಕುತೂಹಲ ಪ್ರಶ್ನೆ-

ನಂತರ ಶ್ರಾವಕರುಗಳೆಲ್ಲಾ ಒಂದಾಗಿ ಕೂಡಿಕೊಂಡು ದೊಡ್ಡ ಉತ್ಸವದ ಜೊತೆ ಮುನಿರಾಜರ ಶವಸಂಸ್ಕಾರವನ್ನು ಮಾಡಿದರು. ಎರಡನೆ ದಿನ ಎಲ್ಲಾ ಶ್ರಾವಕರು ಜಿನಾಲಯಕ್ಕೆ ಬಂದರು. ಮತ್ತು ಹೇಮಸೇನ ಮುನಿರಾಜರ ಜೊತೆ ಇದ್ದ ಚಂದ್ರಸೇನ ಹಾಗೂ ಅನ್ಯ ಮುನಿಗಳನ್ನು ಕುರಿತು ಈ ಪ್ರಕಾರ ಕೇಳಿದರು– "ಮಹಾರಾಜ", ಹೇಮಸೇನ ಮುನಿಗಳು ಮರಣದ ಸಮಯದವರೆಗೂ ಅತ್ಯಂತ ಕಠಿಣ ತಪಸ್ಸನ್ನು ಮಾಡುತ್ತಿದ್ದರು ಕೃಪೆಯಿಟ್ಟು ಹೇಳಿರಿ- ಈಗ ಅವರು ಯಾವ ಪರ್ಯಾಯವನ್ನು ಹೊಂದಿರುವರು ?

ಚಂದ್ರಸೇನಾದಿಗಳ ಅವಧಿಜ್ಞಾನದಿಂದ ಹೇಮಸೇನರ ಭವಾಂತರ ವಿವರಣ-

ಮುನಿರಾಜರು ಭೂತ-ಭವಿಷ್ಯತ್-ವರ್ತಮಾನ ಕಾಲಗಳನ್ನು ತಿಳಿದವರಾಗಿದ್ದರು. ಅವರು ಅವಧಿಜ್ಞಾನದಿಂದ ಮೋಕ್ಷ, ಸ್ವರ್ಗ ಮತ್ತು ನರಕ ಹಾಗೂ ಎಲ್ಲಾ ಸ್ಥಾನಗಳಲ್ಲಿ ಹೇಮಸೇನ ಮುನಿರಾಜರನ್ನು ಹುಡುಕಿದರೂ, ಆದರೆ ಅಲ್ಲಿ ಸಿಗಲಿಲ್ಲ ಚಂದ್ರಸೇನ ಮೊದಲಾದ ಎಲ್ಲಾ ಮುನಿಗಳಿಗೆ ಆಶ್ಚರ್ಯವಾಯಿತು. ಆದರೆ ಹಾಗೆ ಪುನಃ ಅವಧಿಜ್ಞಾನದ ಶಕ್ತಿಯಿಂದ ತಿಳಿಯಿತು. ಹೇಮಸೇನ ಮುನಿ

ಗಳು ಜಿನಭಗವಾನರ ಮುಂದೆ ಅರ್ಪಿಸಲ್ಪಟ್ಟ ಖರಬೂಜದ ಹಣ್ಣಿನಲ್ಲಿ ಹುಳುವಾಗಿ ಹುಟ್ಟಿದ್ದರು. ಚಂದ್ರಸೇನ ಮುನಿಗಳು ಶ್ರಾವಕರುಗಳಿಗೆ ಹೇಳಿದರು— ಬಂಧು ಗಳೇ, ತಮಗೆ ಇದನ್ನು ತಿಳಿದು ಆಶ್ಚರ್ಯವಾಗಬಹುದು ಏಕೆಂದರೆ ಹೇಮಸೇನ ಮುನಿಗಳು ಇದೇ ಜಿನಾಲಯದಲ್ಲಿ ಜಿನೇಂದ್ರ ಭಗವಾನರ ಮುಂದೆ ಇಟ್ಟಿರುವ ಖರಬೂಜದ ಹಣ್ಣಿನಲ್ಲಿ ಹುಟ್ಟಿದ್ದಾರೆ.

**ಪ್ರತ್ಯಕ್ಷತಃ ಹೇಮಸೇನರ ಭವಾಂತರವನ್ನು ಕಂಡ ಶ್ರಾವಕರಿಂದ ಅದರ ಕಾರಣಪ್ರಶ್ನೆತದ್ವಿವರಣಾದಿಗಳು**

ಚಂದ್ರಸೇನ ಮುನಿಗಳ ಮಾತನ್ನು ಕೇಳಿ ಶ್ರಾವಕರು ಆ ಖರಬೂಜದ ಹಣ್ಣನ್ನು, ಭಗವಾನರ ಹತ್ತಿರ ಇಟ್ಟಿದ್ದ ಹಣ್ಣನ್ನು ಒಡೆದು ನೋಡಿದರು. ಅದ ರಲ್ಲಿ ಒಂದು ಹುಳುವು ಕಾಣಿಸಿತು

ಈ ಘಟನೆಯಿಂದ ಶ್ರಾವಕರಿಗೆ ಅತ್ಯಂತ ಆಶ್ಚರ್ಯವಾಯಿತು. ಅವರು ಚಂದ್ರಸೇನ ಮುನಿಗಳನ್ನು ಕೇಳಿದರು–

ಮಹಾರಾಜ್, ಹೇಮಸೇನ ಮುನಿಗಳು ಅತ್ಯಂತ ಕಠಿಣ ತಪಸ್ಸನ್ನು ಮಾಡಿದ್ದರು ಆದರೆ ಅವರು ಈ ರೀತಿ ಹುಳುವಾಗಿ ಏಕೆ ಹುಟ್ಟಿದರು

ಚಂದ್ರಸೇನ ಮುನಿಗಳು ಹೇಳಿದರು– ಹೇಮಸೇನ ಮುನಿಯು ಮರಣ ದ ಸಮಯದಲ್ಲಿ ಆತ್ಮಧ್ಯಾನವನ್ನು ಮಾಡದೇ ಖರಬೂಜದ ಹಣ್ಣನ್ನು ಪಡೆಯುವ ಆಸೆಯಿಂದ ಪ್ರಾಣತ್ಯಾಗ ಮಾಡಿದ ಕಾರಣ ಅವರು ಹುಳುವಾಗಿ ಹುಟ್ಟಿದರು.

**ಧ್ಯಾನದ ವಿಭಿನ್ನ ರೂಪಗಳು, ಮೋಕ್ಷೋಪಾಯ ಶುಕ್ಲಧ್ಯಾನದ ಹಿರಿಮೆ**

ಉಗ್ರತಪಸ್ಸು ಒಂದು ಮಹತ್ವವಾದ ವಸ್ತುವಾಗಿದೆ. ಆದರೆ ಅದಕ್ಕಿಂತಲೂ ಮಹತ್ವವಾದುದು ಧ್ಯಾನದಲ್ಲಿ ಏಕಾಗ್ರತೆಯನ್ನು ಹೊಂದುವುದು. ಶಾಸ್ತ್ರದಲ್ಲಿ ಹೇಳಿ ದ್ದಾರೆ-

ಆರ್ತ-ಧ್ಯಾನದಿಂದ ಪಶುಪರ್ಯಾಯವು ಸಿಗುತ್ತದೆ. ಹಾಗೂ ರೌದ್ರಧ್ಯಾನದಿಂದ ನರಕವು ಲಭಿಸುತ್ತದೆ. ಧರ್ಮಧ್ಯಾನದಿಂದ ದೇವಗತಿಯು ಪ್ರಾಪ್ತಿಯಾಗುತ್ತದೆ ಶುಕ್ಲಧ್ಯಾನದಿಂದ ಮನುಷ್ಯನು ಮೋಕ್ಷವನ್ನು ಹೊಂದುತ್ತಾನೆ.

ಹಿತವಚನ—

ಆದ್ದರಿಂದ ಭವ್ಯ ಜೀವಿಗಳೇ ಒಂದುವೇಳೆ ನಿಮಗೆ ಶುಭ ಗತಿಯನ್ನು ಹೊಂದುವ ಇಚ್ಛೆ ಇದ್ದಲ್ಲಿ ಅಥವಾ ಆತ್ಮಕಲ್ಯಾಣದ ಇಚ್ಛೆ ಇದ್ದಲ್ಲಿ ಆರ್ತ-ರೌದ್ರ ಧ್ಯಾನವನ್ನು ಬಿಟ್ಟು ಶುಭೋಪಯೋಗರೂಪದ ಧರ್ಮಧ್ಯಾನ ಹಾಗೂ ಶುಕ್ಲಧ್ಯಾನದಲ್ಲಿ ತತ್ಪರರಾಗಿರಿ

## ದೂರಭವ್ಯ ಆಸನ್ನಭವ್ಯ ವಿಚಾರಂ

ಜೀವನು ಸುಖಪಡುವುದಕ್ಕೆ ಇಚ್ಛಿಸುತ್ತಾನೆ. ಆದರೆ ದುಃಖವನ್ನು ಅಥವಾ ಮರಣವನ್ನು ಹೊಂದಲು ಇಚ್ಛಿಸುವುದಿಲ್ಲ ಆದರೂ ಆಯುಷ್ಯಕರ್ಮವು ಮುಗ್ಗಿಯುತ್ತಿದ್ದಂತೆಯೇ ಈಗಿನ ಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಧಾರಣೆ ಮಾಡುತ್ತಾನೆ. ಉದಾ ವೃಷಭದೇವನ ಜೀವವು ಜಯವರ್ಮನಾಗಿದ್ದೂ ರಾಜ್ಯಾಭಿಷೇಕವಾಗಲಿಲ್ಲವೆಂದು ಜಿನದೀಕ್ಷಿತನಾಗಿ ಸರ್ಪದಿಂದ ಕಚ್ಚಲ್ಪಟ್ಟು ನಿಧಾನಶಲ್ಯದಿಂದ ವಿದ್ಯಾಧರ ಚಕ್ರವರ್ತಿಯಾಗಿ ಮಗನಾಗಿ ಹುಟ್ಟಿದನು. ಹೀಗೆಯೇ ಮುಂದುವರೆಯುತ್ತಾ ಮತ್ತೆ ಲಲಿತಾಂಗದೇವನಾಗುತ್ತಾನೆ: ಅಲ್ಲಿಂದ ಬಂದು ವಜ್ರಜಂಘನಾಗಿ ವಜ್ರಜಂಘ ಆರ್ಯಕನಾಗಿದ್ದು ಅಲ್ಲಿ ಸಮ್ಯಕ್ತ್ವವನ್ನು ಪಡೆದು ಕ್ರಮವಾಗಿ ಶ್ರೀಧರ ದೇವ, ಸುವಿಧಿರಾಜ ಅಚ್ಯುತೇಂದ್ರ ವಜ್ರನಾಭಿಚಕ್ರಿ, ಸರ್ವಾರ್ಥಸಿದ್ಧಿ ವೃಷಭದೇವನಾಗಿದ್ದು ಮುಕ್ತಿ ಪಡೆಯುತ್ತಾನೆ. ಜಯವರ್ಮನಿಂದ ವೃಷಭದೇವನಾಗುವವರೆಗೆ ೫೭ ಸಾಗರೋಪಮಕಾಲ ಹಿಡಿಯುತ್ತದೆ. ಆದರೂ ಭವ್ಯನಾಗಿ ಮುಕ್ತಿಸಾಧಿಸಿಬಿಟ್ಟನು

ಅಭವ್ಯರಿಗೆ ಯಾವತ್ತೂ ಮುಕ್ತಿಯಿಲ್ಲ. ಅವರುಗಳು ಸಂಸಾರದಲ್ಲೇ ತಿರುಗುತ್ತಿರುತ್ತಾರೆ. ಮಾನವರು ಸಮಯಸಿಕ್ಕಿದಾಗ ಆತ್ಮಸಂರಕ್ಷಣೆಮಾಡಿಕೊಳ್ಳುತ್ತಾನೆ.

(೩೦ನೇ ಪುಟನೋಡಿ)

ಓಂ ನಮಸ್ಸಿದ್ಧೇಭ್ಯಃ

# ತ್ರಿಲೋಕ ದರ್ಶನ

ಲೇಖಕರು:

ಡಿ. ಶ್ರೀಪತಿಜೋಯಿಸ್,
ಭುವನಹಳ್ಳಿ.

ಸಿದ್ಧಿಪ್ರದಾನಿ ಜೈತ್ಯಾನಿ ಯಾವಂತಿ ಭುವನತ್ರಯೇ ।
ತಾವಂತಿ ಶಿರಸಾ ವಂದೇ ನಿತ್ಯಂ ಸರ್ವಾರ್ಥಸಿದ್ಧಯೇ ॥

ಪಾಶ್ಚಾತ್ಯ ದಾರ್ಶನಿಕ ಅರಸ್ತು ಹೇಳಿದ್ದಾನೆ. "ದರ್ಶನದ ಪ್ರಾರಂಭ ಆಶ್ಚರ್ಯದಿಂದ ಆಗುತ್ತದೆ" ನಿಜಕ್ಕೂ ಈ ಚಿತ್ರ-ವಿಚಿತ್ರ ವಿಶ್ವ ಮತ್ತು ವಿಶ್ವದ ಕ್ರಿಯಾಕಲಾಪಗಳನ್ನು ನೋಡಿ ಮಾನವನ ಬುದ್ಧಿಯು ಚಕಿತಗೊಳ್ಳುವುದು. ಆ ಕಾರಣ ಈ ಸಂಬಂಧವಾಗಿ ನಾನಾ ಪ್ರಕಾರದ ಕಲ್ಪನೆಯನ್ನು ಮಾಡಿಕೊಳ್ಳುತ್ತಾನೆ ಒಬ್ಬ ಜಗತ್ತು ಬ್ರಹ್ಮಮಯ ಎಂದರೆ ಮತ್ತೊಬ್ಬ ಇದು ಈಶ್ವರ ಸೃಷ್ಟಿ ಎನ್ನುತ್ತಾನೆ ಇನ್ನೊಬ್ಬ ಇದು ಅನಾದಿ ಎಂದರೆ ಮಾಯಾಮಯವೆಂದೂ, ಅವ್ಯಾಕೃತವೆಂದೂ, ಭಾವಿಸುವವರೂ ಇದ್ದಾರೆ

ಜೈನ ದರ್ಶನದಲ್ಲಿ ಅಹಿಂಸೆ ಅನೇಕಾಂತವಾದ ಕರ್ಮಸಿದ್ಧಾಂತ, ಅಪರಿಗ್ರಹಗಳಂಥ ಲೋಕೋಪಕಾರೀ ಸಿದ್ಧಾಂತಗಳ ನಿರೂಪಣೆ ಮಾಡಲಾಗಿದೆ ಅದೇ ಪ್ರಕಾರ ಲೋಕ ಮತ್ತು ಅದರ ರಚನೆಯ ಸಂಬಂಧದಲ್ಲೂ ವಿಶಾಲ ಸಾಹಿತ್ಯ ನಿರ್ಮಾಣವಾಗಿದೆ ಭಗವಾನ್ ಮಹಾವೀರಸ್ವಾಮಿಯು ತಮ್ಮ ದಿವ್ಯವಾಣಿಯಲ್ಲಿ ಪ್ರತಿಪಾದಿಸಿರುವ ವಿಷಯಗಳಲ್ಲಿ ದೃಷ್ಟಿವಾದ ಎಂಬ ಹೆಸರಿನ ಒಂದು ಭಾಗವುಂಟು ಇದರಲ್ಲಿ ಐದು ಭೇದಗಳು:- ಪರಿಕರ್ಮ, ಸೂತ್ರ, ಪ್ರಥಮಾನುಯೋಗ, ಪೂರ್ವಗತ ಮತ್ತು ಚೂಲಿಕಾ ಎಂದು ಇವುಗಳಲ್ಲಿ ಪರಿಕರ್ಮದಲ್ಲಿ ಗಣಿತ ಸೂತ್ರಗಳ ವರ್ಣನೆ ಇದೆ ಇದರಲ್ಲೂ ಐದು ಭೇದಗಳಿವೆ ಅವುಗಳು ಚಂದ್ರಪ್ರಜ್ಞಪ್ತಿ, ಸೂರ್ಯಪ್ರಜ್ಞಪ್ತಿ, ಜಂಬೂದ್ವೀಪ ಪ್ರಜ್ಞಪ್ತಿ, ದ್ವೀಪಸಾಗರ ಪ್ರಜ್ಞಪ್ತಿ ಮತ್ತು ವ್ಯಾಖ್ಯಾನ ಪ್ರಜ್ಞಪ್ತಿ

ಚಂದ್ರಪ್ರಜ್ಞಪ್ತಿಯಲ್ಲಿ ಚಂದ್ರನಿಗೆ ಸಂಬಂಧಿಸಿದಂತೆ ವಿಮಾನ, ಆಯುಷ್ಯ ಕ್ಷೀಣ, ವೃದ್ಧಿ, ಗ್ರಹಣ, ಮುಂತಾದವುಗಳ ವರ್ಣನೆ ಇದೆ ಸೂರ್ಯಪ್ರಜ್ಞಪ್ತಿಯಲ್ಲಿ ಸೂರ್ಯನ ವಯಸ್ಸು, ಪರಿವಾರ, ಚಲನೆ. ಮುಂತಾದವುಗಳ ವರ್ಣನೆ ಇದೆ. ಜಂಬೂದ್ವೀಪ ಪಜ್ಞಪ್ತಿಯಲ್ಲಿ ಇದರ ಸಂಬಂಧವ, ಮೇರುಪರ್ವತ, ಕುಂಡವನ, ವ್ಯಂತರರ ನಿವಾಸಸ್ಥಾನ, ಮಹಾನದಿ ಮುಂತಾದವುಗಳ ವರ್ಣನೆ ಇದೆ ದ್ವೀಪಸಾಗರಪ್ರಜ್ಞಪ್ತಿಯಲ್ಲಿ ಅಸಂಖ್ಯಾತ ದ್ವೀಪ, ಸಮುದ್ರಗಳ ಸ್ವರೂಪ ಮತ್ತು ಅಲ್ಲಿ ಆಗುವ ಅಕೃತ್ರಿಮ ಚೈತ್ಯಾಲಯದ ವರ್ಣನೆ ಇದೆ ವ್ಯಾಖ್ಯಾನಪ್ರಜ್ಞಪ್ತಿಯಲ್ಲಿ ಭವ್ಯ,ಅಭವ್ಯ ಭೇದ, ಪ್ರಮಾಣ, ರೂಪಿ-ಅರೂಪಿ, ಜೀವ-ಅಜೀವ ದ್ರವ್ಯಗಳ ಮತ್ತು ಬೇರೆ ವಸ್ತುಗಳ ವರ್ಣನೆ ಇದೆ

ಇದರ ಆಧಾರದಿಂದ ಆಚಾರ್ಯರು ತಿಲೋಯಪಣ್ಣತ್ತಿ ಎಂಬ ಪ್ರಾಕೃತ ಅನುಪಮ ಗ್ರಂಥವ ರಚನೆ ಮಾಡಿದ್ದಾರೆ ಸಿದ್ಧಾಂತ ಚಕ್ರವರ್ತಿ ನೇಮಿಚಂದ್ರಾಚಾರ್ಯರು ಧವಲ ಮುಂತಾದ ಗ್ರಂಥಗಳ ಅಧ್ಯಯನದಿಂದ ಗೊಮ್ಮಟಸಾರ, ಜೀವಕಾಂಡ, ಕರ್ಮಕಾಂಡ ಲಬ್ಧಿಸಾರ, ಕ್ಷಪಣಸಾರ ಮುಂತಾದ ಅದ್ವಿತೀಯ ಜಿನವಾಣಿಯ ಸಾರಭೂತ ಸಾಹಿತ್ಯವನ್ನು ಸೃಷ್ಟಿಸಿದ್ದಾರೆ ಇದೆ ಪ್ರಕಾರ ಲೋಕ ಮತ್ತು ಅದರ ರಚನೆ ಸಂಬಂಧವಾಗಿ ಅಸಾಧಾರಣ ಗ್ರಂಥ ತ್ರಿಲೋಕಸಾರದ ರಚನೆಯೂ ಆಗಿದೆ ಸರ್ವಾರ್ಥಸಿದ್ಧಿ, ರಾಜವಾರ್ತಿಕ ಮತ್ತು ಶ್ಲೋಕವಾರ್ತಿಕಗಳಲ್ಲೂ ಈ ವಿಷಯದ ಸುಂದರ ಪ್ರತಿಪಾದನೆಯಾಗಿದೆ ಉಮಾಸ್ವಾಮಿಯವರ ಜಂಬೂದ್ವೀಪ ಸಮಾಸ ಜಿನಭದ್ರ ವಿರಚಿತ ಸಂಘಾಯಣಿ, ಬೃಹತ್ಕ್ಷೇತ್ರ ಸಮಾಸ, ಹರಿಶ್ಚಂದ್ರಕೃತ ಜಂಬೂದ್ವೀಪ ಸಂಗ್ರಹಣಿ ಮುಂತಾದ ಗ್ರಂಥಗಳೂ ಜೈನ ದರ್ಶನದ ರೀತ್ಯಾ ಲೋಕಗಳ ವರ್ಣನೆಯನ್ನು ಬಣ್ಣಿಸಿವೆ

ಈ ಎಲ್ಲಾ ಉಪಲಬ್ಧ ಮಹರ್ಘ ಗ್ರಂಥಗಳ ಆಧಾರದಿಂದ ಮುಂದೆ ತ್ರಿಲೋಕಗಳ ವರ್ಣನೆಯನ್ನು ಸರಳವಾಗಿ ನಿರೂಪಿಸಲು ಪ್ರಯತ್ನಿಸಲಾಗಿದೆ

## ಸಾಮಾನ್ಯಲೋಕದ ವರ್ಣನೆ

ಸರ್ವಜ್ಞನಾದ ಭಗವಂತನ ದಿವ್ಯದೃಷ್ಟಿಯು ಅನಂತಾನಂತವಾದ ಅಲೋಕಾಕಾಶದ ಮಧ್ಯಭಾಗದಲ್ಲಿ ೩೪೩ ರಾಜುಪ್ರಮಾಣದ ಪುರುಷಾಕಾರವಾದ ಲೋಕಾಕಾಶವಿದೆ ಈ ಲೋಕಾಕಾಶವು ಜೀವ, ಪುದ್ಗಲ, ಧರ್ಮ ಮತ್ತು ಅಂತ್ಯಗಳಿಲ್ಲದ ಅನಾದಿ ಅನಂತವಾಗಿದೆ; ಸ್ವಭಾವದಿಂದಲೇ ಉತ್ಪನ್ನವಾಗಿದೆ ಆರು ದ್ರವ್ಯಗಳಿಂದ

ಕೂಡಿದ ಈ ಲೋಕಾಕಾಶದ ಸ್ಥಾನ ನಿಶ್ಚಯವಾಗಿಯೂ ಸ್ವತಃ ಪ್ರಧಾನವಾಗಿದೆ ಇದರ ಎಲ್ಲಾ ದಿಕ್ಕುಗಳಲ್ಲೂ ನಿಯಮದಂತೆ ಅಲೋಕಾಕಾಶ ಇದೆ

ಈ ಲೋಕದಲ್ಲಿ ಮೂರು ಭೇದಗಳಿವೆ- ಅಧೋಲೋಕ, ಮಧ್ಯಲೋಕ ಮತ್ತು ಊರ್ಧ್ವಲೋಕ

ಅಧೋಲೋಕದ ಆಕಾರ ಸ್ವಭಾವದಿಂದ ವೇತ್ರಾಸನದ ಸಮಾನವಾಗಿದೆ. ಮಧ್ಯ ಲೋಕದ ಆಕಾರ ನಿಲ್ಲಿಸಿರುವ ಮೃದಂಗದ ಮೇಲ್ಭಾಗದ ಸಮಾನವಾಗಿದೆ. ಊರ್ಧ್ವ ಲೋಕದ ಆಕಾರ ನಿಲ್ಲಿಸಿರುವ ಮೃದಂಗದ ಸಮಾನವಾಗಿದೆ

ಸಂಪೂರ್ಣ ಲೋಕದ ಎತ್ತರ ೧೪ ರಾಜೂ ಪ್ರಮಾಣದಲ್ಲಿದೆ ಮತ್ತು ದಪ್ಪ ಎಲ್ಲಾ ಕಡೆಯೂ ೭ ರಾಜೂ ಇದೆ

## ಮೂರುಲೋಕದ ಜಡಭಾಗದಿಂದ ಲೋಕದ ಎತ್ತರದ ಪ್ರಮಾಣ

ಅಧೋಲೋಕದ ಎತ್ತರ ೭ ರಾಜು, ಮಧ್ಯಲೋಕದ ಎತ್ತರ ೧ಲಕ್ಷದ ೪೦ ಯೋಜನ, ಊರ್ಧ್ವಲೋಕದ ಎತ್ತರ ೭ ರಾಜು ಪ್ರಮಾಣದಲ್ಲಿದೆ ಅಸಂಖ್ಯ ಯೋಜನಗಳಿಗೆ ೧ ರಾಜೂ ಆಗುತ್ತದೆ ೧೪ ರಾಜೂ ಎತ್ತರದ ಲೋಕದಲ್ಲಿ ೭ ರಾಜುವಿನಲ್ಲಿ ನರಕ ಮತ್ತು ೭ ರಾಜುವಿನಲ್ಲಿ ಸ್ವರ್ಗವಿದೆ ಈ ಎರಡರ ಮಧ್ಯದಲ್ಲಿ ಒಂದು ಲಕ್ಷದ ೪೦ ಯೋಜನದಲ್ಲಿ ಸುಮೇರು ಪರ್ವತವಿದೆ ಇದೇ ಸುಮೇರು ಪ್ರಮಾಣದ ಎತ್ತರದ ಮಧ್ಯಭಾಗದಲ್ಲಿ ಯಾವುದು ಊರ್ಧ್ವಲೋಕದ ಸ್ವಲ್ಪ ಭಾಗವಾಗಿದೆಯೋ ಅದು [illegible] ಯಾವುದಕ್ಕೂ ಸಮಾನವಲ್ಲ ಆದ್ದರಿಂದ ಎತ್ತರದ ವರ್ಣನೆಯಲ್ಲಿ ೭ ರಾಜುವಿನಲ್ಲಿ ಅಧೋಲೋಕ ಮತ್ತು ೭ ರಾಜುವಿನಲ್ಲಿ ಊರ್ಧ್ವ ಲೋಕ ಎಂದು ಹೇಳಲಾಗುತ್ತದೆ

## ಲೋಕದಲ್ಲಿ ಅಗಲದ ಪ್ರಮಾಣ

ನರಕದ ಕೆಳ ಭಾಗದಲ್ಲಿ ಅಗಲ= ಏಳು ರಾಜು ಇದೆ ಕಮ್ಮಿಯಾಗುತ್ತಾ ಆಗುತ್ತ ಈ ಅಗಲ ಮಧ್ಯಲೋಕದಲ್ಲಿ ಒಂದು ರಾಜುವಿನಷ್ಟು ಇದೆ ಪುನಹ

ಮಧ್ಯಲೋಕದಲ್ಲಿ ಮೇಲೆ ಮೇಲೆ ಹೆಚ್ಚುತ್ತಾ ಹೆಚ್ಚುತ್ತಾ ೫ನೇ ಬ್ರಹ್ಮಸ್ವರ್ಗದ ತನಕ ಅಗಲ ೫ ರಾಜೂ ತನಕ ಆಗಿಹೋಗಿದೆ ೫ನೇ ಬ್ರಹ್ಮಸ್ವರ್ಗದಿಂದ ಮುಂದೆ ಕಮ್ಮಿಯಾಗುತ್ತಾ ಆಗುತ್ತಾ ಸಿದ್ಧಶಿಲೆ ತನಕ ಅಗಲ ಪುನಃ ಒಂದು ರಾಜುವಿನಷ್ಟು ಇದೆ.

## ತ್ರಸನಾಲಿಗಳ ಪ್ರಮಾಣ

ಮೂರು ಲೋಕಗಳ ಮಧ್ಯಭಾಗದಲ್ಲಿ ಸರಿಯಾಗಿ ೧ ರಾಜೂ ಅಗಲ ಒಂದು ರಾಜೂ ದಪ್ಪ ಮತ್ತು ಸ್ವಲ್ಪ ಕಡಿಮೆ ೧೩ ರಾಜು ಎತ್ತರದ ತ್ರಸನಾಲಿ ಇದೆ ಈ ತ್ರಸ ನಾಲಿಯಲ್ಲಿಯೇ ತ್ರಸ ಜೀವಿಗಳಿವೆ.

## ಅಧೋಲೋಕದ ರಾಜುವಿನ ವರ್ಣನೆ

ಮೃದಂಗಾಕಾರದ ಅಧೋಲೋಕದಲ್ಲಿ ರತ್ನಪ್ರಭಾ, ಶರ್ಕರಾಪ್ರಭಾ, ವಾಲ್ಕಾಪ್ರಭಾ, ಪಂಕ ಪ್ರಭಾ, ಧೂಮ ಪ್ರಭಾ, ತಮಃ ಪ್ರಭಾ ಮತ್ತು ಮಹಾ ತಮಃ ಪ್ರಭಾ ಎಂಬ ಈ ಏಳು ಪೃಥ್ವಿಗಳಿವೆ ಈ ಭೂಮಿಗಳ ದಪ್ಪ ಕಮ್ಮಿ ಎಂದರೆ ಒಂದು ಲಕ್ಷದ ಎಂಬತ್ತು ಸಾವಿರ ಯೋಜನ, ಮೂವತ್ತೆರಡು ಸಾವಿರ ಯೋಜನ, ನಲವತ್ತೆಂಟು ಸಾವಿರ ಯೋಜನ ಮುಂತಾಗಿದೆ. ಮಧ್ಯಲೋಕದ ಕೆಳಭಾಗದಿಂದ ಹಿಡಿದು ಮೊದಲನೆ ರಾಜು ಶರ್ಕರ-ಭೂಮಿಯ ಕೆಳಭಾಗದಲ್ಲಿ ಪೂರ್ಣವಾಗುತ್ತದೆ ಅಂದರೆ ಒಂದು ರಾಜುವಿನಲ್ಲಿ ರತ್ನಪ್ರಭ ಮತ್ತು ಶರ್ಕರ ಪ್ರಭ. ಈ ಎರಡೂ ಪೃಥ್ವಿಗಳೂ ಇವೆ ಇದರ ಮುಂದೆ ೨ನೇ ರಾಜು ಪ್ರಾರಂಭವಾಗಿ ವಾಲುಕಾ ಪ್ರಭಾದ ಕೆಳಭಾಗದಲ್ಲಿ ಪೂರ್ಣವಾಗುತ್ತದೆ ೩ನೇ ರಾಜೂ ಪಂಕಪ್ರಭ ಪೃಥ್ವಿಯ ಕೆಳಭಾಗದಲ್ಲಿ ಕೊನೆಗೊಳ್ಳುತ್ತದೆ ಇದರ ನಂತರ ೪ನೆಯ ರಾಜು ಧೂಮ ಪ್ರಭಾದ ಕೆಳಭಾಗದಲ್ಲಿ, ೫ನೇ ರಾಜು ತಮಃ ಪ್ರಭಾದ ಕೆಳಭಾಗದಲ್ಲಿ, ೬ನೇ ರಾಜು ಮಹಾತಮಃ ಪ್ರಭಾದ ಕೊನೆಯಲ್ಲಿ ಮತ್ತು ೭ನೇ ರಾಜೂ ಅಧೋಲೋಕದ ಕೆಳಭಾಗದಲ್ಲಿ ಕೊನೆಗೊಳ್ಳುತ್ತವೆ. ಅಂದರೆ ಒಂದನೇ ರಾಜುವಿನಲ್ಲಿ ಎರಡು ನರಕ, ಐದನೇ ರಾಜುಗಳಲ್ಲಿ ನಾಲ್ಕು ನರಕ, ಆರನೇ ರಾಜುವಿನಲ್ಲಿ ಏಳನೇ ನರಕ ಮತ್ತು ಕೊನೆಯ ಒಂದು ರಾಜುವಿನಲ್ಲಿ ನಿಗೋಧ ಭಾಗ ಇರುತ್ತದೆ ಅದು ಹೀಗೆ:-

೧ ರಾಜುವಿನಲ್ಲಿ- ರತ್ನ ಪ್ರಭಾ, ಶರ್ಕರಾ ಪ್ರಭಾ
೧ ರಾಜುವಿನಲ್ಲಿ- ವಾಲುಕಾ ಪ್ರಭಾ
೧ ರಾಜುವಿನಲ್ಲಿ- ಪಂಕ ಪ್ರಭಾ
೧ ರಾಜುವಿನಲ್ಲಿ- ಧೂಮ ಪ್ರಭಾ
೧ ರಾಜುವಿನಲ್ಲಿ- ತಮಃ ಪ್ರಭಾ
೧ ರಾಜುವಿನಲ್ಲಿ- ಮಹಾತಮಃ ಪ್ರಭಾ
೧ ರಾಜುವಿನಲ್ಲಿ- ನಿತ್ಯನಿಗೋಧ

## ಅಧೋಲೋಕದಿಂದ ಮಧ್ಯಲೋಕ ತನಕದ ಅಗಲವು ಕಡಿಮೆಯಾಗುವ ಕ್ರಮ

ಅಧೋಲೋಕದ ಕೆಳಭಾಗದಲ್ಲಿ- ೭ ರಾಜು
ಏಳನೆ ಭೂಮಿಯ ಹತ್ತಿರ- ೬ ೧/೭
ಆರನೆ ಭೂಮಿಯ ಹತ್ತಿರ- ೫ ೨/೭ ರಾಜು
ಐದನೇ ಭೂಮಿಯ ಹತ್ತಿರ- ೪ ೩/೭ ರಾಜು
ನಾಲ್ಕನೆ ಭೂಮಿ ಹತ್ತಿರ- ೩ ೪/೭ ರಾಜು
ಮೂರನೇ ಭೂಮಿ ಹತ್ತಿರ- ೩ ೫/೭ ರಾಜು
ಎರಡನೇ ಭೂಮಿ ಹತ್ತಿರ- ೧ ೬/೭ ರಾಜು
ಒಂದನೇ ಭೂಮಿ ಹತ್ತಿರ- ೧ ರಾಜು ಮಾತ್ರ
ಪೂರ್ಣ ಮಧ್ಯಲೋಕದ ಅಗಲ ಒಂದು ರಾಜು ಮಾತ್ರ

## ಊರ್ಧ್ವ ಲೋಕದ ರಾಜುವಿನ ಪ್ರಮಾಣದ ವರ್ಣನೆ

ಮಧ್ಯಲೋಕದ ಮೇಲ್ಭಾಗದಿಂದ ಸೌಧರ್ಮ ವಿಮಾನದ ಧ್ವಜ ದಂಡದ ತನಕ ೧ ಲಕ್ಷ ೪೦ ಯೋಜನ ಕಡಿಮೆ ೧ ೧/೨ ರಾಜು ಪ್ರಮಾಣದ ಎತ್ತರ ಇದೆ ಇದರ ಮುಂದೆ ಮಾಹೇಂದ್ರ ಮತ್ತು ಸನತ್ಕುಮಾರದ ಮೇಲು ಭಾಗದ ತನಕ ೧ ೧/೨ ರಾಜು ಪೂರ್ಣವಾಗುತ್ತದೆ. ಅನಂತರ ಬ್ರಹ್ಮೋತ್ತರದ ಮೇಲು ಭಾಗದಲ್ಲಿ ೧/೨ ರಾಜು, ಕಾಪಿಷ್ಠದ ಮೇಲು ಭಾಗದಲ್ಲಿ ೧/೨ ರಾಜು, ಮಹಾ ಶುಕ್ರದ ಮೇಲು ಭಾಗದಲ್ಲಿ ೧/೨ ರಾಜು ಮತ್ತು ಮತ್ತು ಸಹಸ್ರಾರದ ಮೇಲು

ಭಾಗದ್ದಲ್ಲಿ ೧/೨ ರಾಜು, ಆನತದ ಮೇಲು ಭಾಗದಲ್ಲಿ ಅರ್ಧ ರಾಜು, ಆರಣದ ಮೇಲು ಭಾಗದಲ್ಲಿ ಅರ್ಧ ರಾಜು ಸಮಾಪ್ತವಾಗುತ್ತದೆ ಪುನಃ ೧ ರಾಜುವಿನ ಎತರದಲ್ಲಿ ೯ ಗ್ರೈವೇಯಕ, ೯ ಅನುದಿಶ ೫ ಅನುತ್ತರ ಮತ್ತು ೧ ಸಿದ್ಧ ಶಿಲೆ ಇದೆ. ಅದು ಹೀಗೆ:-

ಸ್ವಲ್ಪ ಕಡಿಮೆ ೧ ೧/೨ ರಾಜುವಿನಲ್ಲಿ- ಸೌಧರ್ಮ, ಈಶಾನ್ಯ ಸ್ವರ್ಗ
೧/೨ ರಾಜುವಿನಲ್ಲಿ- ಬ್ರಹ್ಮ-ಬ್ರಹ್ಮೋತ್ತರ ಸ್ವರ್ಗ
೧/೨ ರಾಜುವಿನಲ್ಲಿ- ಲಾಂತವ, ಕಾಪಿಷ್ಠ ಸ್ವರ್ಗ
೧/೨ ರಾಜುವಿನಲ್ಲಿ- ಶುಕ್ರ, ಮಹಾಶುಕ್ರ ಸ್ವರ್ಗ
೧/೨ ರಾಜುವಿನಲ್ಲಿ- ಸತಾರ, ಸಹಸ್ರಾರ ಸ್ವರ್ಗ
೧/೨ ರಾಜುವಿನಲ್ಲಿ- ಆನತ, ಪ್ರಾಣತ ಸ್ವರ್ಗ
೧/೨ ರಾಜುವಿನಲ್ಲಿ- ಆರಣ, ಅಚ್ಯುತ ಸ್ವರ್ಗ
೧ ರಾಜುವಿನಲ್ಲಿ- ೯ ಗ್ರೈವೇಯಕ, ೯ ಅನುದಿಶ, ೫ ಅನುತ್ತರ ಮತ್ತು ಸಿದ್ಧಶಿಲಾ ಪೃಥ್ವಿ ಇದೆ.

ಒಟ್ಟು: ೧ ೧/೨ + ೧ ೧/೨ + ೧/೨ + ೧/೨ + ೧/೨ + ೧/೨ + ೧/೨ + ೧/೨ ೧ = ೭

## ಪ್ರಥಮ ಸ್ವರ್ಗದಿಂದ ಸಿದ್ಧಶಿಲಾತನಕ ಲೋಕದ ಅಗಲ ಹೆಚ್ಚು-ಕಡಿಮೆಯ ಕ್ರಮ

ಮಧ್ಯಲೋಕದಲ್ಲಿ ೧ ರಾಜು
ಸೌಧರ್ಮ, ಈಶಾನ್ಯ ಸ್ವರ್ಗದ ಕೊನೆಯಲ್ಲಿ ಅಗಲ- ೨ ೫/೭ ರಾಜು
ಸನತ್ಕುಮಾರ, ಮಹೇಂದ್ರದ ಕೊನೆಯಲ್ಲಿ ಅಗಲ- ೪ ೩/೭ ರಾಜು
ಬ್ರಹ್ಮ-ಬ್ರಹ್ಮೋತ್ತರದ ಕೊನೆಯಲ್ಲಿ ಅಗಲ- ೫ ರಾಜು
ಲಾಂತವ, ಕಾಪಿಷ್ಠ ಸ್ವರ್ಗದ ಕೊನೆಯಲ್ಲಿ ಅಗಲ- ೪ ೩/೭ ರಾಜು
ಶುಕ್ರ, ಮಹಾಶುಕ್ರದ ಕೊನೆಯಲ್ಲಿ ಅಗಲ- ೩ ೬/೭ ರಾಜು
ಸತಾರ, ಸಹಸ್ರಾರಧ ಕೊನೆಯಲ್ಲಿ ಅಗಲ- ೩ ೨/೭ ರಾಜು
ಆನತ, ಪ್ರಾಣತದ ಕೊನೆಯಲ್ಲಿ ಅಗಲ- ೨ ೫/೭ ರಾಜು
ಆರಣ, ಅಚ್ಯುತದ ಕೊನೆಯಲ್ಲಿ ಅಗಲ- ೨ ೧/೭ ರಾಜು

೭ ಗ್ರೈವೇಯಕ, ೬ ಅನುದಿಶ
೫ ಅನುತ್ತರ ಮತ್ತು ಸಿದ್ಧ ೧ ರಾಜು
ಶಿಲಾತನಕ ಆಗಲ

ತನ್ನ ತನ್ನ ಕೊನೆ ಇಂದ್ರಿಕ ವಿಭಾಗ ಸಂಬಂಧೀ ಧ್ವಜ ದಂಡದ ಅಗ್ರಭಾಗದ ತನಕ ಆಯಾಯ ಸ್ವರ್ಗದ ಕೊನೆ ಎಂದು ತಿಳಿಯಬೇಕು ಮತ್ತು ಲೋಕನ ಯಾವ ಕೊನೆಯಿದೆಯೋ ಅದೇ ಕಲ್ಪಾತೀತ ಭೂಮಿಯ ಕೊನೆ ಕೂಡ ಆಗಿದೆ.

ಜೈನ ಸಿದ್ಧಾಂತದಲ್ಲಿ ೮ ಪೃಥ್ವಿಯೆಂದು ಭಾವಿಸಲಾಗಿದೆ ೭ ನರಕದ್ದು, ೭ ಪೃಥ್ವಿಯದು, ಮತ್ತು ೧ ಮೋಕ್ಷ ಪೃಥ್ವಿ- ಈ ರೀತಿ ಪೃಥ್ವಿಯ ಎಂಟು ಭೇದಗಳಿವೆ

## ವಾಯುವಲಯದ ವರ್ಣನೆ

ಈ ಲೋಕಾಕಾಶವನ್ನು ನಾಲ್ಕು ಕಡೆಗಳಿಂದಲೂ ಆವರಿಸಿರುವ ಮೂರ ವಾಯುವಲಯವಿದೆ. ಇವು ವಾಯುಕಾಯಕ ಜೀವಿಗಳ ಶರೀರ ಸ್ವರೂಪದ್ದಾಗಿದೆ. ವಾಯು ಅಸ್ಥಿರ ಸ್ವಭಾವವುಳ್ಳದ್ದಾಗಿದ್ದರೂ ಕೂಡ ಇವು ಮೂರೂ ವಾಯುವಲಯ [ವಾತವಲಯ] ಸ್ಥಿರ ಸ್ವಭಾವವುಳ್ಳ ವಾಯುಮಂಡಲಗಳಾಗಿವೆ. ಇವುಗಳು:-

೧] ಘನೋದಧಿವಾತವಲಯ
೨] ಘನವಾತವಲಯ
೩] ತನುವಾತವಲಯ

ಘನೋದಧಿವಾತ ಗೋಮೂತ್ರ ವರ್ಣವುಳ್ಳದ್ದಾಗಿದೆ. ಘನವಾತವು ತೆಳು ನೀಲಿ ಬಣ್ಣವುಳ್ಳದ್ದಾಗಿದೆ ಮತ್ತು ತನುವಾತ ಅನೇಕ ವರ್ಣವುಳ್ಳದ್ದಾಗಿದೆ. ನಾಲ್ಕು ಕಡೆಯಿಂದ ಲೋಕವನ್ನು ಆವರಿಸಿ ಮೊಟ್ಟಮೊದಲ ಘನೋದಧಿವಾತವಲಯ ಇದೆ. ಈ ಘನೋದಧಿಯನ್ನು ಆವರಿಸಿಕೊಂಡು ಘನವಾತ ಮತ್ತು ಘನವಾತವನ್ನು ಆವರಿಸಿ ತನುವಾತವಲಯವಿದೆ. ತನುವಾತವಲಯದ ನಾಲ್ಕೂ ಕಡೆಗೂ ಅನಂತ ಅಲೋಕಾಕಾಶವಿದೆ.

(೧೨ ಪುಟದಿಂದ ಮುಂದುವರಿದುದು)

ಮುಕ್ತಾತ್ಮನ ಪುರುಷಾಕಾರತ್ವ ನಿರ್ಣಯ—

ಜೀವಾತ್ಮರುಗಳು ಅನಾದಿ ಕಾಲದಿಂದಲೂ ತೈಜಸಕರ್ಮಣ ಶರೀರಗಳ ಕಾರಣದಿಂದ ಸಶರೀರನಾಗಿ ಸಂಸಾರದಲ್ಲಿ ಉಳಿದಿದ್ದಾನೆ. ಇವರುಗಳು ಭವ್ಯರು-ಆಸನ್ನಭವ್ಯರು-ಅಭವ್ಯರುಗಳೆಂದು ಮೂರು ಪ್ರಕಾರವಾಗಿದ್ದಾರೆ. ಭವ್ಯರು ಸಮಯ ಸಿಕ್ಕಿದಾಗ ಅಂದರೆ ಉತ್ತಮ ಜ್ಞಾನಿಗಳ ಉಪದೇಶ ದೊರೆತ ನಂತರವೇ ಅವರು ಸನ್ಮಾರ್ಗದಲ್ಲಿ ಪ್ರವರ್ತಕರಾಗುತ್ತಾರೆ. ಆತ್ಮನ ನೈಜ ಸ್ವರೂಪವನ್ನು ಪಡೆಯಲು ಹಗಲು-ರಾತ್ರಿ ಶ್ರಮಿಸಿ ಜ್ಞಾನಾವರಣ-ದರ್ಶನಾವರಣ-ಮೋಹನೀಯವೇ ಮೊದಲಾದ ಎಂಟು ಕರ್ಮಗಳು ಆತ್ಮಸ್ವಭಾವವಲ್ಲ; ಕರ್ಮಜನಿತವಾದವುಗಳು: ಇದು ಹೇಯವಾದುದು; ಎಂದು ಭಾವಿಸುತ್ತ ಜಿವ-ಜೈನ ಶಾಸ್ತ್ರ-ಜಿನ ಗುರುಗಳನ್ನು ನಂಬಿ ಆತ್ಮ ಸಾಧಕನಾಗಿ ಗೃಹಸ್ಥರ ೧೦ ಶ್ರಾವಕ ವ್ರತವನ್ನು ಆಚರಿಸಿ ಕೊನೆಯಲ್ಲಿ ಮುನಿಧರ್ಮವನ್ನು ಸ್ವೀಕರಿಸಿ ಕ್ರಮವಾಗಿ ಸ್ವರ್ಗ ಮತ್ತು ಮೋಕ್ಷವನ್ನು ಪಡೆದು ಪುರುಷಾಕಾರನಾಗಿಯೇ ಜ್ಯೋತಿಸ್ವರೂಪನಾಗಿ ಉಳಿಯುತ್ತಾನೆ

## ಮೈಸೂರಿನಲ್ಲಿ ಹಾಗೂ ಹುಬ್ಬಳ್ಳಿಯಲ್ಲಿ ದಶಲಕ್ಷಣ ಪರ್ವಾಚರಣೆ

ಮೈಸೂರಿನ ಶಾಂತಿನಾಥ ಬಸದಿಯಲ್ಲಿ ದಶಲಕ್ಷಣಪರ್ವವು ವೈಭವದಿಂದ ನೆರವೇರಿತು. ವಿದ್ವಾಂಸರುಗಳಿಂದ ಭಾಷಣಗಳಾದವು.

ಹುಬ್ಬಳ್ಳಿ: ಇಲ್ಲಿ ಜಿನಮಂದಿರದಲ್ಲಿ ದಶಲಕ್ಷಣಪರ್ವ ವೈಭವದಿಂದ ನೆರವೇರಿತು. ಭಾಷಣಗಳು ನಡೆದವು. ಸ್ವ ಸು.

---

**ಶುಭಚಂದ್ರಾಚಾರ್ಯ ವಿರಚಿತ. ಬಿ.ವಿ. ನರಸಿಂಹಾಚಾರ್ ಅನುವಾದಿಸಿದ ಜ್ಞಾನಾರ್ಣವ ಎಂಬ ಲೇಖನವನ್ನು ಅನಿವಾರ್ಯ ಕಾರಣಗಳಿಂದ ಈ ಸಂಚಿಕೆಯಲ್ಲಿ ಪ್ರಕಟಿಸಲಾಗಲಿಲ್ಲ. ಸಹಕರಿಸಿ.** ಸಂಪಾದಕ, ಜಿನವಾಣಿ.

# ಅನಂತಕೃತಜ್ಞತಾಭಿನಂದನಗಳು

ಜಿನವಾಣಿರಜತೋತ್ಸವ ಸ್ಮಾರಕವಾದ

ಮಹಾವೀರಸ್ವಾಮಿಯ

೫೦೦ ನೇ ವೀರನಿರ್ವಾಣ ವಿಶೇಷ ಸಂಚಿಕೆಯಲ್ಲಿನ

ಜಿನವಾಣಿ ಸಂಪಾದಕನ

ವಿಶೇಷ ನಿವೇದನ ಪ್ರಾರ್ಥನಾನುಸಾರ

## ೧೯೭೪ನೇ ನವಂಬರ್ ಸಂಚಿಕೆಯ

ಸಂಪೂರ್ಣ ಪ್ರಕಟನೆಗೆ ಸಹಕರಿಸಿದ

ಧರ್ಮಸ್ಥಳದ ಧರ್ಮಾತ್ಮರೂ, ಪರಮೋದಾರಿಗಳೂ ವಿನಯಶೀಲಸಂಪನ್ನರೂ ಆದ

## ಸನ್ಮಾನ್ಯಶ್ರೀ ಡಾ. ವೀರೇಂದ್ರಹೆಗ್ಗಡೆರವರಿಗೆ

ಅನಂತ ಹೃತ್ಪೂರ್ವಕ ಅಭಿನಂದನಾಯುಕ್ತ ಕೃತಜ್ಞತೆಗಳನ್ನು ಅರ್ಪಿಸಿ ಅವರುಗಳಿಗೆ ಆಯುರಾರೋಗ್ಯೈಶ್ವರ್ಯವು ವೃದ್ಧಿಯಾಗಲೆಂದು ಅರ್ಹತ್ಪರಮೇಶ್ವರನಲ್ಲಿ ಪ್ರಾರ್ಥಿಸುವೆ

**ಈ ಔದಾರ್ಯ ವಾತ್ಸಲ್ಯಗಳೇ ನಮ್ಮ ರಕ್ಷಾಕವಚ !!**

ಇದೇ ಜಿನವಾಣಿಯು ೧೯೭೪ನೇ ನವಂಬರ್ ತಿಂಗಳ

ಸಂಚಿಕೆಯ ಪ್ರಕಟನೆಗೆ ಆಧಾರ!!!

ಇಂತು ಕೃತಜ್ಞ

ಮೈಸೂರು
೧೫-೧೧-೭೪

ಎಂ. ಸಿ ಪದ್ಮನಾಭಶರ್ಮ
ಸಂಪಾದಕ, ಜಿನವಾಣಿ

ಜಿನವಾಣಿ REG. NO. K.R.N.N. 17

ಜಿನವಾಣೀ ಗ್ರಾಹಕವರ್ಗದಲ್ಲಿ ಭಿನ್ನಹ-

ಧರ್ಮಬಾಂಧವರೇ !

ನಮ್ಮ ಹಳೆಯ ಚಂದಾದಾರರು ಈಗಲಾದರೂ ಜಿನವಾಣಿಯ ಶ್ರೇಯಸ್ಸನ್ನು ಕೋರಿ ೧೦೧ರೂಗಳನ್ನು ಕೊಟ್ಟು ಸಹಕರಿಸಿ ಸ್ಥಾಯೀ ಸದಸ್ಯರಾಗಿ ಅರ್ಹತ್ಪರಮೇಶ್ವರನ ಕೃಪೆಗೆ ಪಾತ್ರರಾಗಬೇಕೆಂದು ಪ್ರಾರ್ಥಿಸುವೆವು.

ಲಕ್ಷ್ಮೀಪ್ರಸನ್ನತೆಯನ್ನು ಎದುರು ನೋಡುತ್ತಿರುವ,

ಪ್ರಧಾನ ಸಂಪಾದಕ

ಎಂ.ಪಿ. ಅರವಿಂದತಿಲಕ್, ಎಂ.ಎ.

ಸಂಪಾದಕ:
ಎಂ.ಸಿ.ಪದ್ಮನಾಭಶರ್ಮ, ನ್ಯಾಯತೀರ್ಥ

ಉಪಸಂಪಾದಕ
ಎಂ.ಪಿ.ರಾಜೇಂದ್ರಕುಮಾರ್

To BOOK POST

Sri Kanthi Shetty
A K P J B B Home
Kalpatta P.O..
Wyanad
Kerala

ಜಿನವಾಣೀಕಾರ್ಯಾಲಯ

ನಂ. 67 ಡಿ ಬನುಮಯ್ಯ ರಸ್ತೆ ಮೈಸೂರು ೫೭೦೦೦೧

The Jinavani, the monthly Kannada Magazine is Edited and Published by Sri M C. Padmanabhasharma & Printed by B.V. Alahiyamanavalan, Propritor, Sri Vijayalakshmi Press, 355, D ubbiah Road, MYSORE- 560112.

ಜೈನಪ್ರಚಾರಸಂಘದ ಜೈನಧಾರ್ಮಿಕ ಕನ್ನಡ ಮಾಸಿಕಮುಖಪತ್ರಿಕೆ

# ಜಿನವಾಣಿ



ಡಿಸಂಬರ್ 10 1983

# ಅನಂತಕೃತಜ್ಞತಾಭಿನಂದನಗಳು

ಜಿನವಾಣಿರಜತೋತ್ಸವ ಸ್ಮಾರಕವಾದ

ಮಹಾವೀರಸ್ವಾಮಿಯ

೫೦೦ ನೇ ವೀರನಿರ್ವಾಣ ವಿಶೇಷ ಸಂಚಿಕೆಯಲ್ಲಿನ

ಜಿನವಾಣಿ ಸಂಪಾದಕನ

ವಿಶೇಷ ನಿವೇದನ ಪ್ರಾರ್ಥನಾನುಸಾರ

## ೧೯೭೪ನೇ ಡಿಸಂಬರ್ ಸಂಚಿಕೆಯ

ಸಂಪೂರ್ಣ ಪ್ರಕಟನೆಗೆ ಸಹಕರಿಸಿದ

ಅಮೆರಿಕದ ಧರ್ಮಾತ್ಮರೂ, ಪರಮೋದಾರಿಗಳೂ ವಿನಯಶೀಲಸಂಪನ್ನರೂ ಆದ

## ಸನ್ಮಾನ್ಯಶ್ರೀ ಡಾ|| ಸುಮತಿಸೇನ್ ಎಂ.ಡಿ. ಅವರಿಗೆ

ಅನಂತ ಹೃತ್ಪೂರ್ವಕ ಅಭಿನಂದನಾಯುಕ್ತ ಕೃತಜ್ಞತೆಗಳನ್ನು ಅರ್ಪಿಸಿ ಅವರುಗಳಿಗೆ
ಆಯುರಾರೋಗ್ಯೈಶ್ವರ್ಯವು ವೃದ್ಧಿಯಾಗಲೆಂದು ಅರ್ಹತ್ಪರಮೇಶ್ವರನಲ್ಲಿ ಪ್ರಾರ್ಥಿಸುವೆ

ಈ ಔದಾರ್ಯ ವಾತ್ಸಲ್ಯಗಳೇ ನಮ್ಮ ರಕ್ಷಾಕವಚ !!

ಇವೇ ಜಿನವಾಣಿಯ ೧೯೭೪ನೇ ಡಿಸಂಬರ್ ತಿಂಗಳ

ಸಂಚಿಕೆಯ ಪ್ರಕಟನೆಗೆ ಆಧಾರ!!!

ಇಂತು ಕೃತಜ್ಞ

ಮೈಸೂರು
೧೫-೧೨-೭೪

ಎಂ. ಸಿ ಪದ್ಮನಾಭಶರ್ಮ
ಸಂಪಾದಕ, ಜಿನವಾಣಿ

||ಓಮ್||

|| ಓಮ್ ನಮಃಸಿದ್ಧೇಭ್ಯಃ ||

# ಜಿನವಾಣಿ

# JINAVANI

ಜೈನಸಾಹಿತ್ಯ ಪ್ರಚಾರಸಂಘದ ಮುಖಪತ್ರಿಕೆ

ಜೈನ ಧಾರ್ಮಿಕ

## ಕನ್ನಡ ಮಾಸಪತ್ರಿಕೆ

**KANNADA MONTHLY MAGZINE**

ಸತ್ವೇಷು ಮೈತ್ರೀಂ ಗುಣಿಷು ಪ್ರಮೋದಂ ಕ್ಲಿಷ್ಟೇಷು ಜೀವೇಷು ಕೃಪಾಪರತ್ವಮ್ ।
ಮಾಧ್ಯಸ್ಥಭಾವಂ ವಿಪರೀತವೃತ್ತೌ ಸದಾ ಮಮಾತ್ಮಾ ವಿದಧಾತು ದೇವ ! ॥

-ಅಮಿತಗತಿ

ಎಲೈ ! ದೇವನೇ ! ಪ್ರಾಣಿಗಳಲ್ಲಿ ಸ್ನೇಹವನ್ನೂ, ಗುಣವಂತರಲ್ಲಿ ಸಂತೋಷವನ್ನೂ, ಕಾಯಕ್ಲೇಶ ಮನಃಕ್ಲೇಶಗಳಲ್ಲಿ ತೊಳಲಾಡುವ ಪ್ರಾಣಿಗಳಲ್ಲಿ ದಯೆಯನ್ನೂ, ಶಾಸ್ತ್ರಾಗಮಾಪ್ತವ್ಯತಿರೇಕಮಾರ್ಗಾಶ್ರಯಿಗಳಲ್ಲಿ ಮಾಧ್ಯಸ್ಥಭಾವನೆಯನ್ನೂ ನನಗೆ ಉಂಟುಮಾಡು

MFA ತಿಲಕ್, ಮೈಸೂರು

ಮಂಡಲ ೩೩-೩೪) ಮೈಸೂರು ೧೦ನೆಯ ಡಿಸಂಬರ್ ೧೯೮೩ (ಕಿರಣ- ೨)
(ಗೊಮ್ಮಟ-ಚಾವುಂಡರಾಯ ಶಕ- ೧೦೦೩)

## ಜಯ ಜಯ ಎನ್ನಿರಿ ಮಹಾವೀರಗೆ

ಜಯ ಜಯ ಎನ್ನಿರಿ ಮಂಗಳ ಪುರುಷಗೆ
ಭಾರತ ದೇಶದ ಪವಿತ್ರ ಸ್ಥಾನದಲ್ಲಿ ಜನಿಸಿದ
ವೀರಗೆ ಜಯ ಜಯ ಎನ್ನಿಂ
ಕುಂಡಲ ಗ್ರಾಮದಲಿ ಸಿದ್ಧಾರ್ಥ ಮತ್ತು
ತ್ರಿಶಲರಿಗೆ ಮಗನಾದ ಮಂಗಲ ಜೀವಕೆ
ಜಯ ಜಯ ಎನ್ನಿರಿ

ಚಿಕ್ಕ ವಯಸ್ಸಿನಲ್ಲಿ ಸಂಸಾರವ ತೊರೆದು ದೀಕ್ಷೆಯ ಪಡೆದು
ಕಠೋರ ತಪಸ್ಸಾಚರಿಸಿದ ಮಂಗಲ ಪುರುಷಗೆ
ಜಯ ಜಯ ಎನ್ನಿರಿ

ಜ್ಞಾನೋದಯವ ಪಡೆದು ಜೈನಧರ್ಮವ ಬೆಳಗಿದ
ಅಹಿಂಸಾ ತತ್ವದ ಮಹತ್ವ ತಿಳಿಸಿದ ಧೀರಗೆ
ಮಂಗಲ ಪುರುಷಗೆ ಜಯ ಜಯ ಎನ್ನಿರಿ

ಕೊನೆಗೂ ಪಾವಾಪುರಿಯಲಿ ಮುಕ್ತಿಯಹೊಂದಿದ
ಮುಕ್ತಿಯ ದಾರಿಯ ತೋರಿಸಿದ ನಮಗೆ ಮಂಗಲ
ಪುರುಷಗೆ ಜಿನದೇವನಿಗೆ ಜಯ ಜಯ ಎನ್ನಿರಿ

ಸರಳ ತತ್ವದ ಹಿರಿಮೆ ಬೆಳಗಿ ಇಪ್ಪತ್ನಾಲ್ಕನೇ
ತೀರ್ಥಂಕರನಾದ ಮಹಾವೀರಗೆ ಮಂಗಲ
ಪುರುಷಗೆ ಜಯ ಜಯ ಎನ್ನಿರಿ

## ಸಂಪಾದಕೀಯ

### “ಜೈನಸ್ಯ ವಿಸ್ಮಯೋ ನಾಸ್ತಿ”

### ವಿಷಯಗಳಿಗೆ ವಶವಾಗುವವರಿಲ್ಲ-ಉತ್ತರ್ಥೇ ಆಚಾರ್ಯ ವಾಕ್ಯಪ್ರಮಾಣ

ಜೈನಧರ್ಮದ ಉಳಿಗೆ ಕಾರಣ ಭೂತರಾದ ಪ್ರಾತಃಸ್ಮರಣೀಯರಾದ ಆಚಾರ್ಯ ಅಕಲಂಕ ದೇವರು ತನ್ನ ನ್ಯಾಯಶಾಸ್ತ್ರ ಗ್ರಂಥದಲ್ಲಿ “ ಜೈನಸ್ಯ ವಿಸ್ಮಯೋ ನಾಸ್ತಿ” ಎಂದು ಹೇಳಿದ್ದಾನೆ. ಇದು ನಿಜಕ್ಕೂ ಸ್ವಾರಸ್ಯವಾದ ವಿಷಯವೇ ಆಗಿದೆ. ಅನಾದಿ ಅನಂತಕಾಲದಿಂದಲೂ ಜೀವರಾಶಿಗಳು ಕರ್ಮಬದ್ಧರಾಗಿಯೇ ಉಳಿದು ಬಂದಿದ್ದಾರೆ.

ಉಮಾಸ್ವಾಮಿ ಆಚಾರ್ಯರೂ ತಮ್ಮ ತತ್ವಾರ್ಥ ಸೂತ್ರದಲ್ಲಿ 'ಅನಾದಿಸಂಬಂಧೇತ' ಎಂದು ಹೇಳಿರುತ್ತಾರೆ. ಜೀವರಾಶಿಗಳು ಅನಾದಿ ಅನಂತ ಕಾಲದಿಂದ ತೈಜಸ ಕಾರ್ಮಣ ಶರೀರಸಹಿತರಾಗಿಯೇ ಉಳಿದು ಬಂದಿದ್ದಾರೆಂದು ಹೇಳುತ್ತಾರೆ

ಕ್ರೋಧ-ಮಾನ-ಮಾಯಾ-ಲೋಭಾದಿ ಉಪಾಧಿಗಳ ಹೊಡೆತದಿಂದ ನಿರಂತರ ಆತ್ಮನು ನಾಲ್ಕು ಪ್ರಕಾರದ ದೇವ-ಮನುಷ್ಯ-ತಿರ್ಯಂಚ-ನಾರಕಿಗಳೆಂಬ ನಾಲ್ಕು ಗತಿಗಳಲ್ಲಿ ನಿರಂತರ ಜನನ ಮರಣಾದಿಗಳ ಸುಳಿಯಲ್ಲಿ ಹುಟ್ಟಿ ಸಾಯುತ್ತಾ ಮಹಾ ದುಃಖವನ್ನು ಹೊಂದುತ್ತಿರುವ.

## ಅಂಧಃಪತನದಲ್ಲಿ--ಜೀವರಾಶಿಗಳು

ಹೀಗಿರುವ ಜೀವರಾಶಿಗಳಲ್ಲಿ ಯಾವುದಾದರೂ ದುಷ್ಕರ್ಮ ಉಪಶಮನಕ್ಕೆ ಬಂದು ಅದರಿಂದ ಉತ್ತಮಸ್ಥಾನ ಪಡೆದರೆ ಹಿಂದಿನ ಗತದುಃಖಮಾರ್ಗಗಳನ್ನು ಮರೆತು ಮತ್ತೆ ಮತ್ತೆ ದುಃಖಕ್ಕೆ ಭಾಗಿಯಾಗುತ್ತಾನೆ. ವಿದ್ಯಾವಂತರು "ನಾಯಂ ಆತ್ಮಾ ಬಲಹೀನೇನ ಲಭ್ಯಃ" ಎಂದರೆ--ಬಲಹೀನನಾದ ಪುರುಷನಿಂದ ಈ ಆತ್ಮನನ್ನು ಸಾಕ್ಷಾತ್ಕರಿಸಿಕೊಂಡು ಆತ ಸುಖ ಪಡೆಯಲಾಗದು ಕಾರಣ ನಶ್ವರವಾದ ಐಹಿಕ ಕಾಮೋಪಭೋಗಕ್ಕೆ ಮರುಳಾಗಿ ತನ್ನ ನಿಜಸ್ವರೂಪವನ್ನೇ ಮರೆತು ಬಿಡುತ್ತಾನೆ ಆದುದರಿಂದ ಕರ್ಮಬದ್ಧ ಜೀವಿಗಳಿಗೆ ಊಹಿಸಲಾಗದ ಯಾವ ಸಂಸ್ಥಿತಿ ಆದರೂ ಆಶ್ಚರ್ಯವಿಲ್ಲ ಎಂದು ಘಂಟಾಘೋಷವಾಗಿ ಸಾರುತ್ತಾರೆ.

## ಉಕ್ತಾರ್ಥೇ--ಆಶಾಧರ ಸೂರಿಗಳ ಅಭಿವಚನ

ಸಾಗರ ಧರ್ಮಾಮೃತದಲ್ಲಿ ಆಚಾರ್ಯ ಆಶಾಧರ ಸೂರಿಗಳು "ಪ್ರಾಯೋ ವಿಷಯ ಮೂರ್ಛಿತಾಃ" ಎಂದರೆ ಸಂಸಾರಿ ಜೀವರುಗಳು ತ್ರಾಂಬಕವಾಗಿ ವಿಷಯ ವಸ್ತುಗಳಿಗೆ ಮಾರು ಹೋಗಿ ಅದಕ್ಕೆ ವಶರಾಗಿ ತನ್ನನ್ನು ತಾನೇ ಮರೆತು ಅದೆತ್ತತ್ತ ಸೆಳೆದರತ್ತತ್ತ ತೇಲಾಡುತ್ತಾ ಓಡುತ್ತಾ ಹೋಗುತ್ತಾರೆ, ಎಂದು ವರ್ಣಿಸಿದ್ದಾರೆ.

## ಜೀವನ ಸಾರ್ಥಕತೆಗೆ ಆಚರಣೆಯಾಂಶ

ಈ ರೀತಿಯಾಗಿ ಜೀವನು ನಾನಾಕರ್ಮಗಳ ಹೊಡೆತದಿಂದ ದಿಕ್ಕು ದಾರಿ ತೋಚದೆ ಮದಾಂಗನಂತೆ ವರ್ತಿಸುತ್ತಿರುತ್ತೆ ದುಃಖಿಯಾಗಿ ಅಂಡಲೆಯುತ್ತಾರೆ. ಈ ದುರ್ಗತಿ ನೀಗಬೇಕಾದರೆ ಸತ್ಸಹವಾಸ ಸದಭಿರುಚಿ ಸದನುಷ್ಠಾನಗಳು ಅವಶ್ಯಕ.

## ಮಾನವನಿಡಿತದಲ್ಲಿ ದುರ್ಲಭವಾದ ಸತ್ಸಹವಾಸಾದಿಗಳು

ಸಂಸಾರದಲ್ಲಿ ತಮ್ಮ ತಮ್ಮ ಸ್ವಾರ್ಥಸಾಧನೆಗಾಗಿ ಸ್ಥಿರ ಬುದ್ಧಿಯುದಾದ ಆತ್ಮ ಕಲ್ಯಾಣದಲ್ಲಿ ಬಲಿಷ್ಠರಾದವರನ್ನೂ ಅವಿಷಕ್ಕೆ ಗುರಿಮಾಡಿ ಅವರ ನೇರವಾದ ಮಾರ್ಗವನ್ನು ಹಾಳುಮಾಡಿ ಬಿಡುತ್ತಾರೆ.

## ಸತ್ಸಹವಾಸಾದಿಗಳಿಂದ ಉತ್ತಮಸ್ಥಾನ ಪಡೆದ ಮಹಾಪುರುಷರು

ಆದಿನಾಥನ-ವೃಷಭದೇವನ ಮಹಾಶೀಲ ವಿದ್ಯಾಧರ ಚಕ್ರವರ್ತಿಗೆ ನಾಲ್ಕುಜನ ಮಂತ್ರಿಗಳಲ್ಲಿ ಸ್ವಯಂ ಬುದ್ಧಿಮಂತ್ರಿಯು ಎರಡು ಮೂರು ಭರಗಳಲ್ಲಿ ಆತನನ್ನು ಎಚ್ಚರಿಸಿ ಉತ್ತಮ ಮಾರ್ಗದಲ್ಲಿರಿಸಿದನು ಇದರ ಫಲವಾಗಿ ಸ್ವಯಂ ಬುದ್ಧನು ಆತ್ಮಸಾಧಕನಾಗಿ ಕೇವಲಿಯಾಗಿಯೂ ಸಹ ಪುನಃ ಪುನಃ ಭವದಲ್ಲಿರುಂತೆ ಹುಟ್ಟಿದರೂ ಎಚ್ಚರಿಕೆಯಿಂದ ಸ್ವಯಂ ಬುದ್ಧನು ಈ ಮಹಾಕರ್ಮದಿಂದಾಗಿ ಕೇವಲಿಯಾಗಿಯಲ್ಲದೆ ಮೋಕ್ಷವನ್ನು ಸಹ ಪಡೆದನು ಅಂಥಾ ಭವಭಾರವನ್ನು ನೀಗಿಸುವ ಮಿತ್ರರು ಸಿಕ್ಕುವುದು ಅತಿ ದುರ್ಲಭ ಆದುದರಿಂದ ಪ್ರತಿಯೊಬ್ಬರೂ ಸ್ವಂತ ಬುದ್ಧಿ ಉಪಯೋಗಿಸಿಯೇ ಸಮಂಜಸವ ಧರ್ಮವನ್ನು ಆಚರಿಸುತ್ತ ಇತರರಿಗೆ ಸಹಾಯಕರಾಗಿದ್ದು ಮಹೋಪಕಾರಿಗಳಾಗಬೇಕು. ತಂಹ ಸತ್ಯಹವಾಸಾದಿಗಳೇ ಎಲ್ಲರಿಗೂ ಉಪದೇಯವಾದುದು.

## ಓದುಗರಲ್ಲಿ ಕಿವಿಮಾತು

ಮಾನವರು ಮಾನವರಾಗಿಯೇ ಆಗಿದ್ದರೆ ಸರಳಸ್ವಭಾವದವರಾಗಿದ್ದು ಆತ್ಮನನ್ನು ಸಂರಕ್ಷಿಸಿಕೊಳ್ಳುತ್ತಾ ಇದ್ದು ತಾನಾಗಿ ಬರುವ ವೈಭವಾದಿಗಳನ್ನು ಸದುಪಯೋಗಪಡಿಸುತ್ತ ಸತ್ಕಾಲಕ್ಷೇಪ ಮಾಡಬೇಕು. ಕೆಲವು ಸ್ವಾರ್ಥಿಗಳು ತಮಗೆ ಏನೂ ಗೊತ್ತಿಲ್ಲದಿದ್ದರೂ ಸಹ ತಮ್ಮ ಸ್ವಾರ್ಥಕ್ಕಾಗಿ ಅನೇಕ ಅನರ್ಥಗಳನ್ನು ಮಾಡಿ ಬಿಡುತ್ತಾರೆ ಪ್ರತಿಯೊಬ್ಬ ಜೀವನು ವಿಚಾರರಹಿತನಾಗಿ ನಾನು ಯಾರು ? ನನ್ನ ಧರ್ಮವೇನು ?- ಆ ಧರ್ಮದ ಮಹಿಮೆಯನ್ನು ಅರಿತು ಅದರಂತೆ ನಡೆದು ಲೋಕ ಕಲ್ಯಾಣಕ್ಕಾಗಿ ಸಮಯ ಮತ್ತು ದ್ರವ್ಯವನ್ನು ವ್ಯಯ ಮಾಡಿ ಮಾನವ ಧರ್ಮದ ಸಾರ್ಥಕತೆಯನ್ನು ಸಫಲಗೊಳಿಸಬೇಕಾಗಿ ವಿನಂತಿಸುವ,

ಸಂಪಾದಕ,

ಜಿನವಾಣಿ

# ಓದುಗರ ಪತ್ರ-

೨೫-೧೧-೮೩
ಮೈಸೂರು.

ಜಿನವಾಣಿ ಸಂಪಾದಕರಿಗೆ,

ಸ್ವಾಮಿ,

ತಮ್ಮ ಈ ತಿಂಗಳ ಸಂಚಿಕೆಯನ್ನು ಆಕಸ್ಮಾತ್ ನಮ್ಮ ಜೈನಮಿತ್ರರೊಬ್ಬರ ಮನೆಯಲ್ಲಿ ನೋಡಿ ಓದಲು ತುಂಬಾ ಹರ್ಷವಾಗಿದೆ. ಅದರಲ್ಲಿ ಅಪೂರ್ವ ವಿಷಯವಾದ "ತ್ರಿಲೋಕದರ್ಶನ" ಉಪನ್ಯಾಸಮಾಲೆಯನ್ನು ಪ್ರಾರಂಭ ಮಾಡಿದ್ದೀರಿ. ಇದು ಅತ್ಯಂತ ಸ್ವಾಗತಾರ್ಹವಾಗಿದೆ. ಶ್ರೀಯುತ ಭುವನಹಳ್ಳಿ ಡಿ. ಶ್ರೀಪತಿಜೋಯಿಸರು ಈ ಉಪನ್ಯಾಸಮಾಲೆಯಲ್ಲಿ ಜೈನ ಸಿದ್ಧಾಂತದಲ್ಲಿ ಹೇಳಿರುವಂತೆ ಮೂರು ಲೋಕಗಳ ದರ್ಶನವನ್ನು ವಾಚಕರಿಗೆ ವಿವರವಾಗಿ ಮಾಡಿಸಲು ತೊಡಗಿದ್ದಾರೆ. ಬಲು ಗಹನವಾದ ವಿಷಯವನ್ನು ಬಹಳ ಸರಳವಾಗಿ-ಸುಂದರವಾಗಿ ನಿರೂಪಿಸಿದ್ದಾರೆ. ಮುಂದೆಯೂ ತಮ್ಮ ಸಂಚಿಕೆಗಳು ಇವರ ಈ ಭವ್ಯ ಲೇಖನ ದರ್ಶನವನ್ನು ನಮಗೆ ಮಾಡಿಸಲಿ ಎಂದು ಆಶಿಸುತ್ತೇವೆ. ಅವರಿಗೆ ಮತ್ತು ಅವರ ಸುಂದರ ಚಿತ್ರಣವನ್ನು ವಾಚಕರ ಮುಂದಿಟ್ಟಿರುವ ತಮಗೆ ಧನ್ಯವಾದಗಳು. ಈ ಉಪನ್ಯಾಸ ಮಾಲಿಕೆಯ ಸುಂದರ-ಸರಳ ನಿರೂಪಣೆಯ ಮುಂದಿನ ಭಾಗಗಳಿಗಾಗಿ ಕಾಯುತ್ತಿರುವ, ನಿರೀಕ್ಷಿಸುತ್ತಿರುವ,

ತಮ್ಮ ನಂಬುಗೆಯ,
ಸುಧೀಂದ್ರ, ಸುಬ್ರಹ್ಮಣ್ಯ, ಶಕುಂತಲ,

---

ಅ ಮ ರ ತ್ಯಾ ಗಿ

# ಬಾ ಹು ಬ ಲಿ

ರಚನಾಕಾರರು:
ಎಸ್.ಬಿ. ಸಾಲಿಗ್ರಾಮಚಂದ್ರಕಾಂತ್

ಪಾತ್ರಪರಿಚಯ:

೧) ಆದಿನಾಥ- ಅಯೋಧ್ಯ ಮತ್ತು ಪಾದನಪುರದ ಅರಸು
೨) ಮರುದೇವಿ- ಆದಿನಾಥನ ಮಡದಿ
೩) ವೃಷಭನಾಥ- ಆದಿನಾಥನ ಮಗ
೪) ಯಶಸ್ವತಿ- ವೃಷಭನಾಥನ ಮೊದಲನೆ ಮಡದಿ
೫) ಸುನಂದೆ- ವೃಷಭನಾಥನ ಎರಡನೆ ಮಡದಿ
೬) ಭರತ- ಯಶಸ್ವಿನಿಯ ಮಗ
೭) ಬಾಹುಬಲಿ- ಸುನಂದೆಯ ಮಗ

ಇತರ ಪಾತ್ರಗಳು:

ಮಂತ್ರಿಗಳು, ಧಳಪತಿ, ಸೇನಾಧಿಪತಿ, ಪುರದ ಪ್ರಮುಖರು, ಹೊಗಳು ಭಟ್ಟರು, ಪುರೋಹಿತರು, ನೃತ್ಯಗಾತಿ, ಚಾರ, ಇತ್ಯಾದಿ, ಇತ್ಯಾದಿ.

ಅಂತಪುರದ ದೃಶ್ಯ- ೧

(ಆದಿನಾಥ ಮತ್ತು ಮರುದೇವಿ ಅಂತಃಪುರದಲ್ಲಿ

ಆದಿನಾಥ: (ಕಿರು ಧ್ವನಿಯಲ್ಲಿ) ರಾಣಿ ! ಮರುದೇವಿ ಏನನ್ನೋ ಆಲೋಚಿಸು ವಂತಿದೆ.

ಮರುದೇವಿ: ಸ್ವಾಮಿ ! ವೃಶಭನಾಥನು ಬೆಳೆದು ಪ್ರಾಪ್ತವಯಸ್ಕನಾಗಿರುವನು. ಅನುರೂಪಳಾದ ತಕ್ಕ ಕನ್ಯೆಯನ್ನು ತಂದು ವಿವಾಹ ಮಾಡುವ ಚಿಂತೆಯಲ್ಲವೆ ?

ಆದಿನಾಥ: (ಸಂತೋಷದಿಂದ) ಹೌದು ದೇವಿ. ನಿನ್ನ ಯೋಚನೆ ಸಮ್ಮತವಾಗಿದೆ. ಕುಮಾರನಿಗೆ ವಿವಾಹ ಮಾಡುವುದು ಒಳಿತು. ಅತನನ್ನೇ ವಿಚಾರಿಸೋಣ.

ಮರುದೇವಿ; ಆಗಲಿ ಸ್ವಾಮಿ ! [ಅಮಿತಾನಂದದಿಂದ ನುಡಿದಳು]

ಆದಿನಾಥ: ಯಾರಲ್ಲಿ ?

ಚಾರ: (ಮೊಣಕಾಲೂರಿ ನಮಸ್ಕರಿಸುತ್ತಾ) ಮಹಾಪ್ರಭುಗಳಿಗೆ ನಮಸ್ಕರಿಸುವೆನು ಅಪ್ಪಣೆಯಾಗಬೇಕು.

ಆದಿನಾಥ: ಈಗಲೆ ಹೋಗಿ ಯುವರಾಜನನ್ನು ಬರಹೇಳು !

ಚಾರ: ಆಗಲಿ ಮಹಾಪ್ರಭು [ಎಂದು ಹೇಳಿ ವಿನಯದಿಂದ ಹೊರಡುವನು]

ಆದಿನಾಥ: ದೇವಿ ! ವಿವಾಹಕ್ಕೆ ಕುಮಾರನು ಸಮ್ಮತಿಸುವನೆ ?

ಮರುದೇವಿ: (ಹಸನ್ಮುಖಿಯಾಗಿ) ಸ್ವಾಮಿ ! ಹಾಗೇಕೆ ಸಂದೇಹಪಡುವಿರಿ ವಿವಾಹಕ್ಕೆ ಸಮ್ಮತಿಸುತ್ತಾನೆ ನಮ್ಮ ಕುಮಾರನಲ್ಲವೆ !

(ವೃಷಭನಾಥನು ಪ್ರವೇಶಿಸುವನು)

ವೃಷಭನಾಥ: (ಮಾತಾಪಿತೃಗಳನ್ನು ಕಂಡು ಅನನ್ಯ ಭಕ್ತಿಯಿಂದ) ಮಾತಾ ಪಿತೃಗಳಿಗೆ ಶಿರಸಾ ನಮಸ್ಕರಿಸುವೆನು. ತಂದೆಯವರೇ ನೀವು ನನ್ನನ್ನು ಹೇಳಿ ಕಳುಹಿಸಲು ಕಾರಣವೇನು ? ತಿಳಿದುಕೊಳ್ಳಬಹುದೆ ? !

ಆದಿನಾಥ! (ವಾತ್ಸಲ್ಯಪೂರ್ವಕವಾಗಿ) ಕುಮಾರ ! ವೃಷಭನಾಥ ನೀನೀಗ ಬಾಲ್ಯದಿಂದ ಯೌವನಾವಸ್ಥೆಗೆ ಕಾಲಿಟ್ಟಿರುವೆ ನಿನ್ನ ವಿವಾಹ ಮಾಡುವ ವಿಷಯವನ್ನು ಪ್ರಸ್ತಾಪಿಸಲು

ಮರುದೇವಿ; (ಸಂತೋಷಭರಿತಳಾಗಿ) ನಿನಗೆ ತಕ್ಕ ಕನ್ಯೆಯನ್ನು ವಿವಾಹ ಮಾಡಿಕೊಂಡು ನಮ್ಮ ವಂಶಜ್ಯೋತಿ ಬೆಳಗು ಕುಮಾರಾ ! ! !

ವೃಷಭನಾಥ; (ವಿನಯದಿಂದ) ತಂದೆಯೇ ! ತಾಯಿಯೇ ! ನಿಮ್ಮ ಸಂತೋಷವೆ ನನ್ನ ಸಂತೋಷ ನಿಮ್ಮ ಇಚ್ಛೆಯಂತೆಯೇ ಆಗಲಿ

ಆದಿನಾಥ-ಮರುದೇವಿ: (ಅಮಿತ ಸಂತೋಷದಿಂದ) ಕೃತಾರ್ಥರಾದೆವು ಕುಮಾರ ನಾವೆ ಧನ್ಯರು ನಿನ್ನಂಥ ಮಗನನ್ನು ಪಡೆದ ನಾವೇ ಧನ್ಯರು

ವೃಷಭನಾಥನಿಗೆ ಯಶಸ್ವತಿ ಮತ್ತು ಸುನಂದ ಎಂಬ ಚಲುವೆಯರೊಡನೆ ವಿವಾಹವಾಯಿತು. ಹಿರಿಯ ಮಡದಿಯಲ್ಲಿ ನೂರು ಗಂಡು ಮಕ್ಕಳಾದವು. ಕಿರಿಯ ಮಡದಿಯಾದ ಸುನಂದೆಯಲ್ಲಿ ಒಂದು ಗಂಡು-ಎರಡು ಹೆಣ್ಣುಮಕ್ಕಳು ಜನಿಸಿದರು. ಯಶಸ್ವತಿಯಲ್ಲಿ ಹುಟ್ಟಿದ ಹಿರಿಯ ಮಗನೆ ಭರತ, ಸುನಂದೆಯ ಮಗನೆ ಬಾಹುಬಲಿ

ಭರತ, ಬಾಹುಬಲಿ ಈರ್ವರೂ ವಿದ್ಯೆಯನ್ನು ಕಲಿಯುವುದರಲ್ಲಿ ತುಂಬಾ ಆಸಕ್ತಿಯನ್ನು ವಹಿಸಿದರು. ಸರ್ವ ವಿದ್ಯೆಯನ್ನು ಕಲಿತು ಸರ್ವವಿದ್ಯಾಪಾರಂಗತರಾದರು ಅತ್ಯಂತ ಸುಂದರರೂ, ಭುಜಬಲಪರಾಕ್ರಮಿಗಳೂ ಆಗಿ ಪ್ರಾಪ್ತವಯಸ್ಕರಾಗಿರುವರು.

### ವೃಷಭನಾಥನ ಆಸ್ಥಾನ ದೃಶ್ಯ-೨

(ವೃಷಭನಾಥನು ಸಿಂಹಾಸನದ ಮೇಲೆ ಗಾಂಭೀರತೆಯಿಂದ ಕುಳಿತಿರುವನು. ಯಶಸ್ವತಿ-ಸುನಂದೆ-ಭರತ-ಬಾಹುಬಲಿ-ದೇವೇಂದ್ರ ನೀಲಾಂಜಲಿ-ಮಂತ್ರಿಗಳು-ಧಳಪತಿ-ಸೇವಕರು-ಪ್ರಜೆಗಳು, ಇವರೆಲ್ಲರ ಅಕ್ಷಿಗಳು ನೃತ್ಯವನ್ನು ವೀಕ್ಷಿಸಲು ಕಾತುರಗಾಗಿರುವರು

(ನೀಲಾಂಜಲಿ ನೃತ್ಯವನ್ನು ಆರಂಭಿಸುವಳು)

ನೃತ್ಯಗಾನ—

ಝುಣ್, ಝುಣ್ ಝುಣ್
ಕಾಲ್ಗೆಜೆ ಝುಣ್ ಝುಣ್
ಘಲ್, ಘಲ್, ಘಲ್
ಕೈ ಬಳೆ ಘಲ್ ಘಲ್ ||೧||

ಜೀವನ ಎಷ್ಟೊಂದು ಮಧುರ
ಅಲ್ಲವೇ ಹೇಳು ಚೆಲುವಾಂಗ ಸುಂದರ ||೨||

ಓ ಚಲುವ ನನ್ನಯ ಚಲುವು
ಬಯಸಿದೆ ನಿನ್ನಯ ಮನವು
ನಿನ್ನ ಮೊಗದ ನಗುವು
ಹೂವಿನಂತೆ ಅರಳಿದೆ ||೩||

ಸುಖವ ಪಡಬೇಕು ಮನಸು
ಆಗಲೆ ಬಾಳು ಸೊಗಸು
ಸುಖಪಡದ ಬಾಳೆ ಹೊಲಸು ||೪||

ಮುಂದುವರಿಯುತ್ತದೆ

ಶ್ರೀಃ

ಶ್ರೀಪರಮಾತ್ಮನೆ ನಮಃ

ಶ್ರೀಶುಭಚಂದ್ರಾಚಾರ್ಯವಿರಚಿತಃ

# ಜ್ಞಾನಾರ್ಣವಃ

(ಭಾವತಲಸ್ಪರ್ಶಿನ್ಯಾಖ್ಯ ಕರ್ಣಾಟಕಾನುವಾದಯುತಃ)

[ ಅಷ್ಟಾಯೋಗಸ್ಥಾನಾನಿ ]

ಅಥ ಕೈಶ್ಚಿತ್ ಯಮ ನಿಯಮ-ಆಸನ ಪ್ರಾಣಾಯಾಮ-ಪ್ರತ್ಯಾಹಾರ-ಧಾರಣಾ-ಧ್ಯಾನ-ಸಮಾಧಯಃ ಇತ್ಯಷ್ಟಾವಂಗಾನಿ ಯೋಗಸ್ಯ ||೧||

---

ಶ್ರೀಃ

ನವೀನನ್ಯಾಯವಿದ್ವಾನ್, ಪ್ರಾಚೀನನ್ಯಾಯವಿಶಾರದ

ಭಾ. ನಂ. ನರಸಿಂಹಾಚಾರ್ಯವಿರಚಿತಮಪ್ಪ

## ಭಾವತಲಸ್ಪರ್ಶಿನೀ

ಕರ್ಣಾಟಕಟೀಕಾ

ವ್ಯಾಖ್ಯಾಕೃನ್ಮಂಗಳಮ್

ಅಸ್ಮದ್ಗುರೂನ್ ಸಮಾರಭ್ಯ ಶ್ರೀಶಾನ್ತಾನ್ ದೇಶಿಕೋತ್ತಮಾನ್ ।
ನತ್ವಾ ಭಾವತಲಸ್ಪರ್ಶೀ ಜ್ಞಾನಾರ್ಣವಕೃತೇರ್ಮುದಾ ॥
ಕುತೂಹಲೇನ ವ್ಯಾಖ್ಯೇಯಂ ಕಾರ್ಣಾಟೀ ರಚ್ಯತೇ ಮಯಾ ।
ಭಾರದ್ವಾಜಕುಲೋದ್ಭೂತ-ನಂಗೀಶಾನ್ವಯಜೇನ ಸಾ ।
ನೃಸಿಂಹಾರ್ಯೇಣ ಸಂಬದ್ಧಾ ಜೀಯಾದಾಚಂದ್ರತಾರಕಮ್ ॥

ಮನಸ್ಸಿನ ದಿವ್ಯಶಕ್ತಿ. ಜೀವಿತದ ಸಾರ್ಥಕತೆಯ ಪಥದಲ್ಲಿ
ಮಾನವ ಕರ್ತವ್ಯ—

"ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಜೀವಿಜಾತದ ಬಂಧಮೋಕ್ಷಗಳಿಗೆ ಮನವೇ ಕಾರಣ. ಆ ಮನ ವಿಷಯವಸ್ತುಗಳತ್ತ

ಹರಿದಾಗ ಆ ವಾಸನೆಗೆ ಮನಸೋತ ಜೀವಿ ಅತ್ತವಾಲುತ್ತದೆ. ಅದು ದೂರವಾದಾಗ ವೈರಾಗ್ಯವು ಉದಯಿಸಿ ಆತ ಮುಕ್ತಿಪಥದತ್ತ ಸಾಗುತ್ತಾನೆ. ಹೀಗಿರುವಾಗ ಕೃತ್ಯಾಕೃತ್ಯಪರಿಜ್ಞಾನಗ್ರಹಣಚತುರನಾದ ಬುದ್ಧಿಜೀವಿ ಮಾನವ ತನ್ನ ಜೀವಿತದ ಸರ್ವೋಚ್ಚತರವಾದ ಲಕ್ಷ್ಯವನ್ನು ಸರ್ವಪ್ರಕಾರದಿಂದಲೂ ಕ್ಲೇಶ-ತೃಪ್ತಿ-ವಾಸನೆ ಮುಂತಾದವುಗಳನ್ನು ಜಯಿಸಲು ಮತ್ತೆ ಶಾಶ್ವತಸುಖ-ಶಾಂತಿ-ಆನಂದಗಳನ್ನು ಹೊಂದಲು ಕೇಂದ್ರೀಕರಿಸಬೇಕು. ಪ್ರತಿವಿವೇಕಶಾಲಿ ಜೀವಿಯು ತನ್ನ ಉದ್ದೇಶವನ್ನು ಸಫಲೀಕರಿಸಲು ಆಯಾ ಪ್ರಕೃತಿ, ಅಭಿರುಚಿ, ಬುದ್ಧಿಶಕ್ತಿ-ಇವುಗಳಿಗೆ ಅನುಸಾರವಾಗಿ ನಾನಾವಿಧವಾದ ಸಾಧನೆಗಳನ್ನು ಆಶ್ರಯಿಸುತ್ತಾನೆ. ಆದರೆ ಆ ಎಲ್ಲ ಜೀವಿಗಳ ಮೂಲ ಉದ್ದೇಶ ಒಂದೇ ಆಗಿರುತ್ತದೆ.

### ಆತ್ಮೋತ್ಥಾನದ ದಾರಿಯಲ್ಲಿ ಮುನಿಪರಂಪರೆಯ ಕೊಡುಗೆ-"ಯೋಗ"

ಪ್ರಾಚೀನಾರ್ಯ-ಋಷಿ-ಮಹರ್ಷಿಗಳು ಈ ಆತ್ಮೋತ್ಥಾನಕ್ಕಾಗಿ ಜಪ-ತಪ ಉಪಾಸನಾ-ಭಕ್ತಿ-ಕರ್ಮಕಾಂಡ ಮೊದಲಾದ ನಾನಾವಿಧಾನಗಳನ್ನು ಪಾತ್ರಭೇದವನ್ನು ಅನುಸರಿಸಿ ತೋರಿಸಿಕೊಟ್ಟಿರುತ್ತಾರೆ. ಅಲ್ಲದೆ ತಮ್ಮ ಅನುಷ್ಠಾನದಲ್ಲಿ ಅದನ್ನು ಅಳವಡಿಸಿ ಅದರಿಂದ ನಿವೃತ್ತಿಮಾರ್ಗದ ಪರಮೋಚ್ಚಸೋಪಾನವನ್ನು ಹತ್ತಿ ವೈರಾಗ್ಯದಿಂದ ಕರ್ಮಸಿದ್ಧಿಯನ್ನು ಪಡೆದು ಮುಕ್ತರೂ ಆಗಿರುತ್ತಾರೆ. ಇದರಿಂದ ಮನುಷ್ಯನು ಸಾಂಸಾರಿಕಜೀವನದಿಂದ ಉತ್ತಮಮಾರ್ಗವನ್ನು ಹಿಡುಕೊಂಡು ತನ್ನ ತನ್ನ ಆತ್ಮೋತ್ಥಾನವನ್ನು ಮಾಡಿಕೊಳ್ಳಲು ಸಾಧ್ಯವಾಗಿದೆ. ಆದ್ದರಿಂದಲೇ ಆತ ಸ್ವಸ್ವಕರ್ಮಾನುಗುಣವಾದ ಫಲಗಳನ್ನು ಹೊಂದಿ ಸ್ವರ್ಗನರಕಾದಿಗಳಲ್ಲಿ ನೊಂದು ಪುಟವಿಟ್ಟ ಚಿನ್ನದಂತೆ ಹೊಳೆಯುತ್ತಾ ಕೈವಲ್ಯವನ್ನು ಹೊಂದಿ ಆತ್ಮಾನಂದವನ್ನು ಪಡೆಯುತ್ತಾನೆ. ಈ ಕೈವಲ್ಯವನ್ನು ಪಡೆಯಲು ಉಚ್ಚಶ್ರೇಣಿಯ ಸಾಧನೆ ಅವಶ್ಯಕ. ಯೋಗಮಾರ್ಗವು ಈ ಸಾಧನೆಯ ದಾರಿಯಲ್ಲಿ ಒಂದು. ಇತರ ಸಾಧನಮಾರ್ಗಗಳಿಗಿಂತ ಇದರಲ್ಲಿ ಒಂದು ವೈಶಿಷ್ಟ್ಯವುಂಟು: ಕಾರಣ ಇತರ ಮಾರ್ಗಗಳು ಕೇವಲ ವಿಚಾರಾತ್ಮಕವಾಗಿ ಮಾನವನ ಬುದ್ಧಿಶಕ್ತಿಯನ್ನು ಅವಲಂಬಿಸಿರುವುದೇ ಆಗಿದೆ ಆದರೆ 'ಯೋಗದರ್ಶನ' ಕೇವಲ ಕ್ರಿಯಾತ್ಮಕ. ಈ ದರ್ಶನದ ಸತ್ಯತೆಯನ್ನು, ಯಥಾರ್ಥತೆಯನ್ನು ಪ್ರತಿಯೊಬ್ಬನೂ ಅಭ್ಯಾಸದಿಂದ ಪಡೆಯಬಹುದು.

### "ಯೋಗದರ್ಶನದ ವೈವಿಧ್ಯತೆ ಜೈನ ವೈದಿಕ ಯೋಗಗಳ ಸಾಮರಸ್ಯ

ಈ ಯೋಗದರ್ಶನವು ಐವತ್ತೊಂದು ಪ್ರಕಾರ. ಅವುಗಳಲ್ಲಿ ಜೈನಯೋಗವು ಶ್ರೀ ಶುಭಚಂದ್ರಾಚಾರ್ಯರ ಜ್ಞಾನಾರ್ಣವದಲ್ಲಿ ವಿಚಾರಾತ್ಮಕವಾಗಿ ವಿವರಿಸಲ್ಪಟ್ಟಿದೆ. ಜೈನಧರ್ಮ ಮತ್ತು ವೈದಿಕಧರ್ಮಸಮಾವೇಶ ಒಂದು ಪರ್ಯಾಪ್ತ ಪರಿಮಾಣದಲ್ಲಿ ಬೆಳೆದುಬಂದಿದೆ. ಬೌದ್ಧಧರ್ಮಕ್ಕೆ ವೈದಿಕಧರ್ಮದೊಡನೆ ಸಂಘರ್ಷವೇರ್ಪಟ್ಟಾಗ

ಜೈನವೈಧಿಕ ಧರ್ಮಗಳ ಸ್ನೇಹಕ್ಕೆ ಕೊಡಲಿಯೇಟು ಬಿದ್ದಿರಬೇಕು. ಆದರಿಂದೀಗ ಜೈನ ವೈದಿಕ ಧರ್ಮಗಳು ಹೊಂದಾಣಿಕೆಯಿಲ್ಲದೆ ಸ್ವತಂತ್ರವಾಗಿ ಬೆಳೆದುಕೊಂಡು ಬಂದಿವೆ ಆದರೆ ಮೂಲರೂಪದಲ್ಲಿ ಜೈನ-ವೈದಿಕ ಧರ್ಮಗಳನ್ನು ತುಲನೆಮಾಡಿದಾಗ ಅಲ್ಪ ಸ್ವಲ್ಪ ಭಿನ್ನತೆಗಳು ಕಂಡುಬಂದರೂ ಮೂಲರೂಪದಲ್ಲಿ ಅವುಗಳ ಆಂತರಿಕ ಸ್ವರೂಪದಲ್ಲಿ ಏಕತೆಯು ಕಂಡುಬರುತ್ತದೆ. ಉದಾಹರಣೆಗೆ ಹೇಳುವುದಾದರೆ "ಅಹಿಂಸಾ ಪರಮೋ ಧರ್ಮಃ" ಎಂಬ ಜೈನಮೂಲಧರ್ಮವಚನಕ್ಕೂ ಆಚರಣೆಗೂ "ಮಾ ಹಿಂಸ್ಯಾತ್ಸರ್ವಾಭೂತಾನಿ" ಎಂಬ ವೈದಿಕ ಧರ್ಮದ ಉಪನಿಷದ್ವಾಕ್ಯಕ್ಕೂ ಅದರ ಆಚರಣೆಗೂ ಯಾವ ವ್ಯತ್ಯಾಸವೂ ಇಲ್ಲವಲ್ಲವೆ? ಹೀಗೆ ಆರಂಭಹಿಂಸೆಯು ಹಿಂಸೆಯಲ್ಲವೆಂದು ಜೈನ ಧರ್ಮ ವೈದಿಕಧರ್ಮಗಳ ಅಭಿಪ್ರಾಯ ಐಕಕಂಠ್ಯವನ್ನು ಪ್ರಕಾಶಪಡಿಸುತ್ತದೆ.

**ಯೋಗಮಾರ್ಗದಲ್ಲಿ ಜೈನರ ಮತ್ತು ವೈದಿಕರ ಸಾಮ್ಯವೈಷಮ್ಯತೆಗಳು**

ಇತರ ಯೋಗ ಮಾರ್ಗಗಳಲ್ಲಿ ಯಮನಿಯಮಾದಿಗಳ ಸ್ವರೂಪ ವಿಚಾರಾಚಾರಾದಿಗಳು ನಿರ್ಣೀತವಾಗಿರುವಂತೆ ಜೈನಯೋಗದಲ್ಲಿ ನಿರೂಪಿತವಾಗಿದ್ದರೂ ಜೈನರು ಧ್ಯಾನಯೋಗಕ್ಕೆ ಮಹತ್ತರ ಪ್ರಾಧಾನ್ಯವೀಯುತ್ತಾರೆ. ಈ ಅಂಶ ವೈದಿಕಧರ್ಮದ ಅಷ್ಟಾಂಗಯೋಗದಲ್ಲಿಯೂ ನಿರೂಪಿತವಿದೆ ಮತ್ತೆ ಪ್ರಾಣಾಯಾಮವಿಚಾರದಲ್ಲಿ ಜೈನಾಚಾರ್ಯರ ಅಭಿಪ್ರಾಯದಲ್ಲಿ ಬಲತ್ಕಾರ ಮಾಡಬಾರದೆಂಬುದು ಅವರ ಅಭಿಮತ ಕಾರಣ ಅದರಿಂದ ಶರೀರಕಹಿಂಸೆಯೇರ್ಪಡುವುದೆಂಬುದು ಅವರ ಅಭಿಪ್ರಾಯ. ಆದ್ದರಿಂದಲೇ ಆಚಾರ್ಯಹೇಮಚಂದ್ರಸೂರಿಗಳು--

"ತನ್ನಾಪ್ನೋತಿ ಮನಃ ಸ್ವಾಸ್ಥ್ಯಂ ಪ್ರಾಣಾಯಾಮೈಃ ಕದರ್ಥಿತಮ್ ।
ಪ್ರಾಣಸ್ಯಾಯಮನೇ ಪೀಡಾ ತಸ್ಯಾಂ ಸ್ಯಾಚ್ಚಿತ್ತವಿಪ್ಲವಃ ॥

ಪ್ರಾಣಾಯಾಮದಿಂದ ಉಂಟಾಗುವ ಶಾರೀರಕ ಗ್ಲಾನಿಯೊಡನೆ ಮಾನಸಿಕ ಸ್ವಾಸ್ಥ್ಯವೂ ಕಳಚಿಕೊಳ್ಳುತ್ತದೆ, ಎಂದು ಉಸಿರಿರುವರು.

**ಜೈನಯೌಗಿಕ ಅಸಂದೃಷ್ಟಿಗಳು ಮತ್ತು ವೈದಿಕ ಅಷ್ಟಾಂಗಯೋಗ**

ಆಚಾರ್ಯ ಹರಿಭದ್ರಸೂರಿಗಳು- ಮಿತ್ರಾ, ತಾರಾ, ಬಲಾ, ದೀಪ್ತಾ, ಸ್ಥಿರಾ, ಕಾಂತಾ, ಪ್ರಭಾ, ಪರಾ ಎಂಬ ಎಂಟು ಯೌಗಿಕ ದೃಷ್ಟಿಗಳನ್ನು ವರ್ಣಿಸಿರುತ್ತಾರೆ ಇದು ದಿಗಂಬರ ಜೈನರ ಮುಖ್ಯಾಭಿಪ್ರಾಯ ಈ ಅಂಶ ವೈದಿಕ ಪಾತಂಜಲಯೋಗದ, ಅಷ್ಟಾಂಗಯೋಗದ ಸಮಾನವಾಗಿದೆ.

**ಜೈನಯೋಗ ದರ್ಶನದಲ್ಲಿ 'ಜ್ಞಾನಾರ್ಣವದ' ಸ್ಥಾನ**

ದಿಗಂಬರ ಸಂಪ್ರದಾಯದಲ್ಲಿ ಜ್ಞಾನಾರ್ಣವ'ವು ಯೋಗ ಸಾಧನೆಯ ವಿಧಿ ವಿಧಾನಗಳನ್ನು ವಿವರಿಸುತ್ತದೆ ಇದು ವೈದಿಕ ಸಂಪ್ರದಾಯದ ರಾಜಯೋಗದೊಡನೆ

ಸಂಸಮಾನವಾಗಿ ಬೆಳಗುತ್ತಲಿದೆ. ಇದೊಂದು ಜೈನಯೋಗಗ್ರಂಥಗಳಲ್ಲಿಯೇ ಮೇರು ಕೃತಿ

**ಶ್ರುತಸಮನ್ವಯದಲ್ಲಿ ನಮ್ಮ ಪಾತ್ರ, ವ್ಯಾಖ್ಯಾಕರಣೋದ್ದೇಶ**

ಆದ್ದರಿಂದ ಆಧುನಿಕರಾದ ನಾವು ಸಹೋದರರಂತೆ ಸಮನ್ವಯ ವಾದಕ್ಕೆ ಬಗ್ಗಿ ಪರಸ್ಪರಮೈತ್ರಿಯಿಂದ ಸಹೋದರರಂತೆ ಕೂಡಿ ಬೆಳೆಯಬೇಕೆಂಬ ಕುತೂಹಲದಿಂದ ಈ ಜ್ಞಾನಾರ್ಣವದ ಅನುವಾದ ಮಾಡಲು ಉದ್ಯುಕ್ತವಾಗಿರುವೆವು

**ಯೋಗಶಬ್ದಾರ್ಥ, ಅಲ್ಲಿ ಮನಸ್ಸಿನ ಸ್ಥಾನ**

'ಯೋಗಃ ಎಂದರೆ- ಸಂಬಂಧ. ಆತ್ಮಸಂಬಂಧವನ್ನು ನಮಗೆ ತಿಳಿಸುವುದು ಎಂದರ್ಥ. ಇದನ್ನೇ ಕೋಶಕಾರ ಯೋಗಃ ಸಂಹನನೋಪಾಧ್ಯಾನ ಸಂಗತಿ ಯುಕ್ತಿಷು''- ಎಂದು ವರ್ಣಿಸಿದ್ದಾನೆ- ಎಂದರೆ- ಉಚ್ಛೃಂಖಲವಾಗಿ ಸಿಕ್ಕಿದಕಡೆ ಓಡುವ ಮನಸ್ಸನ್ನು ತಡೆಹಿಡಿದು ಆತ್ಮನಲ್ಲಿ ಕೇಂದ್ರೀಕರಿಸಿ ಆತ್ಮಸ್ವಾನವನ್ನು ಮಾಡಿ ತದ್ದ್ವಾರಾ ಮುಕ್ತಿಪಥವನ್ನು ಹೋಗಲುಜ್ಜುಗಿಸುವುದು ಎಂದರ್ಥ. ಇಂತಹ ಯೋಗವನ್ನು ವಿವರಿಸುವುದು ತೋರುವುದೇ ಯೋಗದರ್ಶನ

**ವೈದಿಕದರ್ಶನದಲ್ಲಿ ಯೋಗಶಬ್ದಾರ್ಥ**

ವೈದಿಕವಾಙ್ಮಯದಲ್ಲಿ ಸುಪ್ರಸಿದ್ಧನಾದ ಭಗವಾನ್ ಪತಂಜಲಿಯು "ಯೋಗಃ ಚಿತ್ತವೃತ್ತಿ ನಿರೋಧಃ"* ಎಂದರೆ ಮಾನವಜೀವಿಯ ಮನಸ್ಸಿನ ನಡೆ ಬರ್ಹಿಮುಖ ವಾದಾಗ ಸಾಂಸಾರಿಕವಿಷಯವಸ್ತುಗಳ ಕಡೆ ಹರಿಯುವ ಅದರ ನಡೆಯನ್ನು ಅಂತ ರ್ಮುಖಗೊಳಿಸಿ ಆಧ್ಯಾತ್ಮವಿಷಯದಲ್ಲಿ ಅದು ಕೇಂದ್ರೀಕೃತವಾಗುವಂತೆ ತಡೆಹಿಡಿ ಯುವುದೇ 'ಯೋಗಃ' ಎಂಬ ಅರ್ಥವನ್ನು ವಿವರಿಸಿದ್ದಾನೆ ಇದು ಜೈನ ದರ್ಶನ ಕ್ಕೇನೂ ವಿರೋಧಿಯುಲ್ಲ

ಈ ಯೋಗದರ್ಶನಕ್ಕೆ ಮನಸ್ಸು ಕೇಂದ್ರ ಬಿಂದುವಿದ್ದಂತೆ. ಈ ಮನಸ್ಸನ್ನು ಆತ್ಮದರ್ಶನದಲ್ಲಿ ಕೇಂದ್ರೀಕರಿಸುವುದು ದುಸ್ಸಾಧ್ಯ. ಇಂತಹ ಒಂದು ಮನಸ್ಸನ್ನು ಸ್ವಾಧೀನಗೊಳಿಸಬಲ್ಲ ಯೋಗವನ್ನು ಸುಸ್ಥಿರಗೊಳಿಸಬಲ್ಲ ಸ್ಥಾನಗಳು ಅಧಿಕಾರಿ ಭೇದದಿಂದ ಭಿನ್ನಭಿನ್ನವಾಗಿರುವುದು ಸಹಜ. ಅದರಲ್ಲಿ ಕೆಲವರ ಅಭಿಪ್ರಾಯವನ್ನು ಆಚಾರ್ಯ ಶುಭಚಂದ್ರರು ಇಂತು ವರ್ಣಿಸಿರುತ್ತಾರೆ- "ಅಥಕೈಶ್ಚಿತ್" ಇತ್ಯಾದಿಯಾಗಿ.

ಯೋಗಸ್ಥಾನಗಳು ಅವಕ್ಕೆ ಅಂಗನಾಮತಗಳಾಗಿ- ಯಮ-ನಿಯಮ-ಆಸನ-ಪ್ರಾಣಾಯಾಮ-ಪ್ರತ್ಯಾಹಾರ-ಧಾರಣಾ-ಧ್ಯಾನ-ಸಮಾಧಿ ಎಂದು ಎಂಟು ಬಗೆ ಯಾಗಿವೆ, ಇದು ಕೆಲವರ ಮತ.

---

* ಪಾತಂಜಲ ಯೋಗಸೂತ್ರ- ಸಮಾಧಿಪಾದ, ಸೂತ್ರ-೨.

## ಓದುಗರ ಪತ್ರ-

೨೫-೧೧-೮೩
ಮೈಸೂರು.

ಜಿನವಾಣಿ ಸಂಪಾದಕರಿಗೆ,

ಸ್ವಾಮಿ,

ತಮ್ಮ ಈ ತಿಂಗಳ ಸಂಚಿಕೆಯನ್ನು ಆಕಸ್ಮಾತ್ ನಮ್ಮ ಜೈನಮಿತ್ರರೊಬ್ಬರ ಮನೆಯಲ್ಲಿ ನೋಡಿ ಓದಲು ತುಂಬಾ ಹರ್ಷವಾಗಿದೆ. ಅದರಲ್ಲಿ ಅಪೂರ್ವ ವಿಷಯವಾದ "ತ್ರಿಲೋಕದರ್ಶನ" ಉಪನ್ಯಾಸಮಾಲೆಯನ್ನು ಪ್ರಾರಂಭ ಮಾಡಿದ್ದೀರಿ. ಇದು ಅತ್ಯಂತ ಸ್ವಾಗತಾರ್ಹವಾಗಿದೆ. ಶ್ರೀಯುತ ಭುವನಹಳ್ಳಿ ಡಿ. ಶ್ರೀಪತಿಜೋಯಿಸರು ಈ ಉಪನ್ಯಾಸಮಾಲೆಯಲ್ಲಿ ಜೈನ ಸಿದ್ಧಾಂತದಲ್ಲಿ ಹೇಳಿರುವಂತೆ ಮೂರು ಲೋಕಗಳ ದರ್ಶನವನ್ನು ವಾಚಕರಿಗೆ ವಿವರವಾಗಿ ಮಾಡಿಸಲು ತೊಡಗಿದ್ದಾರೆ. ಬಲು ಗಹನವಾದ ವಿಷಯವನ್ನು ಬಹಳ ಸರಳವಾಗಿ-ಸುಂದರವಾಗಿ ನಿರೂಪಿಸಿದ್ದಾರೆ. ಮುಂದೆಯೂ ತಮ್ಮ ಸಂಚಿಕೆಗಳು ಇವರ ಈ ಭವ್ಯ ಲೇಖನ ದರ್ಶನವನ್ನು ನಮಗೆ ಮಾಡಿಸಲಿ ಎಂದು ಆಶಿಸುತ್ತೇವೆ. ಅವರಿಗೆ ಮತ್ತು ಅವರ ಸುಂದರ ಚಿತ್ರಣವನ್ನು ವಾಚಕರ ಮುಂದಿಟ್ಟಿರುವ ತಮಗೆ ಧನ್ಯವಾದಗಳು. ಈ ಉಪನ್ಯಾಸ ಮಾಲಿಕೆಯ ಸುಂದರ-ಸರಳ ನಿರೂಪಣೆಯ ಮುಂದಿನ ಭಾಗಗಳಿಗಾಗಿ ಕಾಯುತ್ತಿರುವ, ನಿರೀಕ್ಷಿಸುತ್ತಿರುವ,

ತಮ್ಮ ನಂಬುಗೆಯ,
ಸುಧೀಂದ್ರ, ಸುಬ್ರಹ್ಮಣ್ಯ, ಶಕುಂತಲ,

---

## ಅಮರ ತ್ಯಾಗಿ

# ಬಾಹುಬಲಿ

ರಚನಾಕಾರರು:

ಎಸ್.ಬಿ. ಸಾಲಿಗ್ರಾಮಚಂದ್ರಕಾಂತ್

**ಪಾತ್ರಪರಿಚಯ:**

೧) ಆದಿನಾಥ– ಅಯೋಧ್ಯೆ ಮತ್ತು ಪಾದನಪುರದ ಅರಸು

೨) ಮರುದೇವಿ– ಆದಿನಾಥನ ಮಡದಿ

೩) ವೃಷಭನಾಥ– ಆದಿನಾಥನ ಮಗ

೪) ಯಶಸ್ವತಿ– ವೃಷಭನಾಥನ ಮೊದಲನೆ ಮಡದಿ

೫) ಸುನಂದೆ– ವೃಷಭನಾಥನ ಎರಡನೆ ಮಡದಿ

೬) ಭರತ– ಯಶಸ್ವಿನಿಯ ಮಗ

೭) ಬಾಹುಬಲಿ– ಸುನಂದೆಯ ಮಗ

**ಇತರ ಪಾತ್ರಗಳು:**

ಮಂತ್ರಿಗಳು, ದಳಪತಿ, ಸೇನಾಧಿಪತಿ, ಪುರ ಪ್ರಮುಖರು, ಹೊಗಳು ಭಟ್ಟರು, ಪುರೋಹಿತರು, ನೃತ್ಯಗಾತಿ, ಚಾರ, ಇತ್ಯಾದಿ, ಇತ್ಯಾದಿ.

### ಅಂತಃಪುರದ ದೃಶ್ಯ– ೧

(ಆದಿನಾಥ ಮತ್ತು ಮರುದೇವಿ ಅಂತಃಪುರದಲ್ಲಿ)

ಆದಿನಾಥ: (ಕಿರು ಧ್ವನಿಯಲ್ಲಿ) ರಾಣಿ! ಮರುದೇವಿ ಏನನ್ನೋ ಆಲೋಚಿಸುವಂತಿದೆ.

ಮರುದೇವಿ: ಸ್ವಾಮಿ! ವೃಷಭನಾಥನು ಬೆಳೆದು ಪ್ರಾಪ್ತವಯಸ್ಕನಾಗಿರುವನ್ನು ಅನುರೂಪಳಾದ ತಕ್ಕ ಕನ್ಯೆಯನ್ನು ತಂದು ವಿವಾಹ ಮಾಡುವ ಚಿಂತೆಯಲ್ಲವೆ?

ಲೋಕದ ಎತ್ತರ ೭ ರಜ್ಜುವಿನಿಂದ ಗುಣಿಸುವುದರಿಂದ ೨೮×೭ = ೧೯೬ ರಜ್ಜು ಗಳಾದವು ಇದು ಅಧೋಲೋಕದ ಘನಫಲ

## ಊರ್ಧ್ವ ಲೋಕದ ಘನಫಲ

ಮಧ್ಯಲೋಕದಲ್ಲಿ ಪೂರ್ವ-ಪಶ್ಚಿಮ ದಿಕ್ಕಿನ ಅಗಲ ೧ ರಜ್ಜು ಮುಂದೆ ಬ್ರಹ್ಮಸ್ವರ್ಗದ ಹತ್ತಿರ ೫ ರಜ್ಜು, ಎರಡನ್ನೂ ಸೇರಿಸುವುದರಿಂದ ೧+೫ = ೬ ರಜ್ಜುಗಳಾದವು ಇದನ್ನು ಅರ್ಧ ಮಾಡಿ ೬÷೨ = ೩ ದಕ್ಷಿಣ ಉತ್ತರದ ದಪ್ಪ ೭ ರಜ್ಜುವಿನಿಂದ ಗುಣಿಸಿ ೩×೭ = ೨೧ ಆಯಿತು. ಇದರಲ್ಲಿ ಬ್ರಹ್ಮ ಸ್ವರ್ಗದ ತನಕದ ಎತ್ತರ ೩ ೧/೨ ರಜ್ಜುವಿನೊಡನೆ ಗುಣಿಸಿ ೩×೭ = ೨೧× ೩ ೧/೨ = ೭೩ ೧/೨ ರಜ್ಜುವಾಯಿತು ಮತ್ತು ಬ್ರಹ್ಮಸ್ವರ್ಗದಿಂದ ಮುಂದೆ ಲೋಕದ ಕೊನೆಯ ಘನಫಲ ಇಷ್ಟೇ ಇದೆ ಅಂದರೆ ೭೩ ೧/೨+೭೩ ೧/೨= ೧೪೭ ರಜ್ಜು ಪ್ರಮಾಣ ಸಂಪೂರ್ಣ ಊರ್ಧ್ವಲೋಕದ ಘನಫಲವಾಗಿದೆ

ಅಧೋಲೋಕದ ಘನಫಲ ೧೯೬ ಮತ್ತು ಊರ್ಧ್ವಲೋಕದ ಘನಫಲ ೧೪೭ ರಜ್ಜು ಇದೆ ಎರಡನ್ನೂ ಸೇರಿಸುವುದರಿಂದ ೧೯೬+೧೪೭ = ೩೪೩ ರಜ್ಜು ಪ್ರಮಾಣ ಇಡೀ ಲೋಕದ ಘನಫಲವಾಗುತ್ತದೆ

ಈ ಪ್ರಕಾರ ಲೋಕಾಕಾಶದ ಘನಫಲ ೩೪೩ ರಜ್ಜುಪ್ರಮಾಣ ಆಗಿದೆ

## ತ್ರಸನಾಲಿಯ ವರ್ಣನೆ

ಲೋಕದ ಬಹು ಮಧ್ಯ ಭಾಗದಲ್ಲಿ ಒಂದು ರಜ್ಜು ಅಗಲ ಒಂದು ರಜ್ಜು ದಪ್ಪ ಮತ್ತು ಸ್ವಲ್ಪ ಕಡಿಮೆ ೧೩ ರಜ್ಜು ಎತ್ತರ ತ್ರಸನಾಲಿಗಳಿವೆ ಅಂದರೆ ಅವು ತ್ರಸ ಜೀವಿಗಳ ನಿವಾಸ ಕ್ಷೇತ್ರವಾಗಿವೆ ಅಂದರೆ ಈ ತ್ರಸನಾಲಿಗಳ ಒಳಗೇ ತ್ರಸ ಜೀವಿಗಳು ಇರುತ್ತವೆ, ಹೊರಗೆ ಅಲ್ಲ ೧೩ ರಜ್ಜುಗಳಿಗೆ ಸ್ವಲ್ಪ ಕಡಿಮೆ ಎಂದು ಯಾವುದನ್ನು ಹೇಳಿದೆಯೋ ಅದರ (ಕಡಿಮೆ)ಯ ಪ್ರಮಾಣ

೩೨೧೬೨೨೪೧ ೨/೩ ಧನುಷ್ ಕಡಿಮೆಯುಳ್ಳ ೧೩ ರಜ್ಜು

ಈ ತ್ರಸನಾಲಿಯ ಹೊರಗೂ ಕೂಡ ಉಪಪಾದ, ಮಾರಣಾಂತಿಕ ಸಮು ದ್ಘಾತ ಮತ್ತು ಕೇವಲಿಸಮುದ್ಘಾತ ಈ ಮೂರು ಅಪೇಕ್ಷೆಗಳಿಂದ ತ್ರಸಜೀವಿ ಗಳ ಅಸ್ತಿತ್ವ ಉಂಟು

## ಉಪಪಾದ

ಯಾವುದೇ ವಿವಕ್ಷಿತ ಭಾವದ ಪ್ರಥಮ ಸಮಯದ ಪರ್ಯಾಯವನ್ನು ಉಪಪಾದ ಎನ್ನುತ್ತೇವೆ ಲೋಕದ ಕೊನೆಯ ವಾತವಲಯದಲ್ಲಿ ಇರುವ ಯಾವುದೇ ಜೀವ ಮರಣ ಹೊಂದಿ ವಿಗ್ರಹಗತಿಯ ಮುಖಾಂತರ ತ್ರಸನಾಲಿಯಲ್ಲಿ ತ್ರಸಪ ರ್ಯಾಯದಿಂದ ಉತ್ಪನ್ನವಾಗುವುದು ಆ ಜೀವ ಯಾವ ಸಮಯ ಮರಣ ಹೊಂದಿ ಮೊದಲ ಜನ್ಮ ತಳೆಯುತ್ತಾನೋ ಆ ಸಮಯ ತ್ರಸ ಎಂಬ ಹೆಸರಿನ ಕರ್ಮದ ಉದಯ ಬರುವುದರಿಂದ ತ್ರಸ ಪರ್ಯಾಯವನ್ನು ಧಾರಣೆ ಮಾಡಿಕೊಂಡರೂ ಸಹ ತ್ರ ಸೆಯ ಹೊರಗೆ ಇದ್ದಾನೆ ಆದ್ದರಿಂದ ಉಪಪಾದಕ್ಕಿಂತ ತ್ರಸ ಜೀವ ತ್ರಸನಾಲಿಯ ಹೊರಗೆ ಇರುತ್ತಾನೆ

## ಮಾರಣಾಂತಿಕ ಸಮುದ್ಘಾತ

ತ್ರಸನಾಲಿಯಲ್ಲಿರುವ ಯಾವುದೇ ಜೀವದ ಅಂತರ್ಮುಹೂರ್ತ ಮೊದಲು ಮಾರಣಾಂತಿಕ ಸಮುದ್ಘಾತದ ಮುಖಾಂತರ ತ್ರಸನಾಲಿಯ ಹೊರಪ್ರದೇಶದ ಸ್ಪರ್ಶ ಮಾಡಿತು ಏಕೆಂದರೆ ಅದನ್ನು ಮೃತಿಹೊಂದಿಸಿ ಅದೇ ಸ್ಥಾವರದಲ್ಲಿ ಉತ್ಪನ್ನವಾ ಗುವುದಾದರೆ ಆ ಸಮಯದಲ್ಲಿ ಕೂಡ ತ್ರಸಜೀವನದ ಅಸ್ತಿತ್ವ ತ್ರಸನಾಲಿಯ ಹೊರಗೂ ಇರುತ್ತದೆ

## ಕೇವಲಿ ಸಮುದ್ಘಾತ

ಯಾವ ಆಯುಷ್ಯಕರ್ಮದ ಸ್ಥಿತಿ ಅಂತರ್ಮುಹೂರ್ತ ಮಾತ್ರವೇನೇ ಉಳಿದುಕೊಳ್ಳುವುದು, ಆಗ ನಾಮಗೋತ್ರ ಮತ್ತು ವೇದನೀಯ ಕರ್ಮದ ಸ್ಥಿತಿ ಅಧಿಕವಾಗುತ್ತದೆ; ಆಗ ಸಂಯೋಗ ಕೇವಲಿ ಭಗವಾನ ದಂಡ, ಕಪಾಟ, ಪ್ರತರ ಲೋಕಪೂರಣ ಸಮುದ್ಘಾತವಾಗುತ್ತದೆ ಹೀಗೆ ಆಗುವುದರಿಂದ ಮೂರು ಕರ್ಮಗಳ ಸ್ಥಿತಿಯೂ ಸಹ ಆಯುಃ ಕರ್ಮದ ಪರಿಸಮಾನವಾಗಿರುತ್ತದೆ ಈ ಮೂರು ಅವ ಸ್ಥೆಗಳಲ್ಲಿ ತ್ರಸ ಜೀವ ತ್ರಸನಾಲಿಯ ಹೊರಗೂ ಇರುತ್ತದೆ.

## ಕೋಶ್ ಮತ್ತು ಯೋಜನ ಪ್ರಮಾಣ

ಪುದ್ಗಲದ ಅತ್ಯಂತ ಚಿಕ್ಕ ಅಣುವನ್ನು ಪರಮಾಣು ಎಂದು ಹೇಳುತ್ತಾರೆ.

ಇಂತಹ ಅನಂತಾನಂತ ಪರಮಾಣುಗಳು– ೧ ಅವಸನ್ನಾಸನ್ನ
೮ ಅವಸನ್ನಾಸನ್ನಗಳು– ೧ ಸನ್ನಾಸನ್ನ
೮ ಸನ್ನಾಸನ್ನಗಳು– ೧ ಪುಟಿರೇಣು
೮ ಪುಟಿರೇಣುಗಳು– ೧ ತ್ರಸರೇಣು
೮ ತ್ರಸರೇಣುಗಳು– ೧ ರಥರೇಣು
೮ ರಥರೇಣುಗಳು– ಉತ್ತಮ ಭೋಗಭೂಮಿ ತುದಿಯ ಅಗ್ರಭಾಗ
ಉತ್ತಮ ಭೋಗಭೂಮಿ ತುದಿಯ ೮ ಅಗ್ರಭಾಗಗಳು–
ಮಧ್ಯಭೋಗಭೂಮಿ ತುದಿಯ ೧ ಅಗ್ರಭಾಗ

ಮಧ್ಯಭೋಗಭೂಮಿ ತುದಿಯ ೮ ಅಗ್ರಬಾಗಗಳು–
ಜಘನ್ಯ ಭೋಗಭೂಮಿ ತುದಿಯ ೧ ಅಗ್ರಭಾಗ

ಜಘನ್ಯ ಭೋಗಭೂಮಿಯ ೮ ತುದಿಗಳ ಅಗ್ರಭಾಗಗಳು–
ಕರ್ಮಭೂಮಿ ತುದಿಯ ಒಂದು ಅಗ್ರಭಾಗ
ಕರ್ಮಭೂಮಿ ತುದಿಯ ೮ ಅಗ್ರಭಾಗಗಳು– ೧ ಲಿಕ್ಷಾ
೮ ಲಿಕ್ಷಾಗಳು– ೧ ಜೂಂ
೮ ಜೂಂಗಳು– ಒಂದು ಜೌ
ಎಂಟು ಜೌಗಳು– ಒಂದು ಅಂಗುಲ

ಇದನ್ನೇ ಉತ್ಸೇಧಾಂಗುಲ ಎನ್ನುವರು. ಇದರ ೫೦೦ರಷ್ಟು ಪ್ರಮಾಣಾಂಗುಲವಾಗುತ್ತದೆ.
ಆರು ಉತ್ಸೇಧಾಂಗುಲಗಳು— ಒಂದು ಪಾದ

---

**ಸೂಚನೆ–**

ದಕ್ಷಿಣದಲ್ಲಿ ರಾಜು ಎಂದು ಪ್ರಯೋಗಿಸಲ್ಪಡುವ ಪದವನ್ನು ಉತ್ತರದಲ್ಲಿ ರಜ್ಜು ಎಂದು ಕರೆಯುತ್ತಾರೆ.

ಎರಡು ಪಾದಗಳು- ಒಂದು ವಾಲಿಸ್ತ
ಎರಡು ವಾಲಿಸ್ತಗಳು-ಒಂದು ಹಸ್ತ
ಎರಡು ಹಸ್ತಗಳು-ಒಂದು ರಿಕ್ಕೂ, ೨ ರಿಕ್ಕುಗಳು-ಒಂದು ಧನುಷ್
೨೦೦೦ ಧನುಷ್‌ಗಳು-ಒಂದು ಕೋಸ್
ನಾಲ್ಕು ಕೋಸ್‌ಗಳು-ಒಂದು ಲಘುಯೋಜನ
ಐನೂರು ಲಘು ಯೋಜನಗಳು-ಒಂದು ಮಹಾಯೋಜನ

ಒಂದು ಮಹಾಯೋಜನದಲ್ಲಿ ೨೦೦೦ ಕೋಸ್‌ಗಳಿರುತ್ತವೆ. ಅಸಂಖ್ಯಾತ ಯೋಜನಗಳಿಗೆ ಒಂದು ರಾಜು ಆಗುವುದು

ಅಂಗುಲದಲ್ಲಿ ಮೂರು ಭೇದಗಳಿವೆ: ೧. ಉತ್ಸೇಧಾಂಗುಲ, ೨ ಪ್ರಮಾಣಾಂಗುಲ, ೩. ಆತ್ಮಾಂಗುಲ, ಅಗ್ರ, ಲಿಕ್ಷಾ ಜೂಂ ಮತ್ತು ಜೌಗಳಿಂದುಂಟಾದ ಅಂಗುಲವೇ ಉತ್ಸೇಧಾಂಗುಲ. ಐದುನೂರು ಉತ್ಸೇಧಾಂಧಾಂಗುಲಗಳಿಗೆ ಒಂದು ಪ್ರಮಾಣಾಂಗುಲವಾಗುತ್ತದೆ ಅವಸರ್ಪಿಣೀ ಕಾಲದ ಪ್ರಥಮ ಭರತ ಚಕ್ರವರ್ತಿಯ ಒಂದು ಅಂಗುಲವು ಪ್ರಮಾಣಾಂಗುಲಕ್ಕೆ ಸಮನಾಗಿದೆ. ಭರತ ಮತ್ತು ಐರಾವತ ಕ್ಷೇತ್ರಗಳಲ್ಲಿನ ಮನುಷ್ಯರ ಅಂಗುಲವು ಆತ್ಮಾಂಗುಲಕ್ಕೆ ಸಮನಾಗುತ್ತದೆ.

ಉತ್ಸೇಧಾಂಗುಲದಿಂದ ಉತ್ಸೇಧ ಕೋಸ ಮತ್ತು ನಾಲ್ಕು ಉತ್ಸೇದ ಕೋಸದಿಂದ ಒಂದು ಉತ್ಸೇಧ ಯೋಜನ (ಲಘುಯೋಜನ) ಆಗುವುದು. ಈ ಉತ್ಸೇಧ ಯೋಜನದ ನೂರು ಪಟ್ಟು ಉಳ್ಳದ್ದು ಒಂದು ಮಹಾಯೋಜನ.

## ಉತ್ಸೋಧಾಂಗುಲದ ಉಪಯೋಗ

ದೇವ, ಮನುಷ್ಯ, ತಿರ್ಯಂಚ ಮತ್ತು ನಾರಕೀಯ ಶರೀರದ ಎತ್ತರ ಮತ್ತು ನಾಲ್ಕುಪ್ರಕಾರದ ದೇವತೆಗಳ ನಿವಾಸಸ್ಥಾನ, ನಗರಗಳ ವಿಸ್ತೀರ್ಣವು ಉತ್ಸೇಧಾಂಗುಲ ಮತ್ತು ಉತ್ಸೇಧ ಕೋಸಗಳಿಂದ ಅಳೆಯಲ್ಪಡುತ್ತವೆ.

## ಪ್ರಮಾಣಾಂಗುಲದ ಉಪಯೋಗ

ದ್ವೀಪ, ಸಮುದ್ರ, ಪರ್ವತ, ನದಿ, ಕುಂಡ, ಸರೋವರ, ಜಗತ್ತು ಮತ್ತಿತರ ಕ್ಷೇತ್ರಗಳೆಲ್ಲವೂ ಪ್ರಮಾಣಾಂಗುಲದಿಂದ ಅಳೆಯಲ್ಪಡುತ್ತವೆ.

ಆದಿನಾಥ: (ಸಂತೋಷದಿಂದ) ಹೌದು ದೇವಿ. ನಿನ್ನ ಯೋಚನೆ ಸಮಂಜಸವಾಗಿದೆ. ಕುಮಾರನಿಗೆ ವಿವಾಹ ಮಾಡುವುದು ಒಳಿತು, ಆತನನ್ನೇ ವಿಚಾರಿಸೋಣ.

ಮರುದೇವಿ; ಆಗಲಿ ಸ್ವಾಮಿ ! [ಅಮಿತಾನಂದದಿಂದ ನುಡಿದಳು]

ಆದಿನಾಥ: ಯಾರಲ್ಲಿ ?

ಚಾರ: (ಮೊಣಕಾಲೂರಿ ನಮಸ್ಕರಿಸುತ್ತಾ) ಮಹಾಪ್ರಭುಗಳಿಗೆ ನಮಸ್ಕರಿಸುವೆನು ಅಪ್ಪಣೆಯಾಗಬೇಕು.

ಆದಿನಾಥ: ಈಗಲೆ ಹೋಗಿ ಯುವರಾಜನನ್ನು ಬರಹೇಳು !

ಚಾರ: ಆಗಲಿ ಮಹಾಪ್ರಭು [ಎಂದು ಹೇಳಿ ವಿನಯದಿಂದ ಹೊರಡುವನು]

ಆದಿನಾಥ: ದೇವಿ ! ವಿವಾಹಕ್ಕೆ ಕುಮಾರನು ಸಮ್ಮತಿಸುವನೆ ?

ಮರುದೇವಿ: (ಹಸನ್ಮುಖಿಯಾಗಿ) ಸ್ವಾಮಿ ! ಹಾಗೇಕೆ ಸಂದೇಹಪಡುವಿರಿ ವಿವಾಹಕ್ಕೆ ಸಮ್ಮತಿಸುತ್ತಾನೆ ನಮ್ಮ ಕುಮಾರನಲ್ಲವೆ !

(ವೃಷಭನಾಥನು ಪ್ರವೇಶಿಸುವನು)

ವೃಷಭನಾಥ: (ಮಾತಾಪಿತೃಗಳನ್ನು ಕಂಡು ಅನನ್ಯ ಭಕ್ತಿಯಿಂದ) ಮಾತಾಪಿತೃಗಳಿಗೆ ಶಿರಸಾ ನಮಸ್ಕರಿಸುವೆನು. ತಂದೆಯವರೇ ನೀವು ನನ್ನನ್ನು ಹೇಳಿ ಕಳುಹಿಸಲು ಕಾರಣವೇನು ? ತಿಳಿದುಕೊಳ್ಳಬಹುದೆ ? !

ಆದಿನಾಥ! (ವಾತ್ಸಲ್ಯಪೂರ್ವಕವಾಗಿ) ಕುಮಾರ ! ವೃಷಭನಾಥ ನೀನೀಗ ಬಾಲ್ಯದಿಂದ ಯೌವನಾವಸ್ಥೆಗೆ ಕಾಲಿಟ್ಟಿರುವೆ, ನಿನ್ನ ವಿವಾಹ ಮಾಡುವ ವಿಷಯವನ್ನು ಪ್ರಸ್ತಾಪಿಸಲು

ಮರುದೇವಿ; (ಸಂತೋಷಭರಿತಳಾಗಿ) ನಿನಗೆ ತಕ್ಕ ಕನ್ಯೆಯನ್ನು ವಿವಾಹ ಮಾಡಿಕೊಂಡು ನಮ್ಮ ವಂಶಜ್ಯೋತಿ ಬೆಳಗು ಕುಮಾರಾ ! ! !

ವೃಷಭನಾಥ; (ವಿನಯದಿಂದ) ತಂದೆಯೇ ! ತಾಯಿಯೇ ! ನಿಮ್ಮ ಸಂತೋಷವೆ ನನ್ನ ಸಂತೋಷ ನಿಮ್ಮ ಇಚ್ಛೆಯಂತೆಯೇ ಆಗಲಿ

ಆದಿನಾಥ-ಮರುದೇವಿ: (ಅಮಿತ ಸಂತೋಷದಿಂದ) ಕೃತಾರ್ಥರಾದೆವು ಕುಮಾರ ನಾವೆ ಧನ್ಯರು ನಿನ್ನಂಥ ಮಗನನ್ನು ಪಡೆದ ನಾವೇ ಧನ್ಯರು

ವೃಷಭನಾಥನಿಗೆ ಯಶಸ್ವತಿ ಮತ್ತು ಸುನಂದ ಎಂಬ ಚಲುವೆಯರೊಡನೆ ವಿವಾಹವಾಯಿತು ಹಿರಿಯ ಮಡದಿಯಲ್ಲಿ ನೂರು ಗಂಡು ಮಕ್ಕಳಾದವು. ಕಿರಿಯ ಮಡದಿಯಾದ ಸುನಂದೆಯಲ್ಲಿ ಒಂದು ಗಂಡು-ಎರಡು ಹೆಣ್ಣುಮಕ್ಕಳು ಜನಿಸಿದರು. ಯಶಸ್ವತಿಯಲ್ಲಿ ಹುಟ್ಟಿದ ಹಿರಿಯ ಮಗನೆ ಭರತ, ಸುನಂದೆಯ ಮಗನೆ ಬಾಹುಬಲಿ ..

ಭರತ, ಬಾಹುಬಲಿ ಈರ್ವರೂ ವಿದ್ಯೆಯನ್ನು ಕಲಿಯುವುದರಲ್ಲಿ ತುಂಬಾ ಆಸಕ್ತಿಯನ್ನು ವಹಿಸಿದರು. ಸರ್ವ ವಿದ್ಯೆಯನ್ನು ಕಲಿತು ಸರ್ವವಿದ್ಯಾಪಾರಂಗತರಾದರು ಅತ್ಯಂತ ಸುಂದರರೂ, ಭುಜಬಲಪರಾಕ್ರಮಿಗಳೂ ಆಗಿ ಪ್ರಾಪ್ತವಯಸ್ಕರಾಗಿರುವರು.

### ವೃಷಭನಾಥನ ಆಸ್ಥಾನ ದೃಶ್ಯ-೨

(ವೃಷಭನಾಥನು ಸಿಂಹಾಸನದ ಮೇಲೆ ಗಾಂಭೀರತೆಯಿಂದ ಕುಳಿತಿರುವನು. ಯಶಸ್ವತಿ-ಸುನಂದೆ-ಭರತ-ಬಾಹುಬಲಿ-ದೇವೇಂದ್ರ ನೀಲಾಂಜಲಿ-ಮಂತ್ರಿಗಳು-ಛಳಪತಿ. ಸೇವಕರು-ಪ್ರಜೆಗಳು, ಇವರೆಲ್ಲರ ಅಕ್ಷಿಗಳು ನೃತ್ಯವನ್ನು ವೀಕ್ಷಿಸಲು ಕಾತುರಗಾಗಿರುವರು

(ನೀಲಾಂಜಲಿ ನೃತ್ಯವನ್ನು ಆರಂಭಿಸುವಳು)

ನೃತ್ಯಗಾನ—

ಝುಣ್, ಝುಣ್ ಝುಣ್
ಕಾಲ್ಗೆಜೆ ಝುಣ್ ಝುಣ್
ಘಲ್, ಘಲ್, ಘಲ್
ಕೈ ಬಳೆ ಘಲ್ ಘಲ್ ||೧||
ಜೀವನ ಎಷ್ಟೊಂದು ಮಧುರ
ಅಲ್ಲವೇ ಹೇಳು ಚೆಲುವಾಂಗ ಸುಂದರ ||೨||
ಓ ಚಲುವ ನನ್ನಯ ಚಲುವು
ಬಯಸಿದೆ ನಿನ್ನಯ ಮನವು
ನಿನ್ನ ಮೊಗದ ನಗುವು
ಹೂವಿನಂತೆ ಅರಳಿದೆ ||೩||
ಸುಖವ ಪಡಬೇಕು ಮನಸು
ಆಗಲೆ ಬಾಳು ಸೊಗಸು
ಸುಖಪಡದ ಬಾಳೆ ಹೊಲಸು ||೪||

ಮುಂದುವರಿಯುತ್ತದೆ

# ಚಂದ್ರಪ್ರಭಾ ಟ್ರಸ್ಟ್
# ಜಿನವಾಣಿ ಕಾರ್ಯಾಲಯ

ನಂ. ೬೭. ಡಿ. ಬಸವಯ್ಯರಸ್ತೆ, ಮೈಸೂರು.

ಜಿನವಾಣಿ REG. NO. K.R.N.N. 17

## ಜಿನವಾಣೀ ಗ್ರಾಹಕವರ್ಗದಲ್ಲಿ ಭಿನ್ನಹ–

ಧರ್ಮಬಾಂಧವರೇ !

ನಮ್ಮ ಹಳೆಯ ಚಂದಾದಾರರು ಈಗಲಾದರೂ ಜಿನವಾಣಿಯ ಶ್ರೇಯಸ್ಸನ್ನು ಕೋರಿ ೧೦೧ರೂಗಳನ್ನು ಕೊಟ್ಟು ಸಹಕರಿಸಿ ಸ್ಥಾಯೀ ಸದಸ್ಯರಾಗಿ ಅರ್ಹತ್ಪರಮೇಶ್ವರನ ಕೃಪೆಗೆ ಪಾತ್ರರಾಗಬೇಕೆಂದು ಪ್ರಾರ್ಥಿಸುವೆವು.

ಲಕ್ಷ್ಮೀಪ್ರಸನ್ನತೆಯನ್ನು ಎದುರು ನೋಡುತ್ತಿರುವ,
ಪ್ರಧಾನ ಸಂಪಾದಕ
ಎಂ. ಪಿ. ಅರವಿಂದತಿಲಕ್, ಎಂ.ಎ.

ಸಂಪಾದಕ:
ಎಂ ಸಿ. ಪದ್ಮನಾಭಶರ್ಮ, ನ್ಯಾಯತೀರ್ಥ

ಉಪಸಂಪಾದಕ
ಎಂ. ಪಿ. ರಾಜೇಂದ್ರಕುಮಾರ್

To

BOOK POST




ಜಿನವಾಣೀಕಾರ್ಯಾಲಯ
ನಂ. 67 ಡಿ ಬನುಮಯ್ಯ ರಸ್ತೆ ಮೈಸೂರು ೫೭೦೦೦೧



The Jinavani, the monthly Kannada Magazine is Edited and Published by Sri M.C. Padmanabhasharma & Printed by B.V. Alahiyamanavalan, Propritor, Sri Vijayalakshmi Press, 355, Dubbiah Road, MYSORE- 560112.

ಜೈನಪ್ರಚಾರಸಂಘದ ಜೈನಧಾರ್ಮಿಕ ಕನ್ನಡ ಮಾಸಿಕಮುಖಪತ್ರಿಕೆ

# ಜಿನವಾಣಿ



## ಜನವರಿ 10 1984

## ಅನಂತಕೃತಜ್ಞತಾಭಿನಂದನಗಳು

ಜಿನವಾಣಿರಜತೋತ್ಸವ ಸಾ ರಕವಾದ

ಮಹಾವೀರಸ್ವಾಮಿಯ

೫೦೦ ನೇ ವೀರನಿರ್ವಾಣ ವಿಶೇಷ ಸಂಚಿಕೆಯಲ್ಲಿನ

ಜನವಾಣಿ ಸಂಪಾದಕನ

ವಿಶೇಷ ನಿವೇದನ ಪ್ರಾರ್ಥನಾನುಸಾರ

೧೯೭೩ನೇ ಡಿಸೆಂಬರ್ ಸಂಚಿಕೆಯ

ಸಂಪೂರ್ಣ ಪ್ರಕಟನೆಗೆ ಸಹಕರಿಸಿ ಅನುಗ್ರಹಿಸಿದ

ಹೊಂಬುಜದ

ಸ್ವಸ್ತಿ ಶ್ರೀ ಅಭಿನವ ದೇವೇಂದ್ರಕೀರ್ತಿಮಹಾಸ್ವಾಮಿ
ಗಳವರಿಗೆ

ಅನಂತ ಹೃತ್ಪೂರ್ವಕ ಭಕ್ತಿನಮ್ರಪ್ರಣಾಮಯುಕ್ತ ಕೃತಜ್ಞತೆಗಳನ್ನು ಅರ್ಪಿಸುವೆವು

ಈ ಔದಾರ್ಯ ವಾತ್ಸಲ್ಯಗಳೇ ನಮ್ಮ ರಕ್ಷಾಕವಚ !!

ಇದೇ ಜಿನವಾಣಿಯ ೧೯೭೪ ನೇ ಜನವರಿ ತಿಂಗಳ

ಸಂಚಿಕೆಯು ಪ್ರಕಟನೆಗೆ ಆಧಾರ!!!

ಇಂತು ಕೃತಜ್ಞ

ಮೈಸೂರು
೧೫-೧-೭೪

ಎಂ. ಸಿ ಪದ್ಮನಾಭಶರ್ಮ
ಸಂಪಾದಕ, ಜಿನವಾಣಿ

॥ಓಮ್॥

॥ ಓಮ್ ನಮಸ್ಸಿದ್ಧೇಭ್ಯಃ ॥

# ಜಿನವಾಣಿ

## JINAVANI

**ಜೈನಸಾಹಿತ್ಯ ಪ್ರಚಾರಸಂಘದ ಮುಖಪತ್ರಿಕೆ**

**ಜೈನ ಧಾರ್ಮಿಕ**

**ಕನ್ನಡ ಮಾಸಪತ್ರಿಕೆ**

**KANNADA MONTHLY MAGZINE**

ಸತ್ವೇಷು ಮೈತ್ರೀಂ ಗುಣಿಷು ಪ್ರಮೋದಂ ಕ್ಲಿಷ್ಟೇಷು ಜೀವೇಷು ಕೃಪಾಪರತ್ವಮ್
ಮಾಧ್ಯಸ್ಥಭಾವಂ ವಿಪರೀತವೃತ್ತೌ ಸದಾ ಮಮಾತ್ಮಾ ವಿದಧಾತು ದೇವ ! ॥

—ಅಮಿತಗತಿ

ಎಲೈ ! ದೇವನೇ ! ಪ್ರಾಣಿಗಳಲ್ಲಿ ಸ್ನೇಹವನ್ನೂ, ಗುಣವಂತರಲ್ಲಿ ಸಂತೋಷವನ್ನೂ, ಕಾಯಕ್ಲೇಶ ಮನಃಕ್ಲೇಶಗಳಲ್ಲಿ ತೊಳಲಾಡುವ ಪ್ರಾಣಿಗಳಲ್ಲಿ ದಯೆಯನ್ನೂ, ಶಾಸ್ತ್ರಾಗಮಾಪ್ತವ್ಯತಿರೇಕಮಾರ್ಗಾಶ್ರಯಿಗಳಲ್ಲಿ ಮಾಧ್ಯಸ್ಥಭಾವನೆಯನ್ನೂ ನನಗೆ ಉಂಟುಮಾಡು

MA ತಿಲಕ್, ಮೈಸೂರು

---

ಮಂಡಲ ೩೩-೩೪) ಮೈಸೂರು ೧೦ನೆಯ ಜನವರಿ ೧೯೮೪ (ಕಿರಣ_ ೨)
(ಗೊಮ್ಮಟ-ಚಾವುಂಡರಾಯ ಶಕ- ೧೦೦೩)

---




## ಗ್ರಂಥದ್ವಯ ಪ್ರಕಟಣೆಗೆ ನೆರವನ್ನೀಯಿರಿ

**ಧರ್ಮ ಬಾಂಧವರೇ !**

10-10-1983 ರಿಂದ ಜಿನವಾಣಿ ಮಾಸ ಸಂಚಿಕೆಯಲ್ಲಿ ಗ್ರಂಥಪ್ರಕಾಶನ ಕಾರ್ಯ ಆರಂಭವಾಯಿತು.

ತ್ರಿಲೋಕ ದರ್ಶನವನ್ನು 'ವನ್ನು ಶ್ರೀವರ್ಮಾ ಡಿ. ಶ್ರೀಪತಿ ಅರಸು ಅವರು

ತಿಳಿಗನ್ನಡದಲ್ಲಿ ನಮಗೆ ಲೇಖನದ ಮೂಲಕ ರಚಿಸಿ ಮಾಲಿಕೆಯಾಗಿತ್ತು ಸಹಕಾರ ನೀಡುತ್ತಿರುವರು. ಶ್ರವಣಬೆಳಗುಳದ ಜೈನಧರ್ಮ ಸಿದ್ಧಾಂತ ಚಕ್ರವರ್ತಿಗಳು ರಚಿಸಿದ ತ್ರೀಲೋಕಸಾರ ವಿದಿಗೀತೆ ಅದನ್ನು ತ್ರಿಲೋಕ ದರ್ಶನವೆಂಬ ಹೆಸರಿನಿಂದ ಲೇಖನಮಾಲೆ ಮುಂದುವರಿಸುತ್ತಿದ್ದಾರೆ. ಇದು ಪುಸ್ತಕ ರೂಪದಲ್ಲಿ ಬಗಬೇಕಾದರೆ ಬೇರೆಯಾಗಿ ಅದೇ ಮ್ಯಾಟರನ್ನ 900 ಅಥವಾ 1000 ಮಾಡಿಸಿಕೊಂಡರೆ ಪುಸ್ತಕರೂಪವಾಗಿ ಉಳಿಯುತ್ತದೆ. ಧರ್ಮಾಭಿಮಾನವುಳ್ಳವರು ಕೊಡಿಸಿದರೆ ಜೇರೆ ಮಾಡಿಸಬಹುದು. ಕಾಗದ ವರ್ಷದಲ್ಲಿ 96 ಪುಟಗಳಾಗಿರುತ್ತದೆ 4-5 ವರ್ಷಗಳಲ್ಲಿ 5 ಸಂಪುಟವಾಗಿ ಹೊರತರಬಹುದು ಧರ್ಮಾಭಿಮಾನಿಗಳು ವಿಚಾರಮಾಡಿ ಕೂಡಲೆ ತಿಳಿಸಬೇಕಾಗಿ ವಿನಂತಿ.

2) ಶುಭಚಂದ್ರಾಚಾರ್ಯರ ಎಂಬ ಜ್ಞಾನಾರ್ಣವ ಎಂಬ ಗ್ರಂಥವು 22ನೇ ಅಧ್ಯಾಯದಿಂದ ಪ್ರಿಂಟಾಗುತ್ತಲಿದೆ. ಈ ಹಿಂದೆ ಅಳಸಿಂಗಾಚಾರ್ಯರೆಂಬ ವಿದ್ವಾಂಸರು ಕನ್ನಡ ಅನುವಾದ ಮಾಡಿ ಪ್ರಕಟವಾಗಿತ್ತು ಈಗ ಆ ಪ್ರತಿಗಳು ಸಿಗುತ್ತಿಲ್ಲ ಅಂತು ಮೊದಲ ೨೧ ಅಧ್ಯಾಯ ಪ್ರಿಂಟಾಗಿರುವುದರಿಂದ ಅದರಿಂದ ಮುಂದಕ್ಕೆ ಕನ್ನಡ ಅನುವಾದ ಮಾಡಲು ವಿದ್ವಾನ್ ಬಿ. ಎ. ನರಸಿಂಹಾಚಾರ್ಯ ಇವರು ಒಪ್ಪಿ ಲೇಖನ ಪ್ರಾರಂಭಿಸಿದ್ದಾರೆ.

ಇದು ದ್ವಾದಶಾನುಪ್ರೇಕ್ಷೆಯಾಗಿದೆ. ಭರ್ತೃಹರಿ ತಮ್ಮನಿಗಾಗಿ ರಚಿಸಿದ ಜ್ಞಾನಾರ್ಣವವಾಗಿದೆ. ಇದನ್ನು ಸಹ ಪ್ರತಿ ಪ್ರಿಂಟ್‌ಮಾಡಿಸಿಕೊಳ್ಳುವವರು ಕೂಡಲೆ ಪತ್ರವ್ಯವಹಾರ ಮಾಡಿರಿ. ಇಲ್ಲದಿದ್ದರೆ ಜಿನವಾಣಿ ಮಾಸಪತ್ರಿಕೆಯಲ್ಲೆ ಉಳಿಯು ತ್ತದೆ ಧರ್ಮಾಭಿಮಾನವುಳ್ಳ ಜೈನಬಾಂಧವರು ಆದಷ್ಟು ಶೀಘ್ರವಾಗಿ ಪತ್ರವ್ಯವಹಾರ ಮಾಡಿರಿ. ಎರಡು ಗ್ರಂಥಗಳು ಅತ್ಯುತ್ತಮತರವಾಗಿದೆ ಧರ್ಮಾಭಿಮಾನಿಗಳು ಶೀಘ್ರ ವಾಗಿ ಪತ್ರವ್ಯವಹಾರ ಮಾಡಿರಿ.

" ಶಾಸ್ತ್ರದಾನಂ ಮಹಾಪುಣ್ಯಂ "

ಸಂಪಾದಕ, ಜಿನವಾಣಿ.

## ತಿದ್ದುಪಡಿ

### ನವೆಂಬರ್ ಜಿನವಾಣಿಯಲ್ಲಿ

| ತಪ್ಪು | ಪುಟ | ಪಂಕ್ತಿ | ಒಪ್ಪು |
|---|---|---|---|
| ವ್ಯಾಖ್ಯಾನ ಪ್ರಜ್ಞಪ್ತಿ | 13 | 18 | ವ್ಯಾಖ್ಯಾನ ಪ್ರಜ್ಞಪ್ತಿ |
| ,, | 14 | 7 | ,, |

೩

| ತಪ್ಪು | ಪುಟ | ಪಂಕ್ತಿ | ಒಪ್ಪು |
|---|---|---|---|
| ವಸು | 14 | 8 | ವಸ್ತು |
| ಇಂದ್ದಿ ಕ | 9 | 4 | ಇಂದ್ರಿಕ |
| ಅಗ್ವಭಾಗಥ | 19 | 4 | ಅಗ್ರಭಾಗದ |
| ಅನುದಿಶೆ | 6 | 9 | ಸಂ |
| ಅನುತ್ತರೆ | 6 | 9 | ಸಂ |

### ಡಿಸೆಂಬರ್ ಜಿನವಾಣಿಯಲ್ಲಿ—ಬಾಹುಬಲಿ ನಾಟಕದಲ್ಲಿ

| ಪಾತ್ರ | ಹಸ್ತಪ್ರತಿಯ ತಪ್ಪುಗಳು | ಒಪ್ಪು |
|---|---|---|
| ಮರುದೇವಿ | ಆದಿನಾಥನ ಮಡದಿ | ನಾಭಿರಾಜನ ಮಡದಿ |
| ವೃಷಭನಾಥ | ಆದಿನಾಥನ ಮಗ | ನಾಭಿರಾಜನ ಮಗ |

## ರಾಜಾ ಧನದತ್ತ ಹಾಗೂ ಸಂಘ ಶ್ರೀಯ ಕಥೆ

ಲೇಖನ: ತ್ರಿಶಲಾ, ಬಿ ಎ., ಅಂಬಿಕಾನಗರ, ಬೆಂಗಳೂರು

ಆಂದ್ರದೇಶದ ಕನಕಪುರದಲ್ಲಿ ರಾಜಾಧನದತ್ತನು ರಾಜನಾಗಿದ್ದನು. ಅವನು ಸಮ್ಯಕ್ತ್ವಧಾರಿಯಾಗಿಯೂ, ಗುಣವಂತನೂ ಮತ್ತು ಧರ್ಮಾತ್ಮನಾದ ರಾಜನಾಗಿದ್ದನು. ರಾಜನು ಜೈನಮತವನ್ನು ಪಾಲನೆ ಮಾಡುವವನಾಗಿದ್ದನು. ಆದರೆ ಇವನ ಮಂತ್ರಿಯು ಬೌದ್ಧಮತವನ್ನು ನಂಬತಕ್ಕವನಾಗಿದ್ದನು. ಮಂತ್ರಿಯ ಹೆಸರು ಸಂಘಶ್ರೀ ಎಂದು ರಾಜನು ತನ್ನ ಬೌದ್ಧ ಮಂತ್ರಿಯ ಜೊತೆಯಲ್ಲಿ ರಾಜಕಾರ್ಯವನ್ನು ನಿರ್ವಿಘ್ನವಾಗಿ ರಾಜ್ಯಭಾರ ನಡೆಸುತ್ತಿದ್ದನು. ಮಂತ್ರಿಯು ರಾಜನ ಆಡಳಿತದಲ್ಲಿ ಯಾವ ರೀತಿಯ ತೊಂದರೆಯನ್ನು ಮಾಡುತ್ತಿರಲಿಲ್ಲ. ಒಂದು ದಿನ ರಾಜಾ ಧನದತ್ತನು ತನ್ನ ಮಂತ್ರಿಯ ಜೊತೆ ಅರಮನೆಯಲ್ಲಿ ಕುಳಿತು ರಾಜ್ಯದ ವಿಚಾರವಾಗಿ ವಿಚಾರ ಮಾಡುತ್ತಿದ್ದನು. ಈ ಸಮಯದಲ್ಲಿ ಆಕಾಶಮಾರ್ಗದಲ್ಲಿ ಇಬ್ಬರು ಚಾರಣ

ಮುನಿಗಳು ಹೋಗುತ್ತಿರುವುದು ಕಂಡು ಬಂದಿತು. ಮಹಾರಾಜನು ಈ ಸಮಯ ದಲ್ಲಿ ಅವರಿಗೆ ನಮಸ್ಕಾರ ಮಾಡಿ ತಾನು ಅವರಲ್ಲಿಗೆ ಹೋಗಿ ವಿನಂತಿಸಿಕೊಂಡನು.

ಮಹಾರಾಜನ ಪ್ರಾರ್ಥನೆಯಂತೆ ಮುನಿಗಳು ಉಪಯುಕ್ತವಾದಂತಹ ಧರ್ಮೋಪದೇಶ ಮಾಡಿದರು. ಮುನಿಗಳ ಉಪದೇಶದ ಪ್ರಭಾವದಿಂದ ಪ್ರಭಾವಿತ ನಾಗಿ ಮಂತ್ರಿಯು ಶ್ರಾವಕ ವ್ರತವನ್ನು ಸ್ವೀಕರಿಸಿದನು ಋಷಿಧಾರಿ ಮುನಿಗಳು ತಮ್ಮ ಸ್ಥಾನಕ್ಕೆ ಹೊರಟುಹೋದರು. ಬೌದ್ಧ ಗುರುಗಳು, ಮಂತ್ರಿಯು ತಮ್ಮ ಲ್ಲಿಗೆ ಬರದೆ ಇದ್ದುದನ್ನು ನೋಡಿ ಅವನನ್ನು ತಮ್ಮಲ್ಲಿಗೆ ಕರೆಸಿಕೊಂಡರು ಮಂತ್ರಿಯು ಬೌದ್ಧ ಗುರುಗಳ ಬಳಿ ಹೋಗಿ ಕುಳಿತುಕೊಂಡನು, ಬೌದ್ಧ ಗುರುಗಳಿಗೆ ಮಂತ್ರಿಯು ನಮಸ್ಕರಿಸಲಿಲ್ಲ. ಬೌದ್ಧ ಗುರುಗಳಿಗೆ ಆಶ್ಚರ್ಯವಾಯಿತು. ಗುರುಗಳು ಮಂ- ತ್ರಿಯು ನಮಸ್ಕಾರ ಮಾಡದೆ ಇದ್ದುದಕ್ಕೆ ಕಾರಣವನ್ನು ಕೇಳಿದರು. ಮಂತ್ರಿಯು ತಾನು ಜೈನಧರ್ಮದ ಶ್ರಾವಕ ವ್ರತವನ್ನು ತೆಗೆದುಕೊಂಡದ್ದನ್ನು ಹೇಳಿ ಹಾಗೆಯೇ ಚಾರಣ ಮುನಿಗಳ ಚಮತ್ಕಾರವನ್ನು ಹೇಳಿದನು. ಬೌದ್ಧ ಗುರುಗಳಿಗೆ ಮನಸ್ಸಿ ನಲ್ಲಿ ಹೊಟ್ಟೆಕಿಚ್ಚು ಉಂಟಾಯಿತು ಗುರುಗಳು ಮಂತ್ರಿಗೆ ಹೇಳಿದರು– ನೀನು ಮೋಸಹೋಗಿದ್ದೀಯ. ನೀನು ಯೋಚನೆಮಾಡು– ಆಕಾಶದಲ್ಲಿ ಯಾರಾದರೂ ಹೇಗೆ ಓಡಾಡುವುದಕ್ಕೆ ಸಾಧ್ಯ ? ರಾಜನು ನಿನ್ನನ್ನು ಕಪಟದಿಂದ ಮರುಳು ಮಾಡಿ ನಿನ್ನನ್ನು ಜೈನಧರ್ಮಕ್ಕೆ ಸೇರಿಸಿಕೊಂಡಿದ್ದಾರೆ. ನೀನು ನಿಶ್ಚಯವಾಗಿ ತಿಳಿ– ಜೈನರು ಬೌದ್ಧಮತಾವಲಂಬಿಗಳೊಡನೆ ದ್ವೇಷ ಮಾಡುತ್ತಾರೆ, ಅವರು ಸದಾ ಬೌದ್ಧ ಧರ್ಮಕ್ಕೆ ಹಾನಿಮಾಡುತ್ತಿರುತ್ತಾರೆ. ಆದ್ದರಿಂದ ನೀನು ಈ ವಿಷಯ ವನ್ನು ರಾಜನಿಗೆ ಹೇಳಬೇಡ, ಹೇಳಿದರೆ ಅನರ್ಥವಾಗುತ್ತದೆ. ಸಂಘಶ್ರೀಯು ಸ್ಥಿರ ಮನಸ್ಸಿಲ್ಲದ ಮನುಷ್ಯನಾಗಿದ್ದನು.

ಹೀಗೆ ಬೌದ್ಧ ಗುರುಗಳ ಮಾತನ್ನು ಕೇಳಿ ಮಂತ್ರಿಯ ಮನಸ್ಸು ಬದ- ಲಾಯಿತು, ಅವನು ಶ್ರಾವಕ ವ್ರತವನ್ನು ಬಿಟ್ಟನು. ಮಾರನೇ ದಿನ ರಾಜನು ತುಂಬಿದ ಸಭೆಯಲ್ಲಿ ಜೈನಧರ್ಮದ ಮಹತ್ವ ಮತ್ತು ಚಾರಣ ಮುನಿಗಳ ಚಮ ತ್ಕಾರವನ್ನು ಹೇಳಿದನು. ಎಲ್ಲರೂ ಆಶ್ಚರ್ಯವನ್ನು ವ್ಯಕ್ತಪಡಿಸಿದರು ಆಗ ರಾಜನು ತನ್ನ ಮಾತನ್ನು ಸಮರ್ಥಿಸಿಕೊಳ್ಳಲು ಮಂತ್ರಿಯ ಕಡೆ ನೋಡಿದನು. ಆದರೆ ಮಂತ್ರಿಯು ಸಭೆಯಲ್ಲಿ ಇರಲಿಲ್ಲ. ರಾಜನು ಮಂತ್ರಿಯನ್ನು ಕರೆಸಿ ನಿನ್ನೆಯ ದಿನದ ದೃಶ್ಯವನ್ನು ತಿಳಿಸುವಂತೆ ಹೇಳಿದನು. ದುಷ್ಟಮಂತ್ರಿಯು ಹೇಳಲು ಪ್ರಾರಂ ಭಿಸಿದನು.–'' ಮಹಾರಾಜ, ಇದು ಅಸಂಭವ, ನಾನು ನನ್ನ ಕಣ್ಣುಗಳಿಂದ ಏನನ್ನೂ ನೋಡಲಿಲ್ಲ. ಈ ರೀತಿಯ ವಿಚಾರ ನಡೆಯಲು ಸಾಧ್ಯವಿಲ್ಲ.

ಮಹಾರಾಜನು ಆಶ್ಚರ್ಯಚಕಿತನಾದನು. ಆದರೆ ಅದೇ ಸಮಯದಲ್ಲಿ ಸುಳ್ಳು ಹೇಳಿದ ಮಂತ್ರಿಯ ಎರಡು ಕಣ್ಣುಗಳು ಕುರುಡಾಯಿತು. ಎಲ್ಲರಿಗ

ತಿಳಿಯಿತು ಏನೆಂದರೆ– ರಾಜನು ಹೇಳಿದ್ದು ಸತ್ಯ. ಮಂತ್ರಿಯು ಸುಳ್ಳು ಹೇಳಿದನು. ಅವನು ಯಾವ ರೀತಿ ಸುಳ್ಳು ಹೇಳಿದನೋ ಅದೇ ರೀತಿ ಫಲವನ್ನು ಅನುಭವಿಸಿದನು.

ತಾವು ತಮ್ಮ ನಿರ್ಮಲ ಬುದ್ಧಿಯಿಂದ ಜಿನಭಗವಾನರ ಚರಣವನ್ನು ಭಕ್ತಿ ಭಾವದಿಂದ ಪೂಜಿಸಿ ಪವಿತ್ರವಾದ ಮೋಕ್ಷಸುಖವನ್ನು ಕೊಡುವಂತಹ ಜಿನಭಗವಾನರ ಭಕ್ತರಾಗಿರಿ. ಆತ್ಮನ ಮಹಾಶತ್ರುವಾದ ಮಿಥ್ಯತ್ವವನ್ನು ಬಿಟ್ಟು ಧೃಢ ಸಮ್ಯಕ್ತವಂತರಾಗಿರಿ. ಯಾವ ರೀತಿ ಚಂಡಮಾರುತದಿಂದ ಮೇರುಪರ್ವತವು ಚಲಿಸುವುದಿಲ್ಲವೋ ಅದೇ ರೀತಿ ಸಮ್ಯಕ್ತ್ವವಂತನು ಯಾವ ಅಡ್ಡಿ ಆತಂಕಗಳು ಬಂದರೂ ಸಮ್ಯಕ್ತ್ವದಿಂದ ವಿಚಲಿತನಾಗುವುದಿಲ್ಲ. ಯಾರು ಮೇರುಪರ್ವತದಂತೆ ಅಚಲನಾಗುವನೋ ಅವನು ಮೋಕ್ಷವನ್ನು ಹೊಂದಲು ಅರ್ಹನಾಗುವನು.

|| ಶ್ರೀ ವರ್ಧಮಾನಾಯ ನಮಃ ||

ಜ್ಞಾನಯೋಗಿ ಭಟ್ಟಾರಕ ಸ್ವಸ್ತಿಶ್ರೀ ಚಾರುಕೀರ್ತಿ ಪಂಡಿತಾಚಾರ್ಯವರ್ಯ ಸ್ವಾಮಿಗಳು (ಎಂ.ಎ. ಹಿಂದಿ–ಸಂಸ್ಕೃತ ; ಸಾಹಿತ್ಯಶಾಸ್ತ್ರ, ಸಿದ್ಧಾಂತಶಾಸ್ತ್ರ ; ಪಿ.ಹೆಚ್.ಡಿ. ಜೈನದರ್ಶನ) ಶ್ರೀದಿಗಂಬರ ಜೈನ ಮಠ, ಮೂಡುಬಿದಿರೆ (ಕರ್ನಾಟಕ) ಇವರ ಕರಕಮಲಗಳಲ್ಲಿ ಸವಿನಯ ಸಮರ್ಪಿತ

# ಅಭಿನಂದನ – ಪತ್ರ

ಮಹನೀಯ ಮೇಧಾವಿ ಮನೀಷಿಗಳೇ :– ದಕ್ಷಿಣದ ಜೈನ ಕಾಶಿ ಎಂದು ವಿಶ್ರುತವಾದ ಮೂಡಬಿದಿರೆ ಜೈನಮಠದ ಪೀಠಾಧಿಪತಿಗಳು ತಾವು. ಅಲ್ಲಿರುವ ಅನುಪಮ ತಾಡಪತ್ರೀಯ ಆಗಮ ಗ್ರಂಥಗಳ ದಿವ್ಯ ಪ್ರಭೆಯಿಂದ ತಮ್ಮ ಅಂತಸ್ತು ಪ್ರದೀಪ್ತವಾಗಿ ಪ್ರಜ್ವಲಿತವಾಗಿದೆ. ಮೋರೇನಾ ಮತ್ತು ಬನಾರಾಸಿನ ಮಹಾವಿದ್ಯಾಲಯಗಳಲ್ಲಿ ಸಂಸ್ಕೃತ, ಸಾಹಿತ್ಯ, ಸಿದ್ಧಾಂತಗಳ ವಿಶಾಲವಾದ ಜ್ಞಾನವನ್ನು ಸಂಪಾದಿಸಿ ಅತುಲವಾದ ಜ್ಞಾನಜ್ಯೋತಿಯನ್ನು ಬೆಳಗಿಸಿ ಕೊಂಡಿದ್ದೀರಿ. ಇಂದು ಆ ಜ್ಞಾನ ಪ್ರತಿಭೆಯಿಂದ ತನ್ನ ಮೇಧಾಪೂರ್ಣ ವಾಗ್ ವೈಖರಿಯ ಪ್ರವಚನ ಶೈಲಿಯಿಂದ ಜನತೆಯ ಮಾನಸಮಂದಿರವನ್ನು ಜಗಮಗಿಸಿದ್ದೀರಿ. ವಿವಿಧ ಗ್ರಂಥಗಳ ಮಥನದಿಂದ ದೊರಕೊಂಡ ಅಮೃತತತ್ವಗಳನ್ನು ಪಸರಿಸುವಲ್ಲಿ ತಮ್ಮ ಅಪ್ರತಿಮ ವಾಕ್ಚಾತುರ್ಯ ಪ್ರಬಲ ಪ್ರೇರಕವಾಗಿದೆ. ತಾವು ಜ್ಞಾನಾರಾಧನೆಯ ಸಾಧನೆಯಿಂದ ಶ್ರಮ–ಸಂಸ್ಕೃತಿಯ ಗಹನ–ಗಂಭೀರ ತತ್ವಗಳನ್ನು ಸುಲಭ–ಸುಬೋಧ

ಶೈಲಿಯಲ್ಲಿ ಪ್ರತಿಪಾದಿಸಬಲ್ಲ ಪ್ರವಚನ ಪಟುಗಳು. ಮಂಗಲಕರವಾದ ಪುಣ್ಯ ಪ್ರವಚನಗಳಿಂದ ನಮ್ಮ ಧರ್ಮಾಂತಃಕರಣವನ್ನು ತೃಪ್ತಿಪಡಿಸಿ ತಂಪುಗೊಳಿಸಿದ ತಮ್ಮನ್ನು ಎಷ್ಟೆಂದು ಕೊಂಡಾಡಲಿ.

**ದಕ್ಷಿಣೋತ್ತರಗಳ ಸಮನ್ವಯ ಸಂತರೇ :** ನಮ್ಮದು ವಿಶಾಲ ರಾಷ್ಟ್ರ. ವಿಭಿನ್ನ ಧರ್ಮ, ಭಾಷೆ, ಸಾಹಿತ್ಯ ಸಂಸ್ಕೃತಿಗಳ ಸಂಗಮಸ್ಥಳ. ಬಹುಭಾಷಾ ಜ್ಞಾನಿಗಳೂ ಜ್ಞಾನಯೋಗಿಗಳೂ ಆದ ತಾವು ದಕ್ಷಿಣೋತ್ತರಗಳನ್ನು ಒಂದಾಗಿ ಬೆಸೆದು ಬಂಧಿಸಿದ ಕಾರುಣಿಕ ಪುರುಷರು ದಕ್ಷಿಣದ ತುದಿಯಿಂದ ಉತ್ತರದ ಪ್ರಮುಖ ತೀರ್ಥಗಳಿಗೆ, ಮತ್ತು ಜೈನ ಕೇಂದ್ರಗಳಿಗೆ ಚಿತ್ತೈಸಿ, ಜೈನ ವಾಙ್ಮಯ-ವನ್ನು ಪಸರಿಸುತ್ತಾ ಉತ್ತರದ ಶ್ರೀಮಂತರಿಂದ ಈ ಆಗಮರಕ್ಷಣೆ ಮತ್ತು ಆತ ವಿದ್ಯೆಯ ಪ್ರಚಾರದ ಪರಮ ಪ್ರಭಾವಕ ಕಾರ್ಯಗಳಿಗಾಗಿ ಉದಾರ ಸಹಯೋಗ ಪಡೆಯುತ್ತಿದ್ದೀರಿ. ಮಳೆ ಹೊತ್ತ ದಕ್ಷಿಣದ ಕಾರ್ಮೋಡಗಳು ಹಿಮಾಚ್ಛಾದಿತ ಹಿಮಾಲಯದ ಉತ್ತುಂಗದ ಉತ್ತುಂಗ ಶಿಖರಕ್ಕೆ ತಟ್ಟಿ, ಬೆಟ್ಟದ ಬಯಲು ಪ್ರದೇಶಕ್ಕೆ ಧಾರಾಕಾರವಾಗಿ ಸುರಿದು ಸಸ್ಯ ಶ್ಯಾಮಲ- ಫಲಭರಿತ ಭೂಮಿಯಾಗಿ ಮಾಡುತ್ತವೆ. ಅಂತೆಯೇ ತಾವು ಪಾಪದ ತಾಪದಿಂದ ಬೆಂದು ಬೇಗುದಿಗೊಂಡ ನಮ್ಮೆಲ್ಲರ ಶುಷ್ಕ ಆತ್ಮಪ್ರದೇಶಕ್ಕೆ ಜಿನವಾಣಿಯ ಶೀತಲ ಅಮೃತಧಾರೆಯಿಂದ ಸೇಚಿಸಿ ಮಾಗಿದ ಪುಣ್ಯಫಲದಿಂದ ಬೀಗಿ ಮಾಗುವಂತೆ ಮಾಡಿದ್ದೀರಿ ಈ ಸೇತು ಬಂಧದ ಮುಂದಿನ ಫಲವನ್ನು ಇಂದೇ ನಮಗೆಟಕುವಂತೆ ಮಾಡಿದ್ದೀರಿ. ಅಂತೆಯೇ ನಾವು ಧನ್ಯರು

**ಸಂಸ್ಕೃತಿಯ ಸಂರಕ್ಷಕರೇ :** ಭಾರತದ ಮಧ್ಯಕಾಲೀನ ಇತಿಹಾಸದಲ್ಲಿ ಜೈನ ಸಾಹಿತ್ಯ, ಕಲೆ ಮತ್ತು ದೇಗುಲಗಳು ಜೈನೇತರರ ಧಾಳಿಗೆ ಒಳಗಾಗಿ ವಿಪತ್ತಿಗ ತುತ್ತಾದಾಗ ಅದನ್ನು ಸಂರಕ್ಷಿಸಿದವರು ಜೈನ ಭಟ್ಟಾರಕರೆಂಬುದು ಅವಿಸ್ಮರಣೀಯ ಐತಿಹಾಸಿಕ ಘಟನೆ. ಅವರಿಲ್ಲದಿರುತ್ತಿದ್ದರೆ ನಾವಿಂದು ಹೀಗೆ ಮೆರೆಯುವುದಕ್ಕಿರಲ್ಲಿಲ್ಲ. ತಮ್ಮ ಜ್ಞಾನ, ಚಾರಿತ್ರ್ಯ ಮತ್ತು ಪುಣ್ಯ ಪ್ರಭಾವದಿಂದ ಅಂದಿನಂತೆಯೇ ಇಂದು ಕೂಡಾ ತಾವು ಭಟ್ಟಾರಕ ಪರಂಪರೆಯ ಜಾಡಿನಲ್ಲೇ ಅದರ ಸಂರಕ್ಷಣೆ ಸಂವರ್ಧನೆಯಲ್ಲಿ ಸ್ಮರಣೀಯ ಸೇವೆ ಸಲ್ಲಿಸುತ್ತಿದ್ದೀರಿ. ಭಾರತ ದೇಶ ಮಾತ್ರವಲ್ಲ, ವಿದೇಶಗಳು ಸಹ ತಮ್ಮ ಈ ಪ್ರಭಾವನಾ ಪರಿಧಿಯಲ್ಲಿ ಒಳಗೊಂಡು ಜೈನ ತತ್ವ ಜ್ಞಾನವು ವಿಶ್ವಕ್ಕೇ ಪಸರಿಸಿ ಜೈನಧರ್ಮ ವಿಶ್ವಧರ್ಮದ ಎತ್ತರಕ್ಕೆ ಏರುವಂತಾಗಿದೆ. ಕೇವಲ ಏಳು ವರ್ಷಗಳ ಪೀಠಾಧಿಕಾರದ ಅವಧಿಯಲ್ಲಿ ಶ್ರೀ ಕ್ಷೇತ್ರ ಮೂಡಬಿದಿರೆ ಹಾಗೂ ಶ್ರೀ ಜೈನಮಠ ಅಪ್ರತಿಮ ಪ್ರಗತಿಕಂಡಿದೆ. ಸ್ವ : ಸಾಹೂ ಶಾಂತಿಪ್ರಸಾದ

ಜೈನ ಇವರಿಂದ ಸ್ಥಾಪನೆಗೊಂಡು ಶ್ರೀಮತಿ ರಮಾಮಣಿ ಜೈನ ಶೋಧ ಸಂಸ್ಥಾನ ಸಾವಿರಾರು ತಾಡಪತ್ರಿಗ್ರಂಥಗಳನ್ನು ಸಂಗ್ರಹಿಸಿ, ಸಂರಕ್ಷಿಸುತ್ತಾ ಜೈನ-ಜೈನೇತರ ಸಂಶೋಧಕ ವಿದ್ವಾಂಸರಿಗೊಂದು ಜ್ಞಾನಗಂಗೋತ್ರಿಯಾಗಿ ಮೌನ ಸೇವೆ ಸಲ್ಲಿಸುತ್ತದೆ. ಅಂತಹ ಶ್ರೇಯೋಮಾರ್ಗದಲ್ಲಿ ಸಾಗುತ್ತಿರುವ ತಮ್ಮಿಂದ ಚಾರಿತ್ರದ ಜ್ಞಾನದ ನಿರ್ಮಲ ದೀಪದಿಂದ ಜಗತ್ತಿನ ಅಣುರೇಣುಗಳು ಉಜ್ವಲ ಬೆಳಕನ್ನು ಪಡೆಯುವಂತಾಗಲಿ ಎಂಬುದೇ ನಮ್ಮ ಭಕ್ತಿಯ ಭಾವನೆ.

**ಸಫಲ ಪ್ರವಚನ ಪಟುಗಳೇ :** ಅಘಟಿತ ಘಟನೆಯನ್ನು ಸಾಕ್ಷಾತ್ ಘಟಿಸುವುದು, ಅಕಥನೀಯ ವಿಚಾರವನ್ನು ಸುಮಧುರ-ಬಂಧುರ ಮಾತಿನಿಂದ ಬಣ್ಣಿಸುವುದು ಕಲಾಕಾರನ ಸಾಫಲ್ಯದ ಸಂಕೇತ. ಪೀಯೂಷ ಪ್ರವಚನ ಶೈಲಿಯಿಂದ ಪವನ ಪಾವನ ಪರ್ಯೂಷಣ ಪರ್ವದ ಹತ್ತು ದಿನಗಳಲ್ಲಿ ಜಿನಾಗಮದ ಜಟಿಲ ರಹಸ್ಯವನ್ನು ತಾವು ಬಿಡಿ ಬಿಡಿಯಾಗಿ ಬಿಚ್ಚಿ ಮನಕ್ಕೆ ತಟ್ಟುವಂತೆ ಮಾಡಿದ್ದೀರಿ. ದೂರದ ಕರ್ನಾಟಕದಿಂದ ಕಲ್ಕತ್ತಾದವರೆಗೆ ಪಾದಬೆಳಸಿ ಚಿತ್ತೈಸಿ ನಮ್ಮನ್ನು ಉಪಕರಿಸಿದ್ದೀರಿ. ಈ ಮಹದುಪಕಾರಕ್ಕಾಗಿ ತಮ್ಮನ್ನು ಅಭಿನಂದಿಸಲು ನಮ್ಮ ಜಡಮಾತು ಮೂಕವಾಗಿದೆ. ಆ ಕಷ್ಟಕ್ಕಾಗಿ ವಿನೀತ ಭಾವದಿಂದ ಕ್ಷಮೆಯನ್ನು ಯಾಚಿಸುತ್ತಾ ಮುಂದೆಯೂ ನಮ್ಮ ಹಾರ್ದಿಕ ಆಮಂತ್ರಣಕ್ಕೆ ಓಗೊಟ್ಟು ಮತ್ತೆ ಮತ್ತೆ ಹತ್ತಾರು ಬಾರಿ ಚಿತ್ತೈಸಬೇಕೆಂದು ಶಿರಬಾಗಿ ಬಿನ್ನವಿಸುತ್ತೇನೆ. ತಾವು ಅಭಿನಂದರು.

ದೊಡ್ಡ ಬಸದಿ, ಕಲ್ಕತ್ತಾ,
ಅನಂತ ಚತುರ್ದಶಿ, ಬುಧವಾರ, ಇಂತು ನಾವೆಲ್ಲ ತಮ್ಮ ಗುಣಾನುರಾಗಿಗಳು,
ದಿನಾಂಕ : 21-9-83 ದಿಗಂಬರ ಜೈನ ಸಮಾಜ, ಕಲ್ಕತ್ತಾ.

## ಷಷ್ಟ್ಯಬ್ದಪೂರ್ತಿ ಶಾಂತಿಮಹೋತ್ಸವ

### ಜಿನವಾಣಿಗೆ ಕೊಡುಗೆ. ಕೃತಜ್ಞತಾರ್ಪಣ

ಸನ್ಮಾನ್ಯಶ್ರೀ ಸಿ. ಪಿ. ಪೂರ್ಣಭದ್ರಪಂಡಿತರಿಗೆ ಅರವತ್ತು ವರ್ಷ ತುಂಬಿದ ನಿಮಿತ್ತವಾಗಿ ವಾಣೀವಿಲಾಸಮೊಹಲ್ಲಾ ಪದ್ಮಾವತೀ ಕಲ್ಯಾಣಮಂದಿರದಲ್ಲಿ ನವಗ್ರಹ ಶಾಂತಿಹೋಮ ದೇವರಿಗೆ ಅಭಿಷೇಕ, ಬಂಧುಮಿತ್ರರಿಗೆ ಭೋಜನವ್ಯವಸ್ಥೆ ಇವುಗಳನ್ನು ಮಾಡಲಾಯಿತು. ಈ ಸಂದರ್ಭದಲ್ಲಿ ಜಿನವಾಣೀ ಶ್ರೇಯಸ್ಸನ್ನು ಕೋರಿ ಅವರ ಸುಪುತ್ರರಾದ ಮಾನ್ಯ ಶ್ರೀ ಶೀತಲರಾಜ್ ಉದಾರವಾಗಿ ಹತ್ತುರೂ-

ಗಳನ್ನು ಕಳುಹಿಸಿಕೊಟ್ಟಿರುತ್ತಾರೆ ದಾನಿಬಂಧುಗಳಿಗೆ ಹೃತ್ಪೂರ್ವಕ ಧನ್ಯವಾದಗಳು.

ಸಂಪಾದಕ,
ಜಿನವಾಣಿ

## ನಿಧನ

ದಾವಣಗೆರೆ ೨೭-೧೨-೮೩ರಂದು ಇಲ್ಲಿಯ ಶ್ರೀ ಧನ್ಯಕುಮಾರರು ಎಂ.ಕಾಂ. ಇವರು ಸ್ವರ್ಗಸ್ಥರಾದುದನ್ನು ಕೇಳಿ ವ್ಯಸನವಾಯಿತು. ಇವರು ಕೆಲವು ದಿನಗಳ ಹಿಂದೆ ನಮ್ಮಲ್ಲಿಗೆ ಬಂದು ಸಮಂತಭದ್ರವಿರಚಿತವಾದ ದೇವಾಗಮಸ್ತೋತ್ರದ ಮೇಲೆ ಪ್ರಬಂಧವನ್ನು ಬರೆಯಲು ಸಲಹೆಗಳನ್ನು ಕೇಳುವುದಕ್ಕಾಗಿ ಬಂದಿದ್ದರು. ನಿಜಕ್ಕೂ ಉತ್ಸಾಹಿ ತರುಣರು. ಬ್ಯಾಂಕಿನಲ್ಲಿ ಕೆಲಸದಲ್ಲಿದ್ದು ಸ್ವತಂತ್ರರಾಗಿ ಬಿಕಾಂ. ಕೋಚಿಂಗ್‌ಕ್ಲಾಸ್ ನಡೆಸಿ ಬಹು ಪ್ರಸಿದ್ಧರಾಗಿದ್ದರು. ಜೈನಸಮಾಜಕ್ಕಲ್ಲದೆ ಜೈನೇತರರ ಸಮಾಜಕ್ಕೆ ಇದರಿಂದ ಬಹಳ ನಷ್ಟವಾಯಿತು. ಇವರ ಆತ್ಮಕ್ಕೆ ಶಾಂತಿಯನ್ನೂ ಇವರ ಕುಟುಂಬವರ್ಗಕ್ಕೆ ದುಃಖವನ್ನು ಸಹಿಸುವ ಶಕ್ತಿಯನ್ನು ಕೊಡಬೇಕೆಂದು ದಯಾಮಯನಾದ ಅರ್ಹತ್ಪರಮೇಶ್ವರರಲ್ಲಿ ಪ್ರಾರ್ಥಿಸುತ್ತೇವೆ.

ಸಂ. ಜಿನವಾಣಿ

ಶ್ರೀಃ

ಶ್ರೀಪರಮಾತ್ಮನೇ ನಮಃ

ಶ್ರೀಶುಭಚಂದ್ರಾಚಾರ್ಯವಿರಚಿತಃ

# ಜ್ಞಾನಾರ್ಣವಃ

(ಭಾವತಲಸ್ಪರ್ಶಿವ್ಯಾಖ್ಯಾ ಕರ್ಣಾಟಕಾನುವಾದಯುತಃ)

ಕಳೆದ ಸಂಚಿಕೆಯಿಂದ ಮುಂದುವರೆದುದು

ಇಲ್ಲಿಯವರೆಗೆ– ಮನಶ್ಶಕ್ತಿಯ ಸಾರ್ಥಕತೆಯ ದಾರಿಯಲ್ಲಿ ಮಾನವಕರ್ತವ್ಯ, ಅಲ್ಲಿ ಯೋಗದರ್ಶನದ ವೈವಿಧ್ಯತೆ, ಜೈನ-ವೈದಿಕಯೋಗಗಳ ಸಾಮರಸ್ಯ, ಯೋಗಮಾರ್ಗದಲ್ಲಿ ಜೈನ-ಜೈನೇತರರ ಸಾಮ್ಯ-ವೈಷಮ್ಯಗಳು, ಜೈನರ ಅಸಂದೃಷ್ಟಿ, ವೈದಿಕರ ಅಷ್ಟಾಂಗಯೋಗ, ಜೈನಯೋಗ ಪ್ರತಿಪಾದನೆಯಲ್ಲಿ ಜ್ಞಾನಾರ್ಣವದಸ್ಥಾನ, ಶ್ರುತಸನ್ನಿವೇಶನ್ವಯದ ದಾರಿಯಲ್ಲಿ ವ್ಯಾಖ್ಯೆಯ ರಚನೆಯ ಕೌತುಕ, ಯೋಗ ಶಬ್ದಾರ್ಥ ಅಲ್ಲಿ ಮನಸ್ಸಿನ ಸ್ಥಾನ, ವೈದಿಕದರ್ಶನದಲ್ಲಿ ಯೋಗ ಶಬ್ದಾರ್ಥ– ಇಷ್ಟು ಓದಿಯಾಯಿತು. ಮುಂದೆ ಓದಿ–

ಈ ಯಮಾದಿ–ಸಮಾಧ್ಯಂತವಾಗಿ ಪೇಳಲ್ಪಟ್ಟ ಯೋಗಾಂಗಗಳು ಪತಂಜಲಿಯ ಯೋಗಕ್ಕೆ ಸಂಬಂಧಿಸಿದವುಗಳು. ಅಲ್ಲಿ–

ಯಮ :–ವ್ಯಾವಹಾರಿಕ ಜಿವನದಲ್ಲಿ ಎದುರು ಬರುವ ಸಾಂಸಾರಿಕ ಸುಖೋಪ ಭೋಗಗಳೆಡೆಗೆ ಹರಿಯುವ ಕಾಯಿಕ–ವಾಚಿಕ–ಮಾನಸಿಕ ಕರ್ಮಗಳನು ತಡೆದು ಸಾತ್ವಿಕವಾದ ಮತ್ತು ಪರಿಶುದ್ಧವಾದ ಜೀವನವನ್ನು ನಿರ್ಧ್ರತ ವಾದ ದಿಸೆಯಲ್ಲಿ ನಡೆಸಿ [ಸತ್ಕರ್ಮಾನುಷ್ಠಾನನಿರತನಾದ ಜೀವಿಯ ಜನ್ಮಸಾರ್ಥಕವಾಗುತ್ತದೆಯಲ್ಲದೆ ತನ್ಮೂಲಕ ಅವನ ಆಯುಷ್ಯವು ಹೆಚ್ಚಿ ಭೋಗೋಪಲಬ್ಧಿಯು ಅವನೆಡೆ ಸುಳಿದರೂ ಅದುನಿರ್ವೀರ್ಯವಾಗುತ್ತದೆ. ಆದರಿಂದ ವ್ಯಾವಹಾರಿಕವಾಗಿ ಆತನಿಗೆ ರಾಗದ್ವೇಷಗಳಲ್ಲಿ ಅಭಿನಿವೇಶ ಕಮ್ಮಿಯಾಗುತ್ತಾ ಬರುತ್ತದೆ ಇದೇ ಯಮ. ಈ ಯಮವು ಬಲಾತ್ಕಾರ ವಾಗಿ ಜೀವಿಯು ತನ್ನನ್ನು ತಾನೇ ನಿರ್ಬಂಧದಲ್ಲಿಡುವುದರಿಂದ ಮಾತ್ರ ಸಾಧ್ಯ.

ನಿಯಮ:–ಈ ಸಂಯಮವು ಅನುಷ್ಠಾನಕ್ಕೆ ಬರಲು ನಿಯಮ ಸಹಕಾರಿ. ಜೀವಿ ಯಾದವನು ತನ್ನನ್ನು ತಾನೇ ಇಂತಿಷ್ಟೇ ತಾನು ಮಾಡಬೇಕು, ಇಂತಿಷ್ಟೇ ಆಡಬೇಕು ; ಇಂತಿಷ್ಟೇ ಪರಿಚಿಂತಿಸಬೇಕು ; ಎಂದು ತನ್ನ ಕ್ರಿಯೆಯನ್ನು ಒಂದು ಪರಿಮಿತಿಯ ಚೌಕಟ್ಟಿನೊಳಗೆ ಆಳವಡಿಸಿಕೊಳ್ಳು ವುದೇ ನಿಯಮ. ಎಂದರೆ ಆತನ ಆಚಾರ ವಿಚಾರ ವಿಹಾರಗಳು ಪರಿಮಿತ ಎಂದರ್ಥ. ಇಂತಹ ಒಂದು ಮಿತಿಗೆ ತನ್ನನ್ನು ತಾನೇ ಆಳವಡಿಸಿ ಕೊಂಡಾಗ ಶರೀರ–ಇಂದ್ರಿಯ–ಅಂತಃಕರಣಗಳಿಂದ ಆಗಬಹುದಾದ ರಾಜಸ–ತಾಮಸಗಳಿಂದ ಆಗಬಹುದಾದ ಅನರ್ಥ ತಾನೇ ನಷ್ಟವಾಗಿ ಆ ಜೀವಿಯ ಮನ–ವಚನ–ಕಾಯಗಳು ಪವಿತ್ರವಾಗುತ್ತವೆ.

ಆಸನ:– ಜೀವಿಜಾತದ ಯಾವ ಕ್ರಿಯೆಯೂ ಶಾರೀರಕ–ಮಾನಸಿಕ ಸ್ಥಿತಿಗತಿ ಗಳಿಂದ ಬರುತ್ತದೆ. ಅದು ಉನ್ಮತ್ತ ಪ್ರವೃತ್ತವಾಗದಿರಬೇಕಾದಲ್ಲಿ ಶಾರೀರಕ ಕ್ರಿಯೆಯನ್ನು ಹದ್ದಿನಲ್ಲಿಡಬೇಕು ಆಗಲೀಗ ಮನಸ್ಸು ಪ್ರಫುಲ್ಲಿತವಾಗಿ ರಜೋರೂಪವಾದ ಚಂಚಲತೆ ಅಸ್ಥಿರತೆಯೂ ತಮೋರೂಪಿಯಾದ ಆಲಸ್ಯವೂ ದೂರ ಸರಿಯುತ್ತವೆ. ಆಗ ಸಾತ್ವಿಕ ಪ್ರವೃತ್ತಿಯು ಪ್ರಜ್ವಲಿಸಿ ಅದು ದೇದೀಪ್ಯಮಾನವಾಗುತ್ತದೆ. ಅದಕ್ಕೆ ಆಸನ ಪ್ರಮುಖ 'ಆಸ– ಉಪವೇಶನೇ' ಎಂಬ ಧಾತುವಿನಿಂದ ಉತ್ಪನ್ನವಾದ ಈ ಶಬ್ದ ದೇಹವನು

ಒಂದು ಸ್ಥಿರವಾದ ನೆಲೆಯಲ್ಲಿ ಸಾಮಾಧ್ಯವಸ್ಥೆಯನ್ನು ಹೊಂದಲು ಅನುಕೂಲವಾಗುವಂತೆ ನೆಲೆನಿಲ್ಲಿಸುವುದೆಂಬುದನ್ನು ತಿಳಿಸುತ್ತದೆ. ಆದ್ದರಿಂದ ಸಾಮಾಧ್ಯವಸ್ಥಾಪನ್ನರೂ ಕೂಡ ಒಂದು ಸುಸ್ಥಿರಾಸನ ನಿಷಣ್ಣರು. ಇದು ಸರ್ವಮತ ಸಂಪ್ರತಿನ್ನಾಂಶ

**ಪ್ರಾಣಾಯಾಮ:**– ಉಚ್ಛ್ವಾಸ-ನಿಶ್ವಾಸಗಳನ್ನು ಸುಸ್ಥಿತಿಗೊಳಿಸಿ ಪ್ರಾಣವಾಯು ವನ್ನು ನಿರೋಧಿಸಿ ಸುಸ್ಥಿತಗೊಳಿಸುವುದು. ಈ ಬಗೆಯಲ್ಲಿ ಪ್ರಾಣವಾಯು ವನ್ನು ಸುಸ್ಥಿತಗೊಳಿಸುವುದರಿಂದ ಯಥೇಚ್ಛವಾಗಿ ಸಂಚರಿಸುವಮನಸ್ಸನ್ನು ನಿರೋಧಿಸಿ ಒಂದೆಡೆ ಕೇಂದ್ರೀಕರಿಸಲು ಅವಕಾಶವೊದಗುತ್ತದೆ. ಇದರಿಂದ ಶಾರೀರಿಕ ರೋಗರುಜಿನಗಳು ನೌಡಾಯಿಸುತ್ತವೆಯಲ್ಲದೆ ಜೀವಿಯು ನೀರೋಗಿಯೂ ದೀರ್ಘಾಯುಷಿಯೂ ಆಗುತ್ತಾನೆ.

**ಪ್ರತ್ಯಾಹಾರ:**–ಈ ಯಮ-ನಿಯಮ-ಆಸನಗಳಿಂದ ಅನಿರ್ಬಂಧಿತವಾಗಿ ಧಾವಿಸುವ ಜೀವನವನ್ನು ವ್ಯವಸ್ಥೆಗೊಳಿಸಿ, ಸಾತ್ವಿಕ ರೀತಿಯನ್ನು ಬೆಳಗಿಸಿ ಆಲಸ್ಯವನ್ನು ಬಡಿದೋಡಿಸಿ,ದೇಹವನ್ನು ಹತೋಟಿಯಲ್ಲಿಟ್ಟು ನಿರೋಗಿಯಾದವನಿಗೆ ಮನಸ್ಸನ್ನು ಒಂದು ಗುರಿಯತ್ತ ಕೇಂದ್ರಿಕರಿಸುವುದು ಬಹು ಸುಲಭ. ಅದೇ ಪ್ರತ್ಯಾಹಾರ. ಎಂದರೆ-'ಪ್ರತಿ-ಆಹಾರ' ಎಳೆತಂದು ಕೇಂದ್ರಿಕರಿಸುವುದು- ಮನಸ್ಸನ್ನು ಆತ್ಮನಲ್ಲಿ ಧ್ರುವೀಕರಿಸುವುದು ಎಂದಾಗುತ್ತದೆ. ಇದರಿಂದ ಆಲಸ್ಯವು ಧಾವಿಸಿ ತಾನಾಗಿಯೇ ಚೇಷ್ಟಾಶ್ರಯವಾದ ಶರೀರವು ಮಾಡುವ ಪ್ರಮಾದ ಎಂಬ ಅಂದಕಾರ ತೊಲಗುತ್ತದೆ.

**ಧಾರಣಾ:**– ಮನಸ್ಸಿನ ಮೌಢ್ಯತೆಯು ಅಜ್ಞಾನವೆಂಬ ಅಂಧಕಾರ ತೊಲಗಿದಾಗ ಪರಮಾತ್ಮನ ನಿಜಸ್ವರೂಪದ ಚಿತ್ರವನ್ನು ಚಿತ್ತಭಿತ್ತಿಯಲ್ಲಿ ಒಡ ಮೂಡಿಸುವು ಧಾರಣೆ.

**ಧ್ಯಾನ:** ತನ್ನ ಮನದಲ್ಲಿ ಒಡಮೂಡಿಸಿಕೊಂಡ ಪರಮಾತ್ಮ ಸ್ವರೂಪವನ್ನು ಯಾವ ಪ್ರತಿ ವಿಘ್ನಗಳೂ ಮನದೊಳಗೆ ನುಸುಳದಂತೆ ತೈಲಧಾರಾವದ ವಿಚ್ಛಿನ್ನ ಸಂಪಾತದಂತೆ[1] ಏಕಾಗ್ರವಾಗಿ ಸಂದರ್ಶಿಸುವುದೇ ಧ್ಯಾನ.

---

[1] ಗಡಿಗೆಯೊಳಗಿನ ಎಣ್ಣೆಯನ್ನು ಧಾರಾಕಾರವಾಗಿ ಹಾತ್ತೊಂದು ಪಾತ್ರಕ್ಕೆ ಬಗ್ಗಿಸುವಾ ಒಂದರಿಂದ ಮತ್ತೊಂದಕ್ಕೆ ನುಸುಳುವ ಆ ಧಾರೆಯಲ್ಲಿ ಯಾವ ಛಿದ್ರವೂ ಇಲ್ಲದೆ ಆಧಾರ ವಸ್ತುವನ್ನು ಆಲಂಗಿಸುವಂತೆ ಪರಮಾತ್ಮನ ನಿಶ್ಚಿತ ಸ್ವರೂಪವನ್ನು ನೆನೆಯು ವುದೆಂದರ್ಥ.

ತಥಾನ್ಯೈಃ ಯಮನಿಯಮಾವಪಾಸ್ಯ ಆಸನ-ಪ್ರಾಣಾಯಾಮ-ಪ್ರತ್ಯಾಹಾರ ಧಾರಣಾ-ಧ್ಯಾನ-ಸಮಾಧಯ ಇತಿ ಷಟ್ ||

---

**ಸಮಾಧಿ:**– ಸಮಾಧಿಯು ಜೀವಿಯು ಹೊಂದುವ ಕೊನೆಯ ಅವಸ್ಥೆ. ಇದರಿಂದ ರಜೋಗುಣವು ಓಡುತ್ತಿದೆ. ಧ್ಯಾನ ಮಾಡುವವನನ್ನು ಅಜ್ಞಾನಾಂಧಕಾರ ಬಾಧಿಸದು. ಇಂತಹ ಅವಸ್ಥೆಯಲ್ಲಿ ನಾನಾ-ಉಪಸರ್ಗಗಳು ಅವನನ್ನು ಬಾಧಿಸುವುವು. ಆ ಉಪಸರ್ಗಗಳಿಗೆ ಜೀವಬಲಿಯಾಗಬಾರದು. ಆಗ ಲೀಗ ಆತ ತನ್ನ ಮನೋಸ್ಥಿತಿಯನ್ನು ಸಾತ್ವಿಕ ರೀತಿಯಲ್ಲೇ ಸ್ಥಿರೀಕರಿಸ ಬೇಕು–ಸ್ಥಿತೀಕರಿಸುತ್ತಾನೆ ಕೂಡ. ಆದ್ದರಿಂದ ಧ್ಯೇಯಾಕಾರ ಒಂದು ಮಾತ್ರ ಅಚ್ಚಳಿಯದೆ ಅದನವನ ಮನಃಪಟಲದಲ್ಲಿ ನೆಲೆನಿಲ್ಲುವುದು. ಇಂತಹವನಿಗೆ ಅಣಿಮಾದಿ ಅಷ್ಟಸಿದ್ಧಿಗಳು ಕರತಲಮಕ. ಅವನಿಗೆ ಹೇಯ ಮತ್ತು ಅನುಪಾದೇಯ. ಅಲ್ಲೇನಾದರೂ ಎಡವಿದರೆ–ಅವನ ಅಧಃಪತನ ಶತಸಿದ್ಧ. ಯಾವ ಯೋಗಿಯೂ ಈ ರೀತಿಯಾಗಲಾರ. ಇದೇ ಸಮಾಧಿ. ಇದೇ ಶಾಶ್ವತ.

ಈ ಪ್ರಕಾರವಾದ ಎಂಟು ಯೋಗಾಂಗಗಳಲ್ಲಿ ಮೊದಲ ಐದು ಬಹಿರಂಗ. ಕೊನೆಯ ಮೂರು ಬಹಿರಂಗ. ಇದು ಪತಂಜಲಿಯ ಅಭಿಪ್ರಾಯ-ನಡೆ-ನುಡಿಯೂ ಹೌದು. ||೧||

ಈ ಎರಡು ಸೂತ್ರ ಮತಾಂತರವೊಂದರ ಯೋಗ ಸ್ಥಾನಗಳನ್ನು ನಿರ್ದೇಶಿಸುತ್ತದೆ 'ತಥಾನ್ಯೈಃ' ಇತ್ಯಾದಿಯಾಗಿ -

ಯೋಗ ಸಿದ್ಧಿಗೆ ಈ ಎಂಟು ಸ್ಥಾನಗಳು ಅನವಶ್ಯಕ. ಕಾರಣ ಅನಾದಿ ಆರು ಸ್ಥಾನಗಳೇ ಆತ್ಯಂಸಿಕ ದುಃಖನಿವೃತ್ತಿಗೆ ಸಾಕಾಗುತ್ತದೆ; ಎಂಬುದೆ ಆಗಿದೆ. ಎಂದರೆ– ಆಸನಾದಿಗಳನ್ನು ಮಾಡವುದರಿಂದಲೇ ಯಮನಿಯಗಳು ಅದರಲ್ಲಿ (ಅವನಲ್ಲಿ) ಅಡಕ ವಾಗುತ್ತವೆ. ಯಮನಿಯಮಗಳಿಲ್ಲದೆ ಆಸನವು ದುರ್ಘಕವಲ್ಲವೆ ?

ಆದ್ದರಿಂದ ಮತ್ತೆ ಕೆಲವು ಆಚಾರ್ಯ-ಆಸನ-ಪ್ರಾಣಾಯಾಮ-ಪ್ರತ್ಯಾಹಾರ- ಧಾರಕಾ-ಧ್ಯಾನ-ಸಮಾಧಿಗಳೆಂಬ ಆರು ಅಂಶಗಳು ಮಾತ್ರ ಯೋಗಸ್ಥಾನವೆನ್ನುತ್ತಾರೆ

ತಥಾನ್ಯೈಃ-

ಉತ್ಸಾಹನ್ನಿಶ್ಚಯಾದ್ಧೈರ್ಯಾತ್ ಸಂತೋಷಾತ್ತತ್ತ್ವದರ್ಶನಾತ್ ।
ಮುನೇರ್ಜನಪದತ್ಯಾಗಾತ್ ಷಡ್ಭಿರ್ಯೋಗಪ್ರಸಿದ್ಯತಿ ॥ ೧ ॥

---

ಇವೆರಡೂ ದರ್ಶನಗಳು ಯೋಗದಲ್ಲಿ ವಿಭಿನ್ನದರ್ಶನಗಳಾದರೂ ಎರಡು ಅಂಶಗಳನ್ನು ಬಿಟ್ಟರೆ ಎರಡೂ ಒಂದೇ. ಆದರೆ-ಇದಕ್ಕೆ ಭಿನ್ನವಾದ ಬಗೆಯ ಯೋಗಸಿದ್ಧಿಯನ್ನು ಬಣ್ಣಿಸುವ ಕೆಲದರುಂಟು. ಅವರ ಅಭಿಪ್ರಾಯವನ್ನು ಗ್ರಂಥಕಾರ ಅಂತು ಉಲ್ಲೇಖಿಸುತ್ತಾನೆ- "ತಥಾನ್ಯೈಃ" ಇತ್ಯಾದಿಯಾಗಿ.

ಉತ್ಸಾಹದಿಂದ, ಕಾರ್ಯನಿಶ್ಚಯದಿಂದ, ಕಾರ್ಯಸಾಧನೆಯಲ್ಲಿ ನಿಸ್ಸಂಶಯವಾದ ಧೈರ್ಯದಿಂದ ಕಾರ್ಯಸಾಧನೆಯಾಕುತ್ತದೆಂಬ ಸಂತಸದಿಂದ, ಮತ್ತೆ ಮಿಗಿಲಾಗಿ ಜನನಿಬಿಡವಾದ ದೇಶಕೋಶಗಳ ತ್ಯಾಗದಿಂದ ಮನನಶೀಲನಾದ ಯೋಗವನ್ನು ಸಾಧಿಸುತ್ತಾನೆ, ಮತ್ತದರಿಂದ ಆತ್ಮಸಿದ್ಧಿಯನ್ನು ತಡೆಯುವನು.

ಉತ್ಸಾಹ:- ಯಾವ ಕಾರ್ಯವನ್ನೇ ಆಗಲಿ ಮಾಡಬೇಕಾದರೆ ಅದಕ್ಕೆ ಉತ್ಸಾಹ ಬಹು ಮುಖ್ಯ. ಉತ್ಸಾಹವೆಂದರೆ ಅಭಿಮತವಾದ ಕಾರ್ಯವನ್ನು ಆರಂಭಿಸಿದ ಕಾರ್ಯವನ್ನು "ಆರಬ್ಧದ್ಯಾಂಗತಗಮನಂ" ಎಂಬಂತೆ ಗುರಿಮುಟ್ಟಿಸುವುದೇ ಆಗಿದೆ. ಲೋಕವೆಲ್ಲಾ ನಿಂತಿರುವುದು ಉತ್ಸಾಹಶಕ್ತಿಯಿಂದಲೇ ಶ್ರೀರಾಮನು ಸೀತಾವಿರಹಸಂತಕ್ತನಾಗಿ ದುಃಖಿತನಾದಾಗ ಲಕ್ಷ್ಮಣನು ಕೂಡ....

"ಉತ್ಸಾಹೋ ಬಲವಾರ್ಯ ನಾಸ್ತ್ಯುತ್ಸಾಹಾತ್ ಪರಂ ಬಲಮ್ ।
ಸೋತ್ಸಾಹಸ್ಯಾಸ್ತಿ ಲೋಕಸ್ಮಿನ್ ನ ಕಿಂಚಿದಪಿ ದುರ್ಲಭಮ್ ॥
ಉತ್ಸಾಹ ಮಾತ್ರಮಾಶ್ರಿತ್ಯ ಪ್ರತಿಲಪ್ಸ್ಯಾಮ ಜಾನಕೀಮ್ ॥"

ಎಂದರೆ- ಲೋಕದಲ್ಲಿ ಕಾರ್ಯಸಾಧನೆಯ ಹಂತದಲ್ಲಿ ಉತ್ಸಾಹವು ಅತಿಬಲವತ್ತರ. ಆದ್ದರಿಂದ ಉತ್ಸಾಹಕ್ಕಿಂತ ಬಲವತ್ತರವಾದುದು ಯಾವುದೂ ಇಲ್ಲ. ಆದ್ದರಿಂದ ಸೀತೆಯನ್ನು ಹೊಂದಿಯೇ ಹೊಂದುತ್ತೇವೆಂಬ ಸಂಕಲ್ಪಾನುಗುಣವಾದ ಉತ್ಸಾಹವನ್ನು ಮುಂದಿಟ್ಟು ಸೀತೆಯನ್ನು ಪಡೆಯುವಾ ! ಎಂದು ಉತ್ಸಾಹದ ಹಿರಿಮೆಯನ್ನು ಬಣ್ಣಿಸಿದ್ದಾನೆ

ನಿಶ್ಚಯ :- ಈ ಉತ್ಸಾಹಮಾತ್ರ ಯೋಗಸಿದ್ಧಿಯನ್ನು ಸಾಧಿಸಲಾಗದು. ಆದರೆ ಅದು ಯೋಗಸಿದ್ದಿಗೆ ದಾರಿಯನ್ನು ಸುಗಮವಾದ ತಳಹದಿಯ ಮೇಲೆ

ಓಂ ನಮಸ್ಸಿದ್ಧೇಭ್ಯಃ

# ತ್ರಿಲೋಕದರ್ಶನ

( ಕಳೆದ ಸಂಚಿಕೆಯಿಂದ ಮುಂದುವರೆದುದು )

ಲೇಖಕರು:

**ಡಿ. ಶ್ರೀಪತಿಜೋಯಿಸ್,**
**ಭುವನಹಳ್ಳಿ.**

ಇಲ್ಲಿಯವರೆವಿಗೆ– ಅಹಿಂಸೆಯ ಅಡಿಗಲ್ಲ ಮೇಲೆ ಅನೇಕಾಂತವಾದ ನುಡಿಗಳಲ್ಲಿ ನಿಧೃತವಾದ ಜೈನ ಸಿದ್ಧಾಂತವು ತನ್ನ ನಿರೂಪಣಾನುಗುಣವಾದ ಕರ್ಮಸಿದ್ಧಾಂತವನ್ನು ಮುಂದಿಟ್ಟು ಲೋಕಾಲೋಕ ವಿಚಾರಮಂಥನ ಮಾಡಿದೆ. ಇದೆಲ್ಲವೂ ತೀರ್ಥಂಕರ ಪರಮದೇವನ ಮುಖೋದ್ಘಾತವಾಗಿ ಜಿನವಾಣಿಯಾಗಿದೆ ಇದರ ಅನುಸಾರವಾಗಿ ಪ್ರಥಮಾನುಯೋಗಾದಿಗಳಲ್ಲಿ ಲೋಕಸ್ವರೂಪ ವಿವರಣೆ, ತ್ರಿಲೋಕದ ಔನ್ನತ್ಯ, ಅದರ ವಿಸ್ತಾರ, ತ್ರಸನಾಳ ವಿಚಾರ, ರಜ್ಜು ವಿಚಾರ, ಅಧೋಲೋಕ ಮಧ್ಯಲೋಕ-ಊರ್ಧ್ವಲೋಕಗಳ ವಿಸ್ತಾರಾಯತಾಧಿವರ್ಣನೆ, ಪ್ರಥಮಸ್ವರ್ಗದಿಂದ ಸಿದ್ಧಶಿಲೆಯವರೆಗೆ ಲೋಕಗಳ ವಿಸ್ತಾರ ವಾಯುವಲಯ ವರ್ಣನೆ, ಇಂತಿಷ್ಟು ವಿವರಿಸಿದ್ದಾಯ್ತು ಲೋಕರ ಮತ್ತು ಅಧೋಲೋಕದ ಘನಫಲ, ಆತ್ಮಾಂಗುಲದ ಉಪಯೋಗ, ಪಲ್ಯ ಪ್ರಮಾಣ, ಸಾಗರ ಪ್ರಮಾಣ ಅಧೋಲೋಕದ ವರ್ಣನೆ, ಪೃಥ್ವಿಗಳ ನಾಮಾಂ ವರ್ಣನೆ - ಇಂತಿಷ್ಟು ಓದಿಯಾಯಿತು.

[ಮುಂದೆಓದಿ]

೧. ಖರಭಾಗ ೨. ಪಂಕಭಾಗ ೩. ಅಬ್ಬಹುಲಭಾಗ. ರತ್ನಪ್ರಭಾ ಪೃಥ್ವಿಯು ೧ಲಕ್ಷ ೮೦ ಸಾವಿರ ಯೋಜನ ಗಾತ್ರದ್ದಾಗಿದೆ, ಇದರಲ್ಲಿ ಖರಭಾಗ ೧೬ಸಾವಿರ ಯೋಜನ, ಪಂಕಭಾಗ ೮೪ ಸಾವಿರ ಯೋಜನ ಮತ್ತು ಅಬ್ಬಹುಲ ಭಾಗ ೮೦

ಸಾವಿರ ಯೋಜನ ವಿಸ್ತೀರ್ಣವುಳ್ಳದ್ದಾಗಿವೆ.

ಇವುಗಳಲ್ಲಿ ಖರಭಾಗವು ಹದಿನಾರು ವಿಭಾಗಗಳಿಂದ ಕೂಡಿದೆ. ಚಿತ್ರಾ, ವಜ್ರ, ವೈಡೂರ್ಯ, ಲೋಹಿತಾ, ಕಾಮಸಾರಕಲ್ಪಾ, ಗೋಮೇದಾ, ಪ್ರವಾಳಾ, ಜ್ಯೋತಿರಸಾ, ಅಂಜನಾ, ಅಂಜನಮೂಲಿಕಾ, ಅಂಕಾ, ಸ್ಪಟಿಕಾ, ಚಂದನಾ, ಸರ್ವಾರ್ಥಕಾ, ವಕುಲಾ, ಮತ್ತು ಶೈಲಾ ಇವುಗಳೇ ಆ ಹದಿನಾರು.

ಖರಭಾಗದ ಗಾತ್ರವು ೧೬ ಸಾವಿರ ಯೋಜನವೆಂದು ಹಿಂದೆಯೇ ಹೇಳಿದೆ. ಈ ಭಾಗದಲ್ಲಿ ಉಪಯುಕ್ತವಾದ ಹದಿನಾರು ಪೃಥ್ವೀಗಳೂ ಕೂಡ ಇವೆ ಈ ಒಂದೊಂಡು ಪೃಥ್ವಿಯೂ ಒಂದೊಂದು ಸಾವಿರ ಯೋಜನ ಪ್ರಮಾಣದ್ದಾಗಿದೆ. ಉದ್ದ ಮತ್ತು ಅಗಲದಲ್ಲಿ ಈ ಪೃಥ್ವಿಗಳು ಲೋಕಕ್ಕೆ ಸಮನಾಗಿವೆ.

ಈ ಖರಭಾಗದಲ್ಲಿನ ಮೊಟ್ಟಮೊದಲ ಪೃಥ್ವಿ ಚಿತ್ರಾ. ಇದರ ಮೇಲ್ ಭಾಗದಲ್ಲೇ ಇದೆಕ್ಕೆ ಸೇರಿದಂತೆ ಮಧ್ಯಲೋಕದ ರಚನೆ ಆಗಿದೆ ಈ ಚಿತ್ರಾ ಪೃಥ್ವಿಯಲ್ಲಿ ಅನೇಕ ವರ್ಣಗಳಿಂದ ಕೂಡಿದ ಮಹೀತಲ, ಶಿಲಾತಲ ಉಪಪಾದ ಬಾಲು ಶರ್ಕರಾ. ಸೀಸಾ, ಬೆಳ್ಳಿ, ಸುವರ್ಣಗಳ ಉತ್ಪತ್ತಿ ಸ್ಥಾನಗಳಿವೆ. ವಜ್ರ ಕಬ್ಬಿಣ ತಾಮ್ರ, ರಾಂಗಾ, ಮಣಿಶಿಲಾ, ಸಿಂಗರಫ್, ಹರಿತಾಲ, ಅಂಜನಾ, ಪ್ರವಾಳ, ಗೋಮೇದಕ, ದೂಚಕ, ಕದಂಬ, ಸ್ಫಟಿಕ, ಮಣಿ, ಜಲಕಾಂಕಮಣಿ, ಸೂರ್ಯಕಾಂತಮಣಿ, ಚಂದ್ರಕಾಂತಮಣಿ, ವೈಢೂರ್ಯ, ಗೇಸೂ, ಚಂದ್ರಾಶ್ಮ ಮೊದಲಾದ ವಿಧವಿಧವಾದ ವರ್ಣಗಳ ಅನೇಕ ಧಾತುಗಳೂ ಇವೆ. ಈ ಕಾರಣ ಈ ಪೃಥ್ವಿಯ ಚಿತ್ರಾ ಎಂಬ ಹೆಸರು ಸಾರ್ಥಕವಾಗಿದೆ.

ಖರಭಾಗ ಮತ್ತು ಪಂಕಭಾಗದಲ್ಲಿ ಭವನವಾಸಿ ಮತ್ತು ವ್ಯಂತರವಾಸಿ ದೇವತೆಗಳ ನಿವಾಸಗಳಿವೆ. ಅಬ್ಬಹುಲ ಭಾಗದಲ್ಲಿ ಮೊದಲನೆ ನರಕದ ಬಿಲವಿದೆ. ಇದ್ದರಲ್ಲಿ ನಾರಕೀ ಜನರ ನಿವಾಸಗಳಿವೆ.

ಈ ಮೊದಲ ರತ್ನಪ್ರಭಾ ಪೃಥ್ವಿಯು ಬಹು ಪ್ರಕಾರದ ರತ್ನಗಳಿಂದ ಕೂಡಿ ಶೋಭಾಯಮಾನವಾಗಿದೆ ಇದರಿಂದ ಇದರ ರತ್ನಪ್ರಭಾ ಹೆಸರು ಸಾರ್ಥಕವೇ ಸರಿ !

## ಏಳು ಪೃಥ್ವಿಗಳ ವಿಸ್ತೀರ್ಣ

| | | |
|---|---|---|
| ೧. | ರತ್ನಪ್ರಭಾ | ೧ ಲಕ್ಷ ೮೦ ಸಾವಿರ ಯೋಜನ |
| ೨ | ವಾಲುಕಪ್ರಭಾ | ೩೨ ಸಾವಿರ ಯೋಜನ |

| | | |
|---|---|---|
| ೩. | ಶರ್ಕರಪ್ರಭಾ | ೩೨ ಸಾದರ ಯೋಜನ |
| ೪. | ಪಂಕಪ್ರಭಾ | ೨೪ ಸಾವಿರ ಯೋಜನ |
| ೫. | ಧೂಮಪ್ರಭಾ | ೨೦ ಸಾವಿರ ಯೋಜನ |
| ೬. | ತಮಃಪ್ರಭಾ | ೧೬ ಸಾವಿರ ಯೋಜನ |
| ೭. | ಮಹಾತಮಃಪ್ರಭಾ | ೮ ಸಾವಿರ ಯೋಜನ |

ಈ ಏಳೂ ಪೃಥ್ವಿಗಳೂ ಊರ್ಧ್ವ ದಿಕ್ಕನ್ನು ಬಿಟ್ಟು ಉಳಿದ ಒಂಬತ್ತು ದಿಕ್ಕುಗಳಲ್ಲೂ ಘನೋಧದಿವಾತವಲಯದಿಂದ ಕೂಡಿವೆ. ಆದರೆ ೮ನೇ ಮೋಕ್ಷ ಪೃಥ್ವಿಯು ಹತ್ತು ದಿಕ್ಕುಗಳಲ್ಲೂ ಘನೋದಧಿವಾತವಲಯದಿಂದ ಆವರಿಸಲ್ಪಟ್ಟಿದೆ.

## ನರಕಬಿಲಗಳ ಸಂಖ್ಯಾವಿವರಣೆ

ಏಳು ನರಕಗಳಲ್ಲೂ, ಒಟ್ಟು ಇರುವ ಬಿಲಗಳ ಸಂಖ್ಯೆ ೮೪ ಲಕ್ಷ ಇವು-ಗಳ ವಿವರ ಹೀಗಿದೆ.

| | |
|---|---|
| ಮೊದಲನೇ ನರಕದಲ್ಲಿ | ೩೦ ೦೦೦೦೦ ಬಿಲಗಳು |
| ಎರಡನೇ ನರಕದಲ್ಲಿ | ೩೫ ೦೦೦೦೦ ,, |
| ಮೂರನೇ ನರಕದಲ್ಲಿ | ೧೫ ೦೦೦೦೦ ,, |
| ನಾಲ್ಕನೇ ನರಕದಲ್ಲಿ | ೧೦ ೦೦೦೦೦ ,, |
| ಐದನೇ ನರಕದಲ್ಲಿ | ೩ ೦೦೦೦೦ ,, |
| ಆರನೇ ನರಕದಲ್ಲಿ | ೯೯೯೫ ,, |
| ಏಳನೇ ನರಕದಲ್ಲಿ | ೫ ,, |

## ಶೀತ- ಉಷ್ಣ ಬಿಲಗಳು

ಮೊದಲ, ಎರಡನೆಯ, ಮೂರನೆಯ ಮತ್ತು ನಾಲ್ಕನೆಯ ನರಕಗಳ ಒಟ್ಟು ವಿಸ್ತೀರ್ಣದ ನಾಲ್ಕನೇಮೂರುಭಾಗ ಅತ್ಯಂತ ಉಷ್ಣಾಂಶದಿಂದ ಕೂಡಿದೆ. ಆದ್ದರಿಂದ ಅಲ್ಲಿರುವ ಜೀವಿಗಳಿಗೆ ತೀವ್ರವಾದ ಶಾಖದ ನೋವು ತಟ್ಟುತ್ತದೆ. ಈ ಮೊದಲ ನಾಲ್ಕು ನರಕಗಳ ಉಳಿದ ನಾಲ್ಕನೇಒಂದು ಭಾಗ ಮತ್ತು ಐದು, ಆರು ಮತ್ತು ಏಳನೇ ನರಕಗಳಲ್ಲಿರುವ ನಾರಕೀಯರ ಬಿಲಗಳು ಅತ್ಯಂತ ಶೀತದಿಂದ ಕೂಡಿವೆ. ಅಲ್ಲಿರುವ ಜೀವಿಗಳಿಗೆ ಭಯಾನಕವಾದ ಶೀತದ ವೇದನೆಯನ್ನುಂಟು ಮಾಡುತ್ತವೆ

ನಾರಕೀಯರ ಒಟ್ಟು ೮೪೦೦೦೦೦ ಬಿಲಗಳಲ್ಲಿ ೮೨೨೫೦೦೦ ರಷ್ಟು ಬಿಲಗಳು ಉಷ್ಣಾಂಶದಿಂದಲೂ, ೧೭೫೦೦೦ ಬಿಲಗಳು ಶೀತಶಿಂದಲೂ ಕೂಡಿದೆ.

ಒಂದು ವೇಳೆ ಉಷ್ಣ ಬಿಲದಲ್ಲಿ ಮೇರುವಿಗೆ ಸಮನಾದ ಕಬ್ಬಿಣದ ಗೋಡನ್ನು ಹಾಕಿದರೆ ಅದು ತಳಭಾಗಕ್ಕೆ ತಲಪುವ ಮುನ್ನ ಮಧ್ಯದಲ್ಲಿಯೇ ಮೇಣದ ತುಂಡು ಕರಗುವಂತೆ ಕರಗಿ ನಷ್ಟವಾಗಿ ಹೋಗುತ್ತದೆ.

ಇದೇರೀತಿ ಮೇರುವಿಗೆ ಸಮನಾದ ಕಬ್ಬಿಣದ ಕಾದ ಗುಂಡನ್ನು ಶೀತಬಿಲದಲ್ಲಿ ಹಾಕಿದರೆ ಅದೂಕೂಡ ತಳಭಾಗವನ್ನು ಮುಟ್ಟುವ ಮುನ್ನವೇ ಮಧ್ಯದಲ್ಲಿಯೇ ಉಪ್ಪಿನಹರಳಿನಂತೆ ಕರಗಿ ವಿಲೀನವಾಗುವುದು

ಆಡು, ಆನೆ, ಕುದುರೆ, ಎಮ್ಮೆ, ಕತ್ತೆ, ಒಂಟೆ, ಬೆಕ್ಕು, ಸರ್ಪ, ಮನುಷ್ಯ, ಮತ್ತು ಇತರ ಜೀವಿಗಳ ಕೊಳೆತ ಮಾಂಸಧ ಕೆಟ್ಟ ವಾಸನೆಯಿಂದ ನಾರಕೀಯರ ಬಿಲಗಳು ತುಂಬಿಹೋಗಿವೆ ಸ್ವಭಾವತಃ ಗಾಢವಾದ ಕತ್ತಲಿನಿಂದ ಪರಿಪೂರ್ಣವಾದ ಈ ಬಿಲಗಳು ಕಕಚ, ಕೃಪಾಣ, ಮಾರಿಕಾ, ಚೂರಿಗಳು, ಭಯಂಕರ ಬೆಂಕಿ ಅತಿ ತೀಕ್ಷ್ಣವಾದ ಸಾಜಗಳು, ಆನೆಯ ಘೀಳಿಡುವಿಕೆಯಂಥ ಭಯಂಕರ ಶಬ್ದಗಳಿಂದ ಕೂಡಿ ಅತ್ಯಂತ ಭಯಾನಕವಾಗಿರುತ್ತದೆ

## ನರಕ ಬಿಲಗಳು

ಮೇಲೆ ಪರಿಚಯಿಸಿದ ಅಬ್ಬಹುಲ ಭಾಗದ ಮೊದಲ ನರಕದಿಂದ ಹಿಡಿದು ಆರನೆಯ ನರಕದವರೆವಿಗಿರುವ ಭೂಮಿ(ಪೃಥ್ವಿಯ) ಮೇಲೆ ಮತ್ತು ಕೆಳಗೆ ಒಂದೊಂ-ದು ಸಾವಿರ ಯೋಜನ ಪ್ರಮಾಣ ಗಾತ್ರದ ಪೃಥ್ವಿಯನ್ನು ಬಿಟ್ಟು ಪವರಗಳೋ ಪಾದಿಯಲ್ಲಿ ನಾರಕೀಯರ ಬಿಲಗಳಿವೆ. ಅಲ್ಲದೆ ಏಳನೇ ಪೃಥ್ವಿಯ ಮಧ್ಯಭಾಗಕ್ಕೆ ಸರಿಯಾಗಿಯೂ ನಾರಕೀಯರ ಬಿಲವಿದೆ.

## ನರಕ ಬಿಲಗಳಲ್ಲಿ ಭೇಧಗಳು

ಈ ನಾರಕೀಯ ಬಿಲಗಳು ಇಂದ್ರಕ, ಶ್ರೇಣಿಬದ್ಧ ಮತ್ತು ಪ್ರಕೀರ್ಣಕ ಗಳೆಂದು ಮೂರು ಭೇದಗಳಾಗುತ್ತವೆ.

ಇಂದ್ರಕ:- ಏಳು ನರಕಗಳಲ್ಲಿನ ಎಲ್ಲಾ ಪಟಲಗಳ ಎಲ್ಲಾ ಬಿಲಗಳ ಮಧ್ಯ ದಲ್ಲಿರುವುವೇ ಇಂದ್ರಕಗಳು.

ಶ್ರೇಣಿಬದ್ಧ:- ಬಿಲಗಳ ನಾಲ್ಕು ದಿಕ್ಕುಗಳು ಮತ್ತು ವಿರೋಧ ದಿಕ್ಕುಗಳ ಸಾಲುಗಳಲ್ಲಿರುವುವು ಶ್ರೇಣಿಬದ್ಧ.

ಪ್ರಕೀರ್ಣಕ:- ಶ್ರೇಣಿಬದ್ಧಬಿಲಗಳ ಮಧ್ಯದಲ್ಲಿ ಎರಡೂಕಡೆ ಇರುವ ಬಿಲ ಗಳನ್ನು ಪ್ರಕೀರ್ಣಕಗಳು ಎಂದು ಹೇಳಿದ್ದಾರೆ.

ರತ್ನಪ್ರಭಾ ಮೊದಲಾಗಿ ಏಳು ನರಕಗಳಲ್ಲಿಯೂ ಕ್ರಮವಾಗಿ ಒಂದೊಂದರ ಲ್ಲಿಯೂ ೧೩, ೧೧, ೯, ೭, ೫, ೩, ೧ ರಂತೆ ಒಟ್ಟು ೪೯ ಇಂದ್ರಕ ಬಿಲಗಳಿವೆ ಇವುಗಳನ್ನು ಪ್ರಸ್ತಾರ ಮತ್ತು ಪಟಲಗಳೆಂದೂ ಸಹ ಹೇಳುತ್ತಾರೆ.

ಪ್ರಥಮ ನರಕದಲ್ಲಿ ೧೩ ಇಂದ್ರಕಪಟಲಗಳಿವೆ ಎಂದಾಯ್ತು ಇವುಗಳು ಒಂದರಮೇಲೊಂದು ಮನೆಯಿದ್ದಂತೆ ಕಾಣುತ್ತವೆ. ಭೂಮಿಯ ಒಳಭಾಗದಲ್ಲಿರುವ ಇಲಿ ಮೊದಲಾದುವುಗಳ ಬಿಲಗಳಂತೆ ಇವುಗಳು ಇವೆ. ಬಿಲಗಳಿಗೆ ಯಾವುವೇ ಬಾಗಿಲು ಕಿಟಕಿಗಳಿಲ್ಲದಿರುವಂತೆ ಇವುಗಳೂ ಸಹ ಇರುವುದರಿಂದ ಇವುಗಳಿಗೆ ಬಿಲ ಗಳು ಎಂಬ ಹೆಸರು ಸಾರ್ಥಕವಾಗಿದೆ.

## ಮೊದಲ ನರಕದ ಇಂದ್ರಕ ಬಿಲಗಳು

ಮೊದಲ ರತ್ನಪ್ರಭಾ ನರಕದಲ್ಲಿರುವ ೧೩ ಇಂದ್ರಕ ಬಿಲಗಳ ಹೆಸರುಗಳು ಮುಂದೆ ಹೇಳುವಂತೆ ಇವೆ. ಸೀಮಂತಕ, ನಿರಯ, ರೌರವ, ಭ್ರಾಂತ, ಉದ್ಭ್ರಾಂತ ಸಂಭ್ರಾಂತ, ಅಸಂಭ್ರಾಂತ, ವಿಭ್ರಾಂತ, ತ್ರಸ್ತ, ತ್ರಸಿತ, ವಕ್ರಾಂತ, ಅವಕ್ರಾಂತ ಮತ್ತು ವಿಕ್ರಾಂತ.

## ಇಂದ್ರಕ ಶ್ರೇಣಿಬದ್ಧ ಬಿಲಗಳ ಪ್ರಮಾಣ

ಮೊದಲ ಸೀಮಂತಕ ಎಂಬ ಹೆಸರಿನ ಇಂದ್ರಕ ಬಿಲದ ನಾಲ್ಕು ದಿಕ್ಕುಗಳಲ್ಲೂ ತಲಾ ನಲವತ್ತೊಂಬತ್ತು ಶ್ರೇಣಿಬದ್ಧ ಬಿಲಗಳು ಇವೆ. ಹೀಗೆಯೇ ವಿರುದ್ಧದ ನಾಲ್ಕು ಕಡೆಗಳಲ್ಲಿಯೂ ತಲಾ ನಲವತ್ತೆಂಟು ಶ್ರೇಣಿಬದ್ಧ ಬಿಲಗಳೂ ಇವೆ.

ಅಲ್ಲಿಗೆ ನಾಲ್ಕುದಿಕ್ಕುಗಳ ೪೯×೯=೨೯೬ ಮತ್ತು ನಾಲ್ಕು ವಿರೋಧ ದಿಕ್ಕುಗಳ ೪೮×೪=೧೯೨ ಒಟ್ಟು ೩೮೮ ಶ್ರೇಣಿಬದ್ಧ ಬಿಲಗಳು ಸೀಮಂತಕ ಹೆಸರಿನ ಇಂದ್ರಕ ಸಂಬಂಧವಾದಂತಾಯಿತು.

ಇದರಿಂದ ಮುಂದೆ ಎರಡನೆಯದಾದ ನಿರಯ ಮೊದಲಾದ ಇಂದ್ರಕ ಬಿಲಗಳ ಆಶ್ರಯ ಪಡೆದ ಶ್ರೇಣಿಬದ್ಧ ಬಿಲಗಳಲ್ಲಿ ಒಂದೊಂದೇ ಬಿಲ ಕಡಿಮೆಯಾಗುತ್ತಾ ಹೋಗುವುದು ಈ ರೀತಿ ಪ್ರಥಮ ನರಕಕ್ಕೆ ಸಂಬಂಧಿಸಿದ ಇಂದ್ರಕ ಮತ್ತು ಶ್ರೇಣಿಬದ್ಧ ಬಿಲಗಳ ಪ್ರಮಾಣವು ೪೪೩೩. ಒಟ್ಟು ಏಳು ನರಕಗಳಲ್ಲಿ ೯೬೫೩ ಇಂದ್ರಕ ಮತ್ತು ಶ್ರೇಣಿಬದ್ಧ ಬಿಲಗಳಿವೆ. ಅವುಗಳ ವಿವರ ಕೆಳಗಡೆ ತಿಳಿಸಿದೆ.

## ಏಳು ಪೃಥ್ವಿಗಳ ವಿಸ್ತೀರ್ಣ

| | ಇಂದ್ರಕ | ಶ್ರೇಣಿಬದ್ಧ |
|---|---|---|
| ಮೊದಲ ನರಕದಲ್ಲಿ | ೧೩ | ೪೪೨೦ |
| ಎರಡನೇ ನರಕದಲ್ಲಿ | ೧೧ | ೨೬೮೪ |
| ಮೂರನೇ ನರಕದಲ್ಲಿ | ೯ | ೧೪೭೬ |
| ನಾಲ್ಕನೇ ನರಕದಲ್ಲಿ | ೭ | ೭೦೦ |
| ಐದನೇ ನರಕದಲ್ಲಿ | ೫ | ೨೬೦ |
| ಆರನೇ ನರಕದಲ್ಲಿ | ೩ | ೬೦ |
| ಏಳನೇ ನರಕದಲ್ಲಿ | ೧ | ೪ |
| ಮೊತ್ತ | ೪೯ | ೯೬೦೪ |

## ಪ್ರಕೀರ್ಣಕ ಬಿಲಗಳ ಪ್ರಮಾಣ ಕಂಡುಹಿಡಿಯುವಿಕೆ

ರತ್ನಪ್ರಭಾ ಮೊದಲಾದ ಏಳು ನರಕ ಪೃಥ್ವಿಗಳ ಸಂಪೂರ್ಣ ಬಿಲಗಳ ಸಂಖ್ಯೆಯನ್ನು ಇಟ್ಟುಕೊಂಡು ಅದರಲ್ಲಿ ಇಂದ್ರಕ ಮತ್ತು ಶ್ರೇಣಿಬದ್ಧ ಬಿಲಗಳ ಸಂಖ್ಯೆಯನ್ನು ಕಳೆದರೆ ಆಯಾ ನರಕ ಪೃಥ್ವಿಯ ಪ್ರಕೀರ್ಣಕ ಬಿಲಗಳ ಪ್ರಮಾಣವು ದೊರೆಯುತ್ತದೆ.

ಉದಾಹರಣೆಗೆ:-

ಪ್ರಥಮ ಪೃಥ್ವಿಯ ಎಲ್ಲಾ ಬಿಲಗಳ ಮೊತ್ತ ೩೦೦೦೦೦೦ ಇದೆ. ಇದರಲ್ಲಿ ಇಂದ್ರಕ ಮತ್ತು ಶ್ರೇಣಿಬದ್ಧಗಳ ಮೊತ್ತ ೧೩+೪೪೨೦ ನ್ನು ಕಳೆದರೆ ಉಳಿಯುವ ೨೯೯೫೫೬೭ ಪ್ರಕೀರ್ಣಕ ಬಿಲಗಳು

ಇದೇ ರೀತಿ ಎಲ್ಲ ನರಕ ಪೃಥ್ವಿಗಳ ಪ್ರಕೀರ್ಣಕ ಬಿಲಗಳ ಪ್ರಮಾಣವನ್ನು ಪಡೆಯಬಹುದಾಗಿರುತ್ತೆ.

## ಏಳು ನರಕಗಳಲ್ಲೂ ಇರುವ ಮೂರು ವಿಧದ ಬಿಲಗಳ ಸಂಖ್ಯೆ

| ನರಕ | ಇಂದ್ರಕ | ಶ್ರೇಣಿಬದ್ಧ | ಪ್ರಕೀರ್ಣಕ |
|---|---|---|---|
| ರತ್ನಪ್ರಭಾ | ೧೩ | ೪೪೨೦ | ೨೯೯೫೫೬೭ |
| ಶರ್ಕರಪ್ರಭಾ | ೧೧ | ೨೬೮೪ | ೨೪೯೭೩೦೫ |
| ವಾಲುಕಪ್ರಭಾ | ೯ | ೧೪೭೬ | ೧೪೯೮೫೧೫ |
| ಪಂಕಪ್ರಭಾ | ೭ | ೭೦೦ | ೯೯೯೨೯೩ |
| ಧೂಮಪ್ರಭಾ | ೫ | ೨೬೦ | ೨೯೯೭೩೫ |
| ತಮಃಪ್ರಭಾ | ೩ | ೬೦ | ೯೯೯೩೨ |
| ಮಹಾತಮಪ್ರಭಾ | ೧ | ೪ | |
| ಮೊತ್ತ | ೪೯ | ೯೬೦೪ | ೮೩೯೦೩೪೭ |

ಏಳನೆಯ ನರಕದಲ್ಲಿ ಪ್ರಕೀರ್ಣಕ ಬಿಲವಿಲ್ಲ. ಉಳಿದ ಆರು ನರಕ ಬಿಲಗಳಿಗೆ ಸಂಬಂಧಿಸಿದ ಎಲ್ಲಾ ಪ್ರಕೀರ್ಣಕ ಬಿಲಗಳ ಮೊತ್ತವು ೮೩ ಲಕ್ಷದ ೯೦ ಸಾವಿರದ ೩ ನೂರ ೪೭ ಆಗಿದೆ

ಇಂದ್ರಕ ಬಿಲಗಳ ವಿಸ್ತಾರವು ಎಣಿಕೆಗೆ ನಿಲುಕುವ ಯೋಜನಾ ಪ್ರಮಾಣದಲ್ಲಿದೆ. ಶ್ರೇಣಿಬದ್ಧ ಬಿಲಗಳ ವಿಸ್ತಾರವು ಅಸಂಖ್ಯಾತ ಯೋಜನ ಪ್ರಮಾಣದಲ್ಲಿ ಇದೆ. ಪ್ರಕೀರ್ಣಕ ಬಿಲಗಳಲ್ಲಿ ಕೆಲವು ಸಂಖ್ಯಾತ ಕೆಲವು ಅಸಂಖ್ಯಾತ ಯೋಜನ

ಪ್ರಮಾಣದಲ್ಲಿದೆ ಒಟ್ಟು ೮೪೦೦೦೦೦ ಬಿಲಗಳಲ್ಲಿ ೧೬೮೦೦೦೦ ಬಿಲಗಳ ವಿಸ್ತಾರವು ಸಂಖ್ಯಾತ ಎಂದರೆ ಎಣಿಕೆಗೆ ಸಿಲುಕುವ ಯೋಜನ ಪ್ರಮಾಣದಲ್ಲೂ, ಉಳಿದ ೬೭ ೨೦೦೦೦ ಬಿಲಗಳ ವಿಸ್ತಾರವು ಅಸಂಖ್ಯಾತ ಎಂದರೆ ಎಣಿಕೆಗೆ ನಿಲುಕದ ಯೋಜನ ಪ್ರಮಾಣದಲ್ಲೂ ಇವೆ. ಅವುಗಳ ವಿವರ ಹೀಗಿದೆ:

| ನರಕ | ಸಂಖ್ಯಾತಯೋಜನಾಬಿಲ | ಅಸಂಖ್ಯಾತಯೋಜನಾ ಬಿಲ |
|---|---|---|
| ಮೊದಲನೆಯದು | ೬೦೦೦೦೦ | ೨೪ ೦೦೦೦೦ |
| ಎರಡನೆಯದು | ೫೦೦ ೦೦೦ | ೨೦ ೦೦ ೦೦೦ |
| ಮೂರನೆಯದು | ೩೦೦ ೦೦೦ | ೧೨ ೦೦ ೦೦೦ |
| ನಾಲ್ಕನೆಯದು | ೨೦೦ ೦೦೦ | ೮ ೦೦ ೦೦೦ |
| ಐದನೆಯದು | ೬೦ ೦೦೦ | ೨ ೪೦ ೦8೦ |
| ಆರನೆಯದು | ೧೯೯೯೯ | ೭೯೯೯೬ |
| ಏಳನೆಯದು | ೧ | ೧೪ |
| ಮೊತ್ತ | ೧೬ ೮೦ ೦೦೦ | ೬೭ ೨೦ ೦೦೦ |

ಅಸಂಖ್ಯಾತ ಯೋಜನ ವಿಸ್ತಾರದ ನಾರಕಿಯ ಬಿಲದಲ್ಲಿ ಜಘನ್ಯಂತರಾಳವು ೬ ಕ್ರೋಶ ಮತ್ತು ಉತ್ಕೃಷ್ಟ ಅಂತರಾಳವು ೧೨ ಕ್ರೋಶ ಪ್ರಮಾಣವಿದೆ

ಅಸಂಖ್ಯಾತ ಯೋಜನ ವಿಸ್ತಾರದ ಬಿಲದಲ್ಲಿ ಜಘನ್ಯ ಅಂತರಾಳವು ೭೦೦೦ ಯೋಜನ ಮತ್ತು ಉತ್ಕೃಷ್ಟ ಅಂತರಾಳವು ಅಸಂಖ್ಯಾತ ಯೋಜನ ಪ್ರಮಾಣವಿದೆ

ಮೇಲೆ ಹೇಳಿದ ಪ್ರಕೀರ್ಣಕ ಬಿಲಗಳಲ್ಲಿ ಅಸಂಖ್ಯಾತ ಯೋಜನ ವಿಸ್ತಾರದ ಬಿಲಗಳು ಅಧಿಕವಾಗಿವೆ; ಸಂಖ್ಯಾತ ಯೋಜನ ಬಿಲಗಳು ಕಡಿಮೆ ಇದೆ. ಈ ಎಲ್ಲಾ ಬಿಲಗಳೂ ಸದಾಕಾಲವೂ ಕತ್ತಲಿನಿಂದ ತುಂಬಿಹೋಗಿದೆ.

ಅಸಂಖ್ಯಾತ ಯೋಜನ ಪ್ರಮಾಣದ ಬಿಲಗಳಲ್ಲಿ ಸಂಖ್ಯಾತ ನಾರಕೀ ಜೀವಗಳೂ, ಅಸಂಖ್ಯಾತ ಯೋಜನ ಪ್ರಮಾಣದ ಬಿಲಗಳಲ್ಲಿ ಅಸಂಖ್ಯಾತ ನಾರಕೀ ಜೀವಗಳೂ ಇವೆ. ಈ ಬಿಲಗಳು ಡೊಂಕು ಡೊಂಕಾಗಿವೆ.

# ಚಂದ್ರಪ್ರಭಾ ಟ್ರಸ್ಟ್
## ಜಿನವಾಣಿ ಕಾರ್ಯಾಲಯ
ನಂ. ೬೨. ಡಿ ಬನುಮಯ್ಯರಸ್ತೆ, ಮೈಸೂರು.

### ಮೇಲ್ಕಂಡ ಟಸ್ಟಿನ ಮಹಾಸಂರಕ್ಷಕರು

೧] ಸ್ವಸ್ತಿಶ್ರೀ ಅಭಿನವ ದೇವೇಂದ್ರ ಕೀರ್ತಿ ಸ್ವಾಮಿಯವರು, ಹೊಂಬುಜ
೨) ಧರ್ಮಯೋಗಿ ಮಾನ್ಯಶ್ರೀ ವೀರೇಂದ್ರಹೆಗ್ಗಡೆಯವರು ಧರ್ಮಸ್ಥಳ
೩] ಧರ್ಮಪರಾಯಣೆ ಶ್ರೀಮತಿ ರತ್ನಮ್ಮ ಆರ್, ಹೆಗ್ಗಡೆ
೪] ಮಾನ್ಯಶ್ರೀ ವಿಕೆ, ವರ್ಧಮಾನಗೌಡರು ಕಡೆಮನೆ
೫] ಮಾನ್ಯಶ್ರೀ ಜಿನಚಂದ್ರ ದಂಪತಿಗಳು, ನೀರಾವಾರಾ
೬] C A. ದೇವೇಂದ್ರಯ್ಯ, ಮೈಸೂರು.
೭] ನೇಮಿಚಂದ್ರರವರು, ಪುಡಿಯಾಡ
೮] ರಘುಚಂದ್ರಅಜ್ರಿಗಳವರು ಮೈಸೂರು

### ಮೇಲ್ಕಂಡ ಟ್ರಸ್ಟಿನ ಸಂರಕ್ಷಕರು

೧] ಜಿ ಹೆಚ್ ಆದಿರಾಜಯ್ಯನವರು ಬೆಂಗಳೂರು
೨] ಚೂಡಪ್ಪಶಾಸ್ತ್ರಿಗಳವರು
೩] ಸುಮತಿಶ್ರೇ ಎಂ ಡಿ ಅಮೇಲಕರ
೪) ಅಜಿತ್‌ಕುಮಾರ್ ಜೈ
೫] ಎಂ ಜಿ. ಕೃಷ್ಣಮೋಹನ್

### ಮೇಲ್ಕಂಡ ಟ್ರಸ್ಟಿನ ನೂತನ ಸದಸ್ಯರುಗಳು

೧) ಕಮಲಪ್ರಭ ಪಂಡಿತ
೨] ಸಿ.ಇ. ನಾಗರಾಜ್
೩) ಎಸ್ ಪಿ ಸುರೇದ್ರಕುಮಾರ್
೪ ಎಸ್ ಪಿ ದೇವಪಾಲ್
೫) ಪದ್ಮಸಾಮ್ರಾಜ್ಞರು
೬) ಎಂ ಜೆ ಪ್ರಕಾಶ್
೭) ಏಂ ಪಿ ಪ್ರಕಾಶ್‌ಕುಮಾರ್ ಜೈ
೮) ಯೆಂ ಪಿ ಯೆಲ್ ಕಾಂತ್
೯) ಜೀವಂಧರಕುಮಾರ್
೧0] ಎ. ಧರಣೇಂದ್ರಯ್ಯ
11] ವಸುಪಾಲ್ ಬಿ ಎಸ್
೧೨] ನಾಗೇಂದ್ರಯ್ಯ ಕುಣಿಗಲ್

ಜಿನವಾಣಿ REG. NO. K.R.N.N. 17

೧೩) ಎ ಸಿ ಎ ದೇವೇಂದ್ರಪ್ಪನವರು, ಮೈಸೂರು
೧೪) ಪಾರ್ಶ್ವನಾಥಯ್ಯನವರು, ಬೆಂಗಳೂರು
೧೫) ಬಿ ಜೆ ಸುರೇಂದ್ರಕುಮಾರ್,
೧೬) ಎಂ ಕೆ ಅನಂತಯ್ಯನವರು, ವೈನಾಡು
೧೭) ಶ್ರೀಮತಿ ಚಂದ್ರಮತಿ ಅಮ್ಮನವರು, ವೈನಾಡು
೧೮) ಪಿ ಡಿ ಚಂದ್ರಪ್ರಭ, ರಾಡಿಕೆರೆ
೧೯) ಎಸ್ ಎಸ್ ಡಿ ನಾಗರಾಜಯ್ಯನವರು, ಶ್ರವಳಬೆಳಗೊಳ

To Post Master
Head Post Office
Mysore

BOOK POST

**ಜಿನವಾಣಿ ಕಾರ್ಯಾಲಯ**

ನಂ.67 ಡಿ ಬನುಮಯ್ಯ ರಸ್ತೆ ಮೈಸೂರು ೫೭೦೦೦೧



The Jinavani, the monthly Kannada Magazinc is Edited and Published by Sri M.C. Padmanabhasharma & Printed by B.V. Alahiyamanavalan, Propritor, Sri Vijayalakshmi Press, 355, D. Subbiah Road, MYSORE- 560112.



ಜೈ[illegible] ಸ[illegible]ಚಾರ ಸಂಘದ ಜೈನ ಧಾರ್ಮಿಕ

ಮಾಸಿಕ ಮುಖಪತ್ರಿಕೆ

# ಜಿನ[illegible]



ಸಂಪಾದಕರು: ಎಂ. ಸಿ. ಪದ್ಮನಾಭಶರ್ಮ, ನ್ಯಾಯತೀರ್ಥ,

ವಿಶ್ರಾಂತ ಕನ್ನಡ-ಸಂಸ್ಕೃತ ಪರಿಶೋಧಕರು, ಪ್ರಾಚ್ಯವಿದ್ಯಾಸಂಶೋಧನಾ ಸಂಸ್ಥೆ, ಮೈಸೂರು.

10 FEBRUARY 1984

# ಅನಂತಕೃತಜ್ಞತಾಭಿನಂದನಗಳು

ಜಿನವಾಣೀರಜತೋತ್ಸವಸ್ಮಾರಕವಾದ

ಶ್ರೀ ಮಹಾವೀರಸ್ವಾಮಿಯ

೨೫೦೦ ನೇ ವೀರನಿರ್ವಾಣವಿಶೇಷಸಂಚಿಕೆಯಲ್ಲಿನ

ಜಿನವಾಣೀಸಂಪಾದಕನ

ಎಂ. ಸಿ. ಪದ್ಮನಾಭ ಶರ್ಮನಾದ ನನ್ನ

ವಿಶೇಷ ನಿವೇದನಪ್ರಾರ್ಥನಾನುಸಾರ

೧೯೭೫ನೇ ಫೆಬ್ರುವರಿ ಸಂಚಿಕೆಯ

ಸಂಪೂರ್ಣ ಪ್ರಕಟಣಾದಿಗಳಿಗೆ

ಸಹಕರಿಸಿದ ಸನ್ಮಾನ್ಯಶ್ರೀಯುತರಾದ

ಜಿ ಹೆಚ್ ಆದಿರಾಜಯ್ಯ ಐ ಎ. ಎಸ್. ಅವರಿಗೂ

ಸನ್ಮಾನ್ಯಶ್ರೀಯುತರಾದ

ಹರಪನಹಳ್ಳಿ ಚೂಡಪ್ಪಶಾಸ್ತ್ರಿಗಳವರಿಗೂ

ಅನಂತಪೂರ್ವಕಕೃತಜ್ಞತಾಯುಕ್ತವಾದ ಧನ್ಯವಾದಗಳನ್ನು ಅರ್ಪಿಸುವೆವು.

ಈ ಔದಾರ್ಯ ವಾತ್ಸಲ್ಯಗಳೇ ನಮ್ಮ ರಕ್ಷಾಕವಚ !!

ಇದೇ ಈ ಸಂಚಿಕೆಯ

ಮುದ್ರಣಪ್ರಕಟಣಾದಿಗಳಿಗೆ ಆಧಾರ!!!

ಇಂತು ಕೃತಜ್ಞ

ಮೈಸೂರು — ಎಂ. ಸಿ ಪದ್ಮನಾಭಶರ್ಮ

೧೫-೨-೭೫ — ಸಂಪಾದಕ, ಜಿನವಾಣಿ

---

## ಕ್ಷಮಾಪ್ರಾರ್ಥನೆ

ಯಾಂತ್ರಿಕತೊಂದರೆಗಳಿಂದಾಗಿ ಧಾರಾವಾಹಿಯಾಗಿ ಪ್ರಕಟವಾಗುತ್ತಲಿದ್ದ 'ಜ್ಞಾನಾರ್ಣವ' ಮತ್ತು "ಪರಮಾತ್ಮಪ್ರಕಾಶ" ಗ್ರಂಥಗಳು 2 ಸಂಚಿಕೆಗಳಿಂದ ಪ್ರಕಟವಾಗಿದಿದ್ದುದಕ್ಕೆ ಕ್ಷಮೆಯನ್ನು ಯಾಚಿಸುತ್ತೇವೆ. ಮುಂದಿನ ತಿಂಗಳುಗಳಲ್ಲಿ ಅವುಗಳನ್ನು ಹೆಚ್ಚಿನಪುಟಗಳಲ್ಲಿ ಒಗದಗಿಸುವೆವೆಂದು ತಿಳಿಸಲು ಹರ್ಷಿಸುವೆವು.

|| ಓಮ್ ||

|| ಓಮ್ ನಮಃಸ್ಸಿದ್ಧೇಭ್ಯಃ ||

जिनवाणी

# ಜಿನವಾಣಿ

# JINAVANI

ಜೈನಸಾಹಿತ್ಯ ಪ್ರಚಾರಸಂಘದ ಮುಖಪತ್ರಿಕೆ

ಜೈನಧಾರ್ಮಿಕ

ಕನ್ನಡಮಾಸಪತ್ರಿಕೆ

KANNADA MONTHLY MAGAZINE

ಸತ್ವೇಷು ಮೈತ್ರೀಂ ಗುಣಿಷು ಪ್ರಮೋದಂ ಕ್ಲಿಷ್ಟೇಷು ಜೀವೇಷು ಕೃಪಾಪರತ್ವಮ್ |
ಮಾಧ್ಯಸ್ಥಭಾವಂ ವಿಪರೀತವೃತ್ತೌ ಸದಾ ಮಮಾತ್ಮಾ ವಿದಧಾತು ದೇವ ! ||

—ಅಮಿತಗತಿ

ಎಲೈ ! ದೇವನೇ ! ಪ್ರಾಣಿಗಳಲ್ಲಿ ಸ್ನೇಹವನ್ನೂ, ಗುಣವಂತರಲ್ಲಿ ಸಂತೋಷವನ್ನೂ, ಕಾಯಕ್ಲೇಶ ಮನಃಕ್ಲೇಶಗಳಲ್ಲಿ ತೊಳಲಾಡುವ ಪ್ರಾಣಿಗಳಲ್ಲಿ ದಯೆಯನ್ನೂ, ಶಾಸ್ತ್ರಾಗಮಾಪ್ತವ್ಯತಿರೇಕಮಾರ್ಗಾಶ್ರಯಿಗಳಲ್ಲಿ ಮಾಧ್ಯಸ್ಥಭಾವನೆಯನ್ನೂ ನನಗೆ ಉಂಟುಮಾಡು.

ಅನುವಾದ— M·P·A· ತಿಲಕ್, M·A., ಮೈಸೂರು.

---

ಮಂಡಲ ೩೪-೩೫] ಮೈಸೂರು ೧೦ನೆಯ ಫೆಬ್ರವರಿ ೧೯೮೫ [ಕಿರಣ ೪
(ಗೊಮ್ಮಟ-ಚಾವುಂಡರಾಯ ಶಕ ೧೦೦೩)

---

## ಅಜಿತನಾಥ ತೀರ್ಥಂಕರ ಸ್ತುತಿಃ

ಯಃ ಪ್ರಾದುರಾಸೀತ್ ಪ್ರಭುಶಕ್ತಿ ಭೂಮ್ನಾ
ಭವ್ಯಾಶಯಾಲೀನಕಲಙ್ಕಶಾನ್ತ್ಯೈ |
ಮಹಾಮುನಿರ್ಮುಕ್ತಘನೋಪದೇಹೋ
ಯಥಾರವಿನ್ದಾಭ್ಯುದಯಾಯ ಭಾಸ್ವಾನ್ ||

... ಸಮನ್ತಭದ್ರಸ್ವಾಮಿಗಳು

ಅಜಿತತೀರ್ಥಂಕರ ಪರಮದೇವರು ಈ ಭವ್ಯರಲ್ಲಿನ ದುರ್ಗುಣ ಪರಿಹಾರಕ್ಕಾಗಿ ಪ್ರಭುಶಕ್ತಿಗೆ ಆವಾಸ ಸ್ಥಾನವಾದ ಸ್ವಾಮಿತ್ವದಲ್ಲಿ ತಮ್ಮನ್ನು ತಾವೇ ನಿಯೋಜಿಸಿಕೊಂಡು ಆವಿರ್ಭವಿಸಿದರು. ಕಾರಣ ಆ ಮಹಾನುಭಾವ ಸ್ವಾರ್ಥರಹಿತ; ಲೋಕಕಲ್ಯಾಣಕ್ಕಾಗಿ ಮಾಡುವ ಕಾಯಕ್ಲೇಶ ಮನಃಕ್ಲೇಶರೂಪವಾದ ತಪೋನಿರತನಾದ ಮಹಾಮುನಿ. ಆದ್ದರಿಂದ ಈ ಕರ್ಮಣ ದೇಹವನ್ನು ಪರಿತ್ಯಜಿಸಿ ಮುಕ್ತಿಪಥದಲ್ಲಿ ವಿರಾಜಮಾನನಾಗಿರುತ್ತಾನೆ. ಈ ತೀರ್ಥಂಕರ ಪರಮದೇವ ಮತ್ತೊಬ್ಬನ ಪಾಪವನ್ನು ಹೋಗಲಾಡಿಸುವುದಾಗಲಿ ಪುಣ್ಯವನ್ನು ಹೆಚ್ಚಿಸುವುದಾಗಲಿ ಮಾಡಲಾರ. ಆದರೆ ಅವನ ಆತ್ಮತೇಜಃಪುಂಜ ಜಗದ ಈ ಜೀವಿಗಳಿಗೆ ಮಾರ್ಗದರ್ಶನಮಾಡಿ ಅವರನ್ನು ಪಾಪದಿಂದ ದೂರವಾಗುವಂತೆಮಾಡಿ ಮುಕ್ತಿಪಥಕ್ಕೆ ಅರ್ಹರನ್ನಾಗಿಸುತ್ತದೆ ಅದು ಆವರವರ ಕರ್ಮಬಂಧಾನುಗತ ಪುಣ್ಯಪಾಪಾಯತ್ತ ಲೋಕದಲ್ಲಿ ಸಹಸ್ರ ಕಿರಣನಾದ ಆದಿತ್ಯತಾನಾಗಿ ಕತ್ತಲೆಯನ್ನು ಬಡಿದೋಡಿಸುವುದಿಲ್ಲ ಆದರೆ ಆ ಕತ್ತಲೆ ಅವನುದಯಿಸಿದಾಗ ತಾನೇ ಓಡುತ್ತದೆ ಅಂತೆಯೇ ಕಮಲ ಪುಷ್ಪ ಅವನುದಯಿಸುತ್ತಿದ್ದಂತೆಯೇ ವಿಕಾಸಹೊಂದುತ್ತದಲ್ಲವೇ ? ಹಾಗೆಯೇ ಈ ತೀರ್ಥಂಕರ ಪರಮಾತ್ಮನ ದಿವ್ಯತೇಜಃಪುಂಜ ಮಾನವರ ಕರ್ಮಾನುಗತ ಪುಣ್ಯ-ಪಾಪಾನುಬಂಧವನ್ನು ಕಳಚಿಕೊಳ್ಳಲು ಸ್ವಾಭಾವಿಕವಾದ ಸಾಧನವಾಗುತ್ತದೆಂದು ತಾತ್ಪರ್ಯ. ಈ ಅಜಿತನಾಥ ತೀರ್ಥಂಕರನಿಗೆ ನಮ್ಮ ಆತ್ಮೀಯ ಸಮರ್ಪಣ ರೂಪವಾದ ನಮನವಿರಲಿ.

ಅನುವಾದ : ಎಂ ಪಿ. ಅರವಿಂದತಿಲಕ್, ಎಂ. ಎಂ, ಮೈಸೂರು




## ಭಗವಾನ್ ವೃಷಭದೇವ

ಈ ಜಗತ್ತು ಅನಾದಿನಿಧನವಾದುದು. ಜೀವರಾಶಿಗಳು ಅನಂತಾನಂತ ಈ ಜೀವರಾಶಿಗಳ ಉತ್ಪತ್ತಿಯ ಸ್ಥಾನವು ೮೪ ಲಕ್ಷಗಳಾಗಿವೆ. ಮನುಷ್ಯ ಪರ್ಯಾಯಕ್ಕೆ ೧೪ ಉತ್ಪತ್ತಿಸ್ಥಾನಗಳನ್ನು ವಿವರಿಸಿದ್ದಾರೆ. ಒಂದೊಂದರಲ್ಲೂ ಅನಂತಾನಂತ

ಜೀವರಾಶಿಗಳುಂಟು ಕರ್ಮವಶದಿಂದ ತಾನು ಮಾಡಿದ ಪುಣ್ಯ ಮತ್ತು ಪಾಪಕ್ಕ-ನುಸಾರವಾಗಿ ಉಚ್ಚನೀಚಸ್ಥಾನಗಳಲ್ಲಿ ಜೀವಿಗಳು ಹುಟ್ಟುತ್ತಿರುತ್ತಾರೆ ಇದನ್ನು ಯಾರೂ ಮಾಡಿದ್ದಲ್ಲ ಅವರವರು ಪೂರ್ವ ಪೂರ್ವ ಜನ್ಮಗಳಲ್ಲಿ ನಿರಂತರವಾಗಿ ಸಂಗ್ರಹಿಸಿದ ಪುಣ್ಯಪಾಪ ಕರ್ಮಗಳ ಫಲವೇ ಎಂದು ತಿಳಿಯಬೇಕು.

ಜೀವನಿಗೆ ದ್ರವ್ಯ-ಕ್ಷೇತ್ರ-ಕಾಲ-ಭವ-ಭಾವಗಳ ಅಪೇಕ್ಷೆಯಿಂದ ಉತ್ತಮ ಕಾಲ ಸ್ಥಿತಿ ಒದಗಿದಹೊರತು ಸಮೀಚೀನಧರ್ಮವು ರುಳಿಸುವುದಿಲ್ಲ ಈ ಜಗತ್ತಿನಲ್ಲಿ ಅನೇಕ ಧರ್ಮ ಪ್ರಚಾರಕರು ತಮ್ಮದೇ ಆದ ರೀತಿಯಲ್ಲಿ ಧರ್ಮ ಮತ್ತು ಧರ್ಮದಮಾರ್ಗ ವನ್ನು ಪ್ರಚಾರ ಮಾಡಿರುತ್ತಾರೆ.

## ವೃಷಭದೇವ

ಈ ಮೇಲ್ಕಂಡ- ವಿವರಗಳಂತೆ ಜೀವರಾಶಿಗಳ ಮಧ್ಯದಲ್ಲಿ ವೃಷಭದೇವನು ಒಬ್ಬ ನಾಗುತ್ತಾನೆ.. ಆತನ ಉನ್ನತಿಯಮಾರ್ಗ ಈ ತೃತೀಯಕಾಲದ ಭೋಗಭೂಮಿ ಮುಗಿಯುತ್ತಿದ್ದಂತೆ ಅದಕ್ಕೂ ಮೊದಲೇ ವೃಷಭದೇವನು ೧೪ ನೇ ಮಗುವಾದ ನಾಭಿರಾಜನೆಂಬುವನಿಗೆ ಮರುದೇವಿಯ ಗರ್ಭದಲ್ಲಿ ಜನಿಸಿ ವಸುಧಾರಾದಿ- ಪಂಚ ಕಲ್ಯಾಣ ವೈಭವವನ್ನುಹೊಂದಿ ಕೇವಲಜ್ಞಾನವೆಂಬ ಆತ್ಮೀಯ ಸ್ವಾಭಾವವನ್ನು ಪಡೆದು ಬಹುಕಾಲ ಸಮವಸರಣ ಸಭೆಯಲ್ಲಿ ಧರ್ಮಪ್ರಚಾರ ಮಾಡಿದನು ಸಾಮಾ ನ್ಯವಾಗಿ ೪ ನೇ ಕಾಲದಲ್ಲಿಯೇ ತೀರ್ಥಂಕರರು ಜನ್ಮ ತಾಳುವುದು ಆದರೆ ತೃತೀಯ ಕಾಲದೊಳಗೆಯೇ ವೃಷಭದೇವನು ಕರ್ಮಕ್ಷಯಮಾಡಿ ಮುಕ್ತಿಯನ್ನು ಪಡೆದನು

ಈ ವೃಷಭದೇವನನ್ನು ಇತರರು ತಮ್ಮ ಸಂಥಗಳಲ್ಲಿ ಆದಿಬ್ರಹ್ಮನೆಂದು ಆಸಿ ರುಸಿಕೃಷಿವಾಣಿಜ್ಯ ಮೊದಲಾದ ಜೀವನ ಮಾರ್ಗವನ್ನು ತೋರಿಸಿಕೊಟ್ಟನಾದ್ದ ರಿಂದ ಆತನನ್ನು ಸೃಷ್ಟಿಕರ್ತನೆಂದು ಹೇಳಿಕೊಳ್ಳುತ್ತಾರೆ

ಈ ಜಗತ್ತನ್ನು ಯಾರೂ ಸೃಷ್ಟಿಸಲು ಸಾಧ್ಯವಾಗದು

ಪ್ರಕೃತಿನಿಯಮದಂತೆ ಅದು ವಿಕಸಿಸುತ್ತದೆ ಅದರಲ್ಲಿನ ಜೀವಿಗಳು ತಮ್ಮ ತಮ್ಮ ಕರ್ಮಾನುಗುಣವಾಗಿ ತತ್ಫಲವಾಗಿ ಏಕೇಂದ್ರಿಯಾದಿ ಪ್ರಾಣಿಗಳಾಗಿ ನಾನಾ ಭವಗಳಲ್ಲಿ ಜನಿಸಿ ಕೊನೆಗೆ ಕರ್ಮಕ್ಷಯವಾದಾಗ ಮುಕ್ತಿಭಾಗಿಗಳಾಗುತ್ತಾರೆ.

## ಜೀವರಾಶಿಗಳು

ಜೀವರಾಶಿಗಳ ಉತ್ಪತ್ತಿಯು ಗರ್ಭಜನ್ಮ, ಉಪಪಾದ ಜನ್ಮ ಸಂಮೂರ್ಛನ ಜನ್ಮ ಎಂದು ಮೂರು ಬಗೆಯಾದುದು. ಇದನ್ನು ಬಿಟ್ಟು ಯಾವಕಾರಣದಿಂ ದಲೂ ಜೀವರಾಶಿಗಳು ಉತ್ಪತ್ತಿಯಾಗದು.

೧] ಗರ್ಭಜನ್ಮ- ಮನುಷ್ಯ ತಿರ್ಯಂಚಲಜೀವಿಗಳ ಪೊರೆಯಿಂದ' ಮುಚ್ಚಿದ ಗರ್ಭ ಜನ್ಮರಾಗುತ್ತಿರುವುದನ್ನು ನಾವುಗಳು ನೋಡುತ್ತಿದ್ದೇವೆ.

೨] ಉಪಪಾದಜನ್ಮ- ದೇವಪಡೆ ಮತ್ತು ನಾರಕಿ ಜೀವಗಳು ೧೬ ವರುಷದ ಯುವಕರ ಹಾಗಯೇ ಜನ್ಮತಾಳುತ್ತಿರುತ್ತಾರೆ.

೩] ಸಂಮೂರ್ಛನಜನ್ಮ- ಸಣ್ಣ ಜೀವಗಳು ಅನೇಕ ಪದಾರ್ಥಗಳಲ್ಲಿ ಒಂದೇಕ್ಷಣ ದಲ್ಲಿ ಐದ್ಮುಬಾರಿ ಹುಟ್ಟಿಸಾಯುತ್ತಿರುತ್ತದೆ. ಇದೇ ಸಂಮೂರ್ಛದಜೀವರಾಶಿ ಈ ಬಗೆಯಲ್ಲಿ ಮೂರುರೀತಿಯ ಜನ್ಮ ಯಾವರೀತಿಯಿಂದಲಾದರೂ ಜೀವ ರಾಶಿಗೆ ಆಗದು ಇದು ಸಿದ್ಧಾಂತವಾಗಿದೆ. ವೃಷಭದೇವನೇ ಮೊದಲಾದ ತೀರ್ಥಂ ಕರರು ಇದೇ ಬಗೆಯಲ್ಲಿ ಗರ್ಭಾದ್ಯವಸ್ಥೆಯಲ್ಲಿ ತೊಳಲಾಡಿ ಅಂತದಲ್ಲಿ ಕರ್ಮ ಬಂಧವನ್ನು ಕಿತ್ತೆಸೆದು ಮುಕ್ತಿಯನ್ನು ಪಡೆದರು.

ಆದ್ದರಿಂದ ಪ್ರತಿ ಜೀವರಾಶಿಯೂ ತನ್ನ ಶಾಶ್ವತವಾದ ಮಂಗಳಪ್ರಾಪ್ತಿಗಾಗಿ ಶ್ರಮಿಸಿ ಪುಣ್ಯಮಾರ್ಗದಲ್ಲಿ ನಡೆದು ಶಾಶ್ವತ ಸುಖವನ್ನು ಪಡೆಯಲು ಪ್ರಯತ್ನಿಸ ಬೇಕು. ಇದೇ ಜಿನದೇವನ ಆದೇಶ, ಇದೇ ಉಪದೇಶ, ಇದೇ ಜೈನತತ್ವಸಾರ ಇದೇ ಅನುಶಾಸನ ಹೀಗೆಯೇ ಆಚರಿಸಬೇಕು.'' ಇತ್ತ ಜೈನರು ತಮ್ಮ ಮನ ವನ್ನು ಕೇಂದ್ರೀಕರಿಸಿಯಾರೇ ?

ಸಂಪಾದಕ,
ಜಿನವಾಣಿ.

## ಜಿನದೇವಾ

(ಹೊಸಬಾಳು ನಿನ್ನಿಂದ............... ಎಂಬಂತೆ)

ರಚನೆ : *S. A.* ಕಮಲಾ

ಜಿನದೇವಾ ನಿಮ್ಮಿಂದಾ
ನಾ ಕಂಡೇ ಆನಂದಾ
ನಿಮ್ಮಾ ನಾ ನೋಡಲು
ಓ....ನಿಮ್ಮಾ ನಾ ಸ್ಮರಿಸಲು
ತನುವೂ ಶುಭವಾಯ್ತು
ಮನವೂ ಹೊಸದಾಯ್ತು ॥೧॥
॥ ಜಿನದೇವಾ ॥

ಪುಣ್ಯ ಬಂದಾಗ ಪಾಪ ಬಿಟ್ಟಾಗ
ಆತ್ಮ ಶುದ್ಧವಾಯಿತು ಜಿನದೇವಾ
ನೀವೇ ನಡೆದಂತ ಮಾರ್ಗ ಕಂಡಾಗ
ಧರ್ಮ ತಿಳಿದೆನು ಮರ್ಮ ಅರಿತೆನು
|| ಜಿನದೇವಾ ||

ಆತ್ಮ ತಿಳಿದಾಗ ಸತ್ಯ ಅರಿತಾಗ
ನಾ ತಿಳಿದುಕೊಂಡೆನು ಸುಖವನ್ನ
ನೀವೇ ನನದೇವ ಎಂದು ಕೈ ಮುಗಿದು
ಭವ್ಯಾತ್ಮನಾದೆನು ಸುಖವ ತಿಳಿದೆನು.
|| ಜಿನದೇವಾ ||

## ಗೊಮ್ಮಟೇಶ್ವರನ ಪದ

ಬಿಟ್ಟು ಹೋಗುವರೆ ಮನಸಿಲ್ಲ ಜಿನನ
ಎಷ್ಟು ನೋಡಲು ಕಣ್ಣುಮನ ದಣಿವುದಿಲ್ಲ ವಲ್ಲ
ಧರೆಯೊಳತಿಶಯ ಹೇಮಶೈಲದ ದಕ್ಷಿಣದೆಸೆಯ
ಭರತಭೂಮಿಯೊಳಾರುಖಂಡದೊಳು ಮಿಗಿಲೆಂ
ದಿರುವ ಆರ್ಯಖಂಡದೊಳಗೆ ಐವತ್ತಾರು
ಪಿರಿದಾಂತು ರಾಜ್ಯ ರಾಜಿಸಿತು
ಇರುವ ಕಾಲದೊಳು ಕಲಿಯುಗಬರಲು ಜಿನಧರ್ಮ
ದಿರವು ಅಳಿದಿತು ಜಿನಧರ್ಮದತಿಶಯಗಳನು
ಅರಿವರೆಯಿಲ್ಲೆಂದು ಅತಿಶಯದಿ ನೀ ಬಂದು
ವರಕರ್ಣಾಟಮಧ್ಯದೊಳು ನೆಲೆಸಿ
ಇರುವ ಭುಜಬಲಿಜಿನರ ಪದಕಂಜಗಳ ಕಂಡು || ೧ ||

ಅಣ್ಣನೊಳು ವೈರಾಗ್ಯವನು ತಾಳಿ ಹೊಸತಾದ
ಸುಣ್ಣದೊಳು ನೀರುಬಿದ್ದಂತೆ ಮನದೊಳ ದ್ವೇಷ
ಹಣ್ಣಾಗಿಬೆಳೆದ ಲಂಕಾರಾದಿಗಳ ತೊರೆದು.
ಹೆಣ್ಣೊನ್ನಮಣ್ಣು ಮೂರಂಗಳ

ಕಣ್ಣೆತ್ತಿನೋಡನೆ ಕರಗಳಳಿಯು ಬಿಟ್ಟು
ಬಣ್ಣಗುಂದಪೆ ತಪವ ತಾಳಿಯೋಗದಿನಿಂದು
ಹುಣ್ಣಮೆಯ ಶಶಿಯಂತೆ ಕಳೆಯೇರಿ ಸುರರಾಗ್ರ
ಗಣ್ಯನಾಗಿಹನು ದಕ್ಷದಲಿ ಮುಕ್ತಿ
ವೆಣ್ಣಗೊಲಿದತಿಶಯದ ಪುಣ್ಯಪುರುಷನ ಕಂಡು ‖ ೨ ‖

ಗಲ್ಲ ತೋಳ್ತೊಡೆ ಕದಪು ಮುಗುಳ್ನಗೆಯ ಭಾವದಿರ
ವೆಲ್ಲವನು ಕಂಡು ಮುಕ್ತ್ಯಂಗನೆಯು ಮೋಹಿಸಿಯೇ
ನಿಲ್ಲದೆ ಬಂದು ತಕ್ಕೈಸಿಮುದ್ದಿಸಿವೈದಲ್ಲದೆ ಬಿಡಳೆಯುತಳದ
ವಲ್ಲವನ ಪೋಗ ಬಿಡನೆಂದು ವಸುಧಾಂಗನೆಯು
ಮೆಲ್ಲಡಿಯ ಮಧ್ಯದಲಿ ಪುಟ್ಟಿಸಿಯೆ ಲತೆಗಳನು
ಉಲ್ಲಾಸದಿಂ ಬೆಳಸಿ ತೋಳ್ತೊಡೆಗಳಂ ಸುತ್ತಿ
ನಿಲ್ಲದ ಭಾವದಂತಿರವಾ ಸ್ಮರನ
ಪುಲ್ಲಶರಗಳಗೆಲಿದ ಚಲ್ವರಾಜನ ಕಂಡು ‖ ೩ ‖

ಸೃಷ್ಟಿಯೊಳಗಿರುವ ದೇವರ ನೋಡಲಾಕ್ಷಣವೆ
ತುಷ್ಟನಾಗುವ ಮನಸು ಭುಜಬಲಿಯ ಕಾಣುತಲೆ
ಇಷ್ಟದೃಷ್ಟಿಯುಯುಳಿಬುಬಾರದೇ ನೋಡಲಾ
ಅಷ್ಟದಶದೋಷರಹಿತನನು
ಎಷ್ಟೆಷ್ಟು ನೋಡಲು ಶ್ರೀದಿವ್ಯದೇಹದೊಳ
ಗಷ್ಟಷ್ಟು ಅತಿಶಯವು ನೋಡನೋಡಲು ಬೆಳೆಯೆ
ಹುಟ್ಟಿದಂದೀದ ದೋಡದ ಜನಕೆ ಇಹಪರವ್ರ
ಕಟ್ಟಲರಿಯಿದು ಕರ್ಮಬಿಡದು ಬೆಳ್ಗೊಳದ
ಪಟ್ಟರಾಜನಕಂಡು ಬಿಟ್ಟು ಬರಬಹುದೆ ‖ ೪ ‖

ಕಲಿಯುಗದೊಳತಿಶಯುತ ದೇವ ತಾನಲ್ಲದೆ
ನೆಲದೊಳಿಲ್ಲೆಂದು ಕೀರ್ತಿಯನಾಂತು ಲೋಕದಳ
ಸಲಿಸಿ ಚಾವುಂಡರಾಯುನ ಮನದಭೀಷ್ಟವನು
ಇಳೆವೆಣ್ಣನಾ ಮುದ್ದುಮೊಗದತಿಲಕವೊದೆನಿಸುತಿಹ
ಬೆಳ್ಗೊಳಕದ್ರಿಯೊಳಿಪ್ಪ ಜಲಜದಲ ಮಧ್ಯದಲಿನಿಂದ ಭುಜ
ಬಲಿಜಿನಸ್ಯ

ಒಲಿದು ಶ್ರೀ ಚಾರುಕೀರ್ತ್ಯಾರ್ಯರಸು ಹೊರೆಯುತ್ತ
ಸಲೆ ಭವ್ಯರಾಜವರಳಾಯ್ತು ಇಪ್ಪ
ಚೆಲುವರಾಜನ ಕಂಡು ಮೋಲಗದು ಮನಸು || ೫ ||



# ಜೈನ ವಿವಿಧ ವಾರ್ತೆಗಳು
## ಮತ್ತು
# ಪ್ರಕಟನ ವಿಮರ್ಶಾದಿಗಳು



ಕನ್ನಡ ಸಾರಸ್ವತ ಲೋಕದ ಅಪೂರ್ವ ಕೃತಿರತ್ನ ಒಂದರ ಪ್ರಕಾಶನ

**ಜೈನವಾಙ್ಮಯ ಕ್ಷೇತ್ರದಲ್ಲಿ ಧ್ರುವತಾರೆಯೊಂದರ ಉದಯ**

ಸರಳ ಸುಂದರ ಶೈಲಿಯಲ್ಲಿ ರೂಪಗೊಂಡ
ಹಿರಿಯ ಕನ್ನಡ ಲೇಖಕ ಶ್ರೀ ಜಿ. ಬ್ರಹ್ಮಪ್ಪನವರ ಮೇರುಕೃತಿ

**ಶ್ರೀಮದಾಚಾರ್ಯ ಜಿನಸೇನ, ಗುಣಭದ್ರ ಪ್ರಣೀತ**

# ಮಹಾಪುರಾಣ

[ ತಿಳಿಗನ್ನಡದ ಕಥಾರೂಪ ]

ಅಂತರಾಷ್ಟ್ರೀಯ ಖ್ಯಾತಿಯ ಧರ್ಮಪ್ರವರ್ತಕರಾಗಿರುವ
ಪರಮ ಪೂಜ್ಯ

**ಸ್ವಸ್ತಿ ಶ್ರೀ ಶ್ರೀ ಶ್ರೀಮದಭಿನವ ದೇವೇಂದ್ರಕೀರ್ತಿ**
**ಭಟ್ಟಾರಕ ಮಹಾಸ್ವಾಮಿಗಳವರ**

ಪಾಂಡಿತ್ಯಪೂರ್ಣ ಮುನ್ನುಡಿಯೊಂದಿಗೆ



## ಸಂತಾಪ ಸೂಚಕ ಸಭೆ

ಮೇಲ್ಕಂಡ ಸಮಾಜದ ಸದಸ್ಯೆಯರು ತಾ|| ೧೭-೧ ೮೫ ನೇ ಗುರುವಾರ ದಂದು ಕೋಟೆ ಶಾಂತಿನಾಥ ಬಸದಿಯಲ್ಲಿ ಸಭೆ ಸೇರಿ ಜೈನ ಸಮಾಜದ ಗಣ್ಯ ವ್ಯಕ್ತಿಗಳಾದ ಶ್ರೀ ಎಸ್.ಪಿ. ಶಾಂತರಾಜ್‌ರವರು ತಾ|| ೧೨-೧-೮೫ ರಂದು ನಿಧನ ರಾದುದಕ್ಕೆ ಅತೀವ ಶೋಕ ವ್ಯಕ್ತಪಡಿಸಿ ಸಂತಾಪ ಸೂಚಕ ಸಭೆಯನ್ನು ನಡೆಸಿ ನಿಧನರಾದ ಅವರ ಆತ್ಮಕ್ಕೆ ಶಾಂತಿಯೂ ಅವರ ಬಂಧುವರ್ಗಕ್ಕೆ ಈ ಶೋಕವನ್ನು ಭರಿಸುವ ಶಕ್ತಿಯೂ ಜಿನೇಶ್ವರನ ಕರುಣೆಯಿಂದಾಗಲೆಂದು ಪ್ರಾರ್ಥಿಸಿ ಸ್ವರ್ಗಸ್ಥರಲ್ಲಿ ತಮಗಿರುವ ಆತ್ಮೀಯತೆಯನ್ನು ಪ್ರಕಟಿಸಿದರು

ಸುದ್ದಿ- ಜಿ. ಜಯಲಕ್ಷ್ಮಮ್ಮ
ಕಾರ್ಯದರ್ಶಿ, ಪದ್ಮಶ್ರೀ ಮಹಿಳಾ ಸಮಾಜ

## ತಿದ್ದುಪಡಿ

೧೯೮೫ ನೇ ಜನವರಿ ೧೦ ನೇ ತಾರೀಖಿನ ೧೬ ನೇ ಪುಟದ ೧೪ ನೇ ಪಂಕ್ತಿ ಯಲ್ಲಿ ಇರುವ ಶಾಂತಿರಾಜಯ್ಯ ಎಂಬುದನ್ನು ಎನ್.ಎಸ್. ಪದ್ಮರಾಜಯ್ಯ ಎಂದು ಓದಿಕೊಳ್ಳಬೇಕು ಮತ್ತು ಅದೇ ಪಂಕ್ತಿಯಲ್ಲಿ ೧೨-೧-೮೫ ಎಂದು ಓದಿಕೊಳ್ಳಬೇಕು

ಸಂಪಾದಕ, ಜಿನವಾಣಿ

## ಧನ್ಯವಾದಗಳು

ಮೈಸೂರಿನ ಶ್ರೀ ಲೀಲಾವತೀ ವಸಂತಕುಮಾರ್‌ರವರು ೧೭.೧.೮೫ ರಿಂದ ೩೧.೧.೮೫ ರವರೆಗೆ ಸಮ್ಮೇದಶಿಖರಜೀ ಯಾತ್ರೆಯನ್ನು ನಿರ್ವಿಘ್ನವಾಗಿ ನೆರವೇರಿಸಿದ ನಿಮಿತ್ತವಾಗಿ ಜಿನವಾಣಿ ಶ್ರೇಯಸ್ಸನ್ನು ಕೋರಿ ೧೦ ರೂ ಕಳುಹಿಸಿರುತ್ತಾರೆ ದಾನಿ ಬಂಧುಗಳಿಗೆ ಧನ್ಯವಾದಗಳು.

ಸಂ. ಜಿನವಾಣಿ

## ಗೊಮ್ಮಟ ಧ್ಯಾನಮ್

ರಚಯಿತ್ರಿಗಳು: ಎಸ್.ಬಿ. ಚಂದ್ರಕಾಂತ್, ಸಾಲಿಗ್ರಾಮ

ಧ್ಯಾನಮಾಡಿರಿ ಗೊಮ್ಮಟೇಶ್ವರನ
ಧ್ಯಾನಮಾಡಿರಿ ಗೊಮ್ಮಟೇಶ್ವರನ

ಭಕ್ತರನು ಕಾಪಾಡುವ ಗೊಮ್ಮಟನ
ಹರಸಿಪೊರೆವ ಗೊಮ್ಮಟದೇವನ।
ಭಕ್ತಿಯಿಂದಲಿ ಸೇವೆಮಾಡಿ
ಜಪದಲಿ ಸ್ಮರಣೆಮಾಡಿ

ನಾಮಾಮೃತವನು ಕೊಂಡಾಡಿ
ಧ್ಯಾನಮಾಡಿದ ಭಕ್ತರಿಗೆ
ಮುಕ್ತಿನೀಡುವ ಎಮಗೆ
ಗೊಮ್ಮಟನ ಧ್ಯಾನಮಾಡಿರಿ।

ನಿನ್ನಯ ಕರುಣೆಯಿಂದಲೆ
ನಮ್ಮ ಬಾಳು ಬೆಳಕಾಯ್ತು
ನಿನ್ನಯ ದಯೆಯಿಂದ
ಜೀವನ ಪಾವನವಾಯಿತು.

'ವಿವೇಕಾಭ್ಯುದಯ' ಮಾಸಿಕದ ಮಾರ್ಚಿ-ಏಪ್ರಿಲ್ ೧೯೮೫
ಸಂಯುಕ್ತಾಂಕದ

## 'ನ ಭೂತೋ ನ ಭವಿಷ್ಯತಿ' ಆಯೋಜನೆ

ಅಹಿಂಸಾಮೂರ್ತಿ, ಮಹಾವೀರವಾಣಿಯ ಸಮರ್ಥ ಉದ್ಘೋಷಕ, ಮಹಾ ಮೇಧಾವಿ, ಜ್ಞಾನಚಕ್ಷು, ಭಾರತೀಯ ಸಂಸ್ಕೃತಿಯ ಜೀವಂತ ಪ್ರತೀಕ, ವಿಶ್ವ ಧರ್ಮದ ಪ್ರಭಾವಿ ಪ್ರವರ್ತಕ, ಪರಮವಾಗ್ಮಿ, ಸಂತಶಿರೋಮಣಿ, ಸ್ವರ್ಣಪುರುಷ ವಿಂಶತಿ ಶತಾಬ್ದಿಯ ಮಹಾನ್ ಜಿನಶಾಸನ ಪ್ರಭಾವ

ಸಿದ್ಧಾಂತಚಕ್ರವರ್ತಿ

## ಪರಮಪೂಜ್ಯ ಏಲಾಚಾರ್ಯ ವಿದ್ಯಾನಂದ ಮುನಿಮಹಾರಾಜರ

ಲೋಕ ಮಂಗಲಕಾರಿ ಜೀವನದ ಷಷ್ಠ್ಯಬ್ದಿಯ ಶುಭ ಸಂದರ್ಭದಲ್ಲಿ:-
ವಿವೇಕಾಭ್ಯುದಯ-ವಿದ್ಯಾನಂದ-ವಿಶೇಷಾಂಕ(ಮಾರ್ಚಿ ಏಪ್ರಿಲ್'೧೯೮೫ರಸಂಯುಕ್ತಾಂಕ ಪ.ಪೂ. ವಿದ್ಯಾನಂದ-ಷಷ್ಠ್ಯಬ್ದಿ-ವಿನಯಾಂಜಲಿ-ವಿಶೇಷಾಂಕವು: ಸರ್ವಪ್ರಥಮ ತನ್ನ ವಿಶಿಷ್ಟ ರೀತಿ ಶೈಲಿಯಲ್ಲಿ ಪ್ರಕಾಶಿತವಾಗಲಿದೆ.

ಈ ವಿಶೇಷಾಂಕವು ಸುಮಾರು ೧೦೦-೧೫೦ ಪೃಷ್ಠಗಳೊಂದಿಗೆ ಸುಸಜ್ಜಿತವಾಗಿ ಹೊರಬರಲಿದೆ.

**ವಿದ್ಯಾನಂದ ವಿಶೇಷಾಂಕದಲ್ಲಿ :**

ವಿದ್ಯಾನಂದ ಖಂಡ : ಪ.ಪೂ. ಮುನಿಮಹಾರಾಜರ ಮಹಾ ವ್ಯಕ್ತಿತ್ವ ಮತ್ತು ಕೃತಿತ್ವಕ್ಕೆ ಸಂಬಂಧಪಟ್ಟ ಅದ್ವಿತೀಯ, ಈವರೆಗೆ ಅಪ್ರಕಾಶಿತ ಲೇಖನ, ಪ್ರವಚನ ಸೂಕ್ತಿ-ನವನೀತ ಪ್ರಾಮಾಣಿಕ ಜೀವನ-ಚರಿತ್ರೆಗಳಿವೆ.

ಶ್ರದ್ಧಾಂಜಲಿ ಖಂಡ : ವಿಶಿಷ್ಟ ವ್ಯಕ್ತಿಗಳ ಶ್ರದ್ಧಾಂಜಲಿ ಮತ್ತು ವಿನಯಾಂಜಲಿ ಅರ್ಪಣೆ

ಜೈನಧರ್ಮ ಖಂಡ : ಜೈನ ದರ್ಶನ, ಸಂಸ್ಕೃತಿ, ಸಾಹಿತ್ಯದ ಕುರಿತು ವಿಶಿಷ್ಟ ಲೇಖನಗಳು

ಓದುಗರಿಗೆ, ವಾಚಕರಿಗೆ, ಸದ್ಧರ್ಮಬಂಧುಗಳಿಗೆ ಇದೊಂದು "ವಿವೇಕಾಭ್ಯುದಯ"ದ ವಿಶಿಷ್ಟ ಮತ್ತು ಅಪೂರ್ವ ಕೊಡುಗೆಯಾಗಿದೆ. ಈ ಸಂಯುಕ್ತಾಂಕವನ್ನು 'ಜೈನಧರ್ಮದ ಸಂದರ್ಭಕೋಶ'ವೆಂದರೂ ತಪ್ಪಾಗಲಾರದು. ವಿವೇಕಾಭ್ಯುದಯ ಗ್ರಾಹಕರೆಲ್ಲರಿಗೂ ಈ ಸಂಯುಕ್ತಾಂಕವನ್ನು ನಿಃಶುಲ್ಕ ನೀಡಲಾಗುವುದು. ಗ್ರಾಹಕರಲ್ಲದವರು ತ್ವರಿತವಾಗಿ ಕೂಡಲೇ ಗ್ರಾಹಕರಾಗಿರಿ ವಿಶೇಷಾಂಕದ ಮೂಲ್ಯ ೬-೦೦ ರೂಪಾಯಿಗಳು ಮಾತ್ರ.

ಪ್ರತಿಯೊಬ್ಬ ಜಿನಧರ್ಮಿಯೂ ಸಂಗ್ರಹಿಸಲೇಬೇಕಾದ ವಿಶೇಷಾಂಕವಿದು. ತಮ್ಮ ಪ್ರತಿಯನ್ನು ಮುಂಚಿತವಾಗಿ ಕಾದಿರಿಸಿ. ತಮ್ಮ ಸಂಸ್ಕರಣೆ, ಲೇಖನ, ಕವಿತೆ ಮೊದಲಾದುವುಗಳನ್ನು ಕಳಿಸಲಿಚ್ಛಿಸುವವರು ವಿದ್ಯಾನಂದ ವಿಶೇಷಾಂಕಕ್ಕೆ ಅವಶ್ಯ ಕಳಿಸಿರಿ

ನಿಯಮಿತ ಗ್ರಾಹಕರಿಗೆ ನಿಃಶುಲ್ಕ, ಮಾರ್ಚ್ ೩೧ ರ ವರೆಗೆ ಗ್ರಾಹಕರಾಗುವವರಿಗೂ ನಿಃಶುಲ್ಕ. ಅತಿರಿಕ್ತ ಪ್ರತಿ ಕೇವಲ ೬-೦೦ ರೂಪಾಯಿ ಮಾತ್ರ

ವ್ಯವಸ್ಥಾಪಕರು : ವಿವೇಕಾಭ್ಯುದಯ ಕಾರ್ಯಾಲಯ
ಶ್ರೀ ಜೈನ ಮಠ, ಮೂಡಬಿದ್ರಿ- 574227
ದ.ಕ ಜಿಲ್ಲೆ, ಕರ್ನಾಟಕ

## ಕೆಲಸೂರಿನಲ್ಲಿ ವೈಭವಪೂರ್ಣ ಪೂಜಾಮಹೋತ್ಸವ

ದಿನಾಂಕ ೯-೨-೮೪ ರಂದು ಮೈಸೂರು ಜಿಲ್ಲೆ, ಗುಂಡ್ಲುಪೇಟೆ ತಾಲೋಕು ಕೆಲಸೂರು ಗ್ರಾಮದ ಶ್ರೀ ಚಂದ್ರಪ್ರಭ ತೀರ್ಥಂಕರರ ಚೈತ್ಯಾಲಯದಲ್ಲಿ ೧೦೮ ಕಳಶದ ವೈಭವಪೂರ್ಣ ಮಹಾಭಿಷೇಕ ಪೂಜೆಯನ್ನು ಅತ್ಯಂತ ಉತ್ಸಾಹದಿಂದ ಆಚರಿಸಲಾಯಿತು. ಮೈಸೂರುಜಿಲ್ಲಾ ದಿಗಂಬರ ಜೈನತೀರ್ಥಕ್ಷೇತ್ರ ಸಮಿತಿಯವರು ಈ ಚೈತ್ಯಾಲಯದ ಜೀರ್ಣೋದ್ಧಾರದ ಅಂಗವಾಗಿ ಪೂಜೆಯ ವ್ಯವಸ್ಥೆಯನ್ನು ಮಾಡಿದ್ದರು. ಸುಮಾರು ೫೦ ವರ್ಷಗಳ ನಂತರ ಏರ್ಪಾಡಾಗಿದ್ದ ಪೂಜಾ ಸಮಾರಂಭದಲ್ಲಿ ಒಂದು ಸಹಸ್ರಕ್ಕೂ ಹೆಚ್ಚು ಜನರು ಭಾಗವಹಿಸಿದ್ದರು ಸುಸಜ್ಜಿತವಾಗಿ ನಿರ್ಮಿಸಲಾಗಿದ್ದ ವಿಶಾಲ ಸಭಾ ಮಂಟಪದಲ್ಲಿ ಕಿಕ್ಕಿರಿದು ನೆರೆ

ದಿದ್ದ ಜನಸ್ತೋಮವನ್ನು ಉದ್ದೇಶಿಸಿ ಶ್ರವಣಬೆಳಗೊಳದ ಶ್ರೀ ಮಠದ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯ ಮಹಾಸ್ವಾಮಿಯವರು ಆಶೀರ್ವಚನ ನೀಡಿ ಮೈಸೂರುಜಿಲ್ಲಾ ಸಮಿತಿಯವರು ಕೈಗೊಂಡಿರುವ ಜೀರ್ಣೋದ್ಧಾರ ಕಾರ್ಯವು ಯಶಸ್ವಿಯಾಗಿ ಪೂರ್ಣಗೊಳ್ಳುವಂತೆ ಹಾರೈಸಿದರು. ಹೊಸ ಮಂದಿರಗಳ ನಿರ್ಮಾಣ ಕಾರ್ಯಕ್ಕಿಂತ ಶಿಥಿಲಗೊಂಡಿರುವ ಜಿನಮಂದಿರಗಳ ಜೀರ್ಣೋದ್ಧಾರದ ಕಾರ್ಯದ ಅಗತ್ಯವನ್ನು ವಿಶದಪಡಿಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಕರ್ನಾಟಕ ದಿಗಂಬರ ಜೈನತೀರ್ಥಕ್ಷೇತ್ರ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ ಅ ನ. ಚಂದ್ರ ಕೀರ್ತಿಯವರು ವಹಿಸಿದ್ದರು. ಮೈನಾಡಿನ ಧರ್ಮಾತ್ಮರಾದ ಶ್ರೀ ಎಂ ಪಿ. ಧರ್ಮ ಪಾಲರವರು ಮುಖ್ಯ ಅತಿಥಿಗಳಾಗಿ ದಯಮಾಡಿಸಿದ್ದರು. ಮೈಸೂರು ವಿಶ್ವವಿದ್ಯಾ ಲಯದ ಶ್ರೀ ಶುಭಚಂದ್ರರವರು ಕೆಲಸೂರು ಕ್ಷೇತ್ರದ ಮಹಿಮೆಯನ್ನು ಹೃದಯಂ ಗಮವಾಗಿ ವಿವರಿಸಿದರು. ಶ್ರೀ ಜಿನಸೇನಾಚಾರ್ಯರ ಆದಿ ಪುರಾಣವನ್ನು ಇಂಗ್ಲೀಷ್ ಭಾಷೆಗೆ ಅನುವಾದಿಸುತ್ತಿರುವ ಅಮೇರಿಕಾ ಸಂಯುಕ್ತಸಂಸ್ಥಾನದ ಡಾ|| ರಾಲ್ಫ್ ರವರೂ ಸಹ ತಾವು ಜೈನಧರ್ಮದ ಬಗ್ಗೆ ಆಕೃಷ್ಟರಾದ ವಿಷಯವನ್ನು ವಿವರಿಸಿದರು. ಪ್ರಾರಂಭದಲ್ಲಿ ಸಂಗೀತವಿದ್ವಾನ್ ಚಕ್ಕೂರು ಸುಬ್ಬಣ್ಣನವರಿಂದ ದೇವತಾ ಪ್ರಾರ್ಥನೆ ಯಾಯಿತು. ಮೈಸೂರು ಜಿಲ್ಲಾ ಸಮಿತಿಯ ಅಧ್ಯಕ್ಷರಾದ ಶ್ರೀ ರಘುಚಂದ್ರ ಅಜ್ರಿ ಯವರು 'ಎಲ್ಲರಿಗೂ ಸ್ವಾಗತ ಬಯಸಿದರು. ಉಪಾಧ್ಯಕ್ಷರಾದ ಶ್ರೀ ಸಿ.ಬಿ. ಮಹಾ ವೀರಪ್ರಸಾದರವರು ಮುಖ್ಯ ಅತಿಥಿಗಳ ಪರಿಚಯ ಮಾಡಿ ಸಮಿತಿಯ ವರದಿ ಯನ್ನು ಸಾದರಪಡಿಸಿದರು ಈ ಸಂದರ್ಭದಲ್ಲಿ ಗುಂಡ್ಲುಪೇಟೆ ತಾಲ್ಲೋಕು ತಹ ಶೀಲ್ದಾರ್ ಶ್ರೀ ಸುಬ್ಬಯ್ಯನವರು ಮಾತನಾಡಿ ಚೈತ್ಯಾಲಯದ ಸರ್ವಾಂಗೀಣ ಅಭಿವೃದ್ಧಿ ಕಾರ್ಯದಲ್ಲಿ ತಮ್ಮ ಪೂರ್ಣ ಸಹಕಾರ ಮಾಡುವುದಾಗಿ ಶ್ರುತಪಡಿಸಿದರು ಕೊನೆಯಲ್ಲಿ ಸಮಿತಿಯ ಸದಸ್ಯರಾದ ಶ್ರೀ ಸಿ. ಎಲ್. ಬ್ರಹ್ಮದೇವಯ್ಯನವರು ವಂದನಾರ್ಪಣೆ ಮಾಡಿದರು. ಸಮಿತಿಯ ಕಾರ್ಯದರ್ಶಿಯವರಾದ ಶ್ರೀ ಎಂ ಪಿ. ಎಲ್ ಕಾಂತ್‌ರವರು ಕಾರ್ಯಕ್ರಮವನ್ನು ನಿಯೋಜಿಸಿದರು. ಕಳಶದ ಮಾರಾಟ ಪೂಜಾದ್ರವ್ಯಗಳ ಹರಾಜು ಹಾಗೂ ಜೀರ್ಣೋದ್ಧಾರದ ಕೆಲವು ಕೆಲಸಗಳನ್ನು ಮಾಡಿಸಿಕೊಡುವ ವಾಗ್ದಾನದ ಮೂಲಕ ಸುಮಾರು ಇಪ್ಪತ್ತು ಸಾವಿರ ರೂಪಾಯಿ ಗಳು ಸಂಗ್ರಹವಾದಂತಾಗಿದೆ.

ಇತಿ

ಎಂ.ಪಿ.ಎಲ್. ಕಾಂತ್

ಕಾರ್ಯದರ್ಶಿ

## ರೀಡರ್ ನೇಮಕ

ಮೈಸೂರು ಯೂನಿವರ್ಸಿಟಿಯಲ್ಲಿ ಡಾ|| ಬಿ.ಪಿ. ಬಡಗೇರಿ ಎಂ. ಎ. ಇವರನ್ನು ಜೈನಾಲಜಿ ವಿಭಾಗದ ರೀಡರ್‌ಆಗಿ ನೇಮಿಸಿರುತ್ತಾರೆ.

ಸಂಪಾದಕರು, ಜಿನವಾಣಿ, ಮೈಸೂರು

---

## ಪಂಪ ಚಿತ್ರಿಸಿದ ಬಾಹುಬಲಿ

ಕ್ರಿ.ಶ. ೯೮೧ ರಲ್ಲಿ ಗಂಗರಾಜ್ಯ ವಂಶದ ನರೇಂಧ್ರರಾಜನ ಮಹಾಮಂತ್ರಿ, ದಂಡನಾಯಕ, ಅಪಾರ ಜಿನಭಕ್ತನಾದ ಚಾಮುಂಡರಾಯನು ಆಕಾಲದ ಪ್ರತಿಭಾಶಾಲಿಯಾದ ಅರಿಷ್ಟನೇಮಿ ಎಂಬ ಶಿಲ್ಪಿಯಿಂದ ಏಕ ಶಿಲೆಯಲ್ಲಿ ಶ್ರವಣಬೆಳಗೊಳದ ವಿಂಧ್ಯಗಿರಿಯ ಮೇಲೆ ೫೭ ವರೆ ಅಡಿ ಅಥವಾ ೧೮ ಮೀಟರ್ ಎತ್ತರದ ಬಾಹುಬಲಿಯ ವಿಗ್ರಹವನ್ನು ಕೆತ್ತಿಸಿದನು. ಆ ಭವ್ಯ ದಿವ್ಯ ಮೂರ್ತಿ ಸಾವಿರ ವರ್ಷಗಳಾದರೂ ಮಳೆ, ಗಾಳಿ, ಸಿಡಿಲು ಮತ್ತು ಪ್ರಕೃತಿಯ ವಿಕೋಪಕ್ಕೆ ಜಗ್ಗದೆ ದಿವ್ಯವಾಗಿ ಮಂದಸ್ಮಿತವಾಗಿದೆ. ಅಲ್ಲಿಗೆ ಹೋದವರು ವಿಸ್ಮಿತರಾಗಿ ಆನಂದ ತುಂದಿಲರಾಗಿ ಅಲೌಕಿಕ ಅನುಭವವನ್ನು ಪಡೆಯುತ್ತಾರೆ.

೧೯೮೧ ರ ಫೆಬ್ರವರಿಯಲ್ಲಿ ೧೦೦೦ ವರ್ಷದ ಮಹಾಮಸ್ತಕಾಭಿಷೇಕ ಬಹು ವಿಜೃಂಭಣೆಯಿಂದ ವಿಧಿಪೂರ್ವಕವಾಗಿ ನಡೆಯಿತು. ಹಾಗೆಯೇ ಕರ್ನಾಟಕದಲ್ಲಿ ಐದನೇ ವಿಗ್ರಹವಾದ ೩೮ ಅಡಿ ಎತ್ತರದ ಬಾಹುಬಲಿ ವಿಗ್ರಹವು ಮೊನ್ನೆ ೧೯೮೨ ಫೆಬ್ರವರಿಯಲ್ಲಿ ಧರ್ಮಸ್ಥಳದಲ್ಲಿ ಶ್ರೀ ವೀರೇಂದ್ರಹೆಗ್ಗಡೆಯವರಿಂದ ಪ್ರತಿಷ್ಠಾಪಿಸಲ್ಪಟ್ಟಿದೆ.

ಕೋಟ್ಯಾನುಕೋಟಿ ವರ್ಷಪೂರ್ವದಲ್ಲಿ ಈಗ ನಡೆಯುತ್ತಿರುವ ಅವಸರ್ಪಿಣಿ ಕಾಲದ ಮೂರನೆಯ ಕಾಲದ ಕೊನೆಯಲ್ಲಿ ಪ್ರಥಮ ತೀರ್ಥಂಕರರಾದ ವೃಷಭದೇವರ ಸುನಂದೆಯೆಂಬ ಪತ್ನಿಯಲ್ಲಿ ಪುತ್ರನಾಗಿ ಬಾಹುಬಲಿ ಜನಿಸಿದನು. ಅವನು ಚರಮಾಂಗನೂ, ಆ ಕಾಲದ ಕಾಮದೇವನೂ ಆಗಿದ್ದನು. ಜೈನಧರ್ಮದಲ್ಲಿ ವೃಷಭದೇವರಿಂದ ವರ್ಧಮಾನರವರೆಗೆ ಇಪ್ಪತ್ತುನಾಲ್ಕುಮಂದಿ ತೀರ್ಥಂಕರರು ಸರ್ವಶ್ರೇಷ್ಠರು. ಆದರೂ ಈ ಅವಸರ್ಪಿಣಿ ಕಾಲದಲ್ಲಿ ಮೊಟ್ಟಮೊದಲು ವೃಷಭದೇವರಿಗಿಂತ ಮೊದಲು ಸಿದ್ಧಪದವಿಯನ್ನು ಪಡೆದವನು ಬಾಹುಬಲಿಯು. ಬಾಹುಬಲಿಯು

ಸಾಮಾನ್ಯ ಕೇವಲಿ. ಆದರೂ ಕೋಟ್ಯಾನುಕೋಟಿವರ್ಷಗಳ ನಂತರವೂ ಅವನ ನೆನಪು ಮತ್ತು ಪ್ರಾಗಳು ನಡೆಯುತ್ತಿರುವುದಕ್ಕೆ ಕಾರಣ ಅವನ ಮಹೋನ್ನತ ವ್ಯಕ್ತಿತ್ವ. ಅವನ ವ್ಯಕ್ತಿತ್ವ ಮೇರುಪರ್ವತದಂತಹ, ಆಕಾಶದಂತಹ, ವಿಶ್ವವ್ಯಾಪ್ತಿಯಾಹ ವ್ಯಕ್ತಿತ್ವ, ಮತ್ತು ಬಾಹುಬಲಿಯು ತನ್ನ ಜೀವಿತಕಾಲದಲ್ಲಿ ಜನಗಳಲ್ಲಿ ತನ್ನಬಗ್ಗೆ ತುಂಬಿತುಳುಕಿಸಿದ ಭಕ್ತಿ ಮತ್ತು ಅನುರಾಗಗಗಳೇ ಕಾರಣ. ಬಾಹುಬಲಿ ಚಿತ್ರವನ್ನು. ಸಂಪಸುಕಂಡಂತೆ ವಿವರಿಸುವುದಕ್ಕೆ ಮುಂಚೆ ಬಾಹುಬಲಿಗೆ ಕೈವಲ್ಯಪದವಿ ದೊರಿತಮೇಲೆ ಶ್ರೀ ಜಿ. ಗುಂಡಣ್ಣ, ಎಂ.ಎ. ಇವರು ಹಾಡಿರುವ ಸ್ತೋತ್ರದಿಂದ ಪ್ರಾರಂಭಿಸುತ್ತೇನೆ.

ಜೈನಧರ್ಮವ ಕಂಡೆ । ಮಹಾತಪಸನು ಕಂಡೆ ।
ಜ್ಞಾನ ಪುಂಜವ ಕಂಡೆ । ಆತ್ಮವನು ಕಂಡೆ ।
ಅಮರ ವೃಂದವ ಕಂಡೆ । ಅಮೃತ ಬಂಧವ ಕಂಡೆ ।
ಅಹಿಂಸೆ ಯತಿ ಸಾಮರ್ಥ್ಯದದ್ಭುತವ ಕಂಡೆ ॥

ಋಷಭದೇವರು ದೀಕ್ಷೆಯನ್ನು ಕೈಗೊಳ್ಳುವಾಗ ಭರತನಿಗೆ ಅಯೋಧ್ಯಾಪುರದ ಆಧಿಪತ್ಯವನ್ನೂ ಬಾಹುಬಲಿಗೆ ಪೌದನಾಪುರದ ಆಧಿಪತ್ಯವನ್ನೂ ಕ್ಕೊಟ್ಟು ಇತರ ಭಾಗಗಳನ್ನು ತನ್ನ ೯೯ ಮಂದಿ ಪುತ್ರರಿಗೆ ಹಂಚಿಕೊಟ್ಟರು.

ಬಾಹುಬಲಿಯು ಚರಮಾಂಗನೂ, ನೀಲದೇಹಿಯೂ, ಉನ್ನತಕಾಯನೂ ಆಗಿನಕಾಲದ ಕಾಮದೇವನೂ ಆಗಿದ್ದನು. ಆತನು ತನ್ನ ಅಣ್ಣನಿಗಿಂತಲೂ ದೇಹದಲ್ಲಿ ಎತ್ತರವಾಗಿದ್ದನು. ಅಷ್ಟೇಅಲ್ಲದೆ ಗುಣದಲ್ಲಿಯೂ, ಆಧ್ಯಾತ್ಮಶಕ್ತಿಯಲ್ಲಿಯೂ ತನ್ನ ಅಣ್ಣನನ್ನು ಮೀರಿಸಿದ್ದನು.

ಆತನ ಭವ್ಯಕಾಯವನ್ನು ಪಂಪನ ಮಾತಿನಲ್ಲಿಯೇ ಹೇಳುವುದಾದರೆ: ಉದಯಾಚಲದ ತುದಿಯನ್ನೇರಿದ ಸಪ್ತಾಶ್ವರೂಢನಾದ ಸೂರ್ಯದೇವ, ಇಕ್ಷ್ವಾಕು ವಂಶದ ಕ್ಷಾತ್ರತೇಜಸ್ಸೇ ಬಾಹುಬಲಿದೇವನಾಗಿ ಪ್ರಜ್ವಲಿಸುವಂತಿದೆ. ಮರ್ತ್ಯಲೋಕಕ್ಕೇ ಶ್ರೇಷ್ಠವಾದ ಆಕೃತಿ. ದಿವ್ಯವಾದ ಮರಕತಗಿರಿಯಂತೆ ಹೊಳೆಯುತ್ತಾನೆ.

ಪೌದನಾ ಪುರವನ್ನು ಅತಿ ಸುಂದರವಾಗಿ ಸರಳ ಸೌಂದರ್ಯದಿಂದ ಶೋಭಿಸುವಂತೆ ಸಮೃದ್ಧಪಡಿಸಿದನು. ಪೌದನಾಪುರದ ಲಕ್ಷ್ಮಿಯು ಅಯೋಧ್ಯಾಪುರದ

ಲಕ್ಷ್ಮಿಯು ಅಕ್ಕನಿಗಿಂತಲೂ ಹೆಗ್ಗಳಿಕೆಯಲ್ಲೆಂಬಂತೆ ಪೌದನಾಪುರದಲ್ಲಿ ವಿಜೃಂಭಿಸು ತ್ತಲಿದ್ದಳು.

ಬಾಹುಬಲಿಯು ರಾಜಕಾರ್ಯಗಳಲ್ಲಿ ಮಗ್ನನಾಗಿದ್ದರೂ ಸದಾ ಆತ್ಮಧ್ಯಾನ ದಲ್ಲಿಯೇ ಲೀನವಾಗಿರುತ್ತಿದ್ದನು. ಅವನ ಮುಖಗಳಲ್ಲಿ ಸದಾ ಶಾಂತ ಮಂದಹಾಸ ಮಿನುಗುತ್ತಲಿತ್ತು ಆವನ ರಾಣಿ. ಇಚ್ಛಾಮಹಾದೇವಿಯು ಎಲ್ಲಾ ಸಂದರ್ಭಗಳ ಲ್ಲಿಯೂ ಅವನಿಗೆ ಅನುಕೂಲಳಾಗಿರುತ್ತಿದ್ದಳು.

ಬಾಹುಬಲಿಯು ತಾನು ಮಾತ್ರ ಆತ್ಮಧ್ಯಾನ ಅರ್ಹಂತನ ಧ್ಯಾನದಲ್ಲಿ ಮಗ್ನ ವಾಗಿರುತ್ತಲಿದ್ದುದಲ್ಲದೆ ತನ್ನ ಧಾರ್ಮಿಕ ಪ್ರಭಾವದಿಂದ ಪೌದನಾಪುರದ ಮನೆಮನೆ ಯಲ್ಲಿಯೂ ಪ್ರತಿಪ್ರಜೆಯ ಹೃನ್ಮಂದಿರದಲ್ಲಿಯೂ ಜಿನಭಕ್ತಿ ಆಳವಾಗಿ ಬೇರೂರಿ ರುವಂತೆ ಮಾಡಿದ್ದನು ಆದ್ದರಿಂದಲೇ ಬಾಹುಬಲಿಯ ಪ್ರಭಾವ ಕೋಟ್ಯಾನು- ಕೋಟಿ ವರ್ಷಗಳವರೆಗೂ ಪೀಳಿಗೆಯಿಂದ ಪೀಳಿಗೆಗಳಿಗೆ ಧಾರಾ ಪ್ರವಾಹವಾಗಿ ಹರಿದುಬಂದು ಶತಶತಕೋಟಿ ಜನಗಳ ಹೃದಯಪದ್ಮಗಳಲ್ಲಿ ತೀರ್ಥಂಕರರಿಗಿಂತಲೂ ಹೆಚ್ಚಾಗಿ ನೆಲಸಿರುವನು. ಆಧ್ಯಾತ್ಮಿಕದಲ್ಲಿ ಹೇಗೋ ಹಾಗೆಯೇ ಲೌಕಿಕದಲ್ಲಿಯೂ ಅವನದು ಅಲೌಕಿಕ ವ್ಯಕ್ತಿತ್ವ. ಆದ್ದರಿಂದ ಭರತಚಕ್ರವರ್ತಿ ತನಗೆ ಶರಣಾಗ ಬೇಕೆಂದು ಮಹತ್ತರನೆಂಬ ದೂತನ ಮೂಲಕ ಹೇಳಿ ಕಳುಹಿಸಿದಾಗ 'ಇಬ್ಬರಲ್ಲಿ, ಯಾರ, ಶಕ್ತಿ ಎಷ್ಟೆಂಬುದನ್ನು ಜಗವರಿಯುವಂತೆ ತೂಗಿ ನೋಡಿದರೆ ನನ್ನ ಭುಜ ದಂಡವೇ ಧರೆಗೆ ತುಲಾದಂಡವೆಂದು ತಿಳಿ'' ಎಂದು ಹೇಳುತ್ತಾನೆ.

ಭರತನೊಡನೆ ಯುದ್ಧದದಿನ ಮುಂಜಾವಿನಲ್ಲಿ ತನಗೆ ತಾನೆ ತನ್ನರಮನೆಯ ಮೇಲು ನೆಲೆಯಲ್ಲಿ ನಿಂತು ಹೀಗೆ ಅಂದುಕೊಳ್ಳುತ್ತಾನೆ. ''ಆಧ್ಯಾತ್ಮದ ಮೇಲೆ ಲೌಕಿಕದ ಹಲ್ಲೆ, ಸಚ್ಛೀಲ ಸ್ವಾತಂತ್ರ್ಯಗಳ ಮೇಲೆ ದುಶ್ಶೀಲದ ದುರಾಕ್ರಮಣ ಶಾಂತಿಯ ಮೇಲೆ ರಾಜ್ಯದಾಹದ ಅತಿವರ್ತನೆ, ಪರ್ವತಗರಡಿಯ ವೀರೋಪಾಸನೆ ಯಿಂದಲೂ ಯೋಗಶಕ್ತಿಗಳಿಂದಲೂ ಕೂಟಸ್ತಂಭಗಳಂತೆ ಬೆಳೆತರುವ ಈ ನನ್ನ ತೋಳುಗಳಿರುವುದು ಅಧರ್ಮದ ಹಸ್ತಿಕುಂಭಗಳನ್ನು ಮೋದಲೆಂದೇ. ಪೌದನಪುರದ ಸಾಮ್ರಾಜ್ಞಿ ಶತ್ರುವಿನ ದೃಷ್ಟಿರೇಖೆಯೂ ಸಿನ್ನ ಮೈಸೋಂಕದಂತೆ ನಿನ್ನಿ ಗೌರ ವದ ಶ್ರೀರಕ್ಷೆಯಾಗಿರುತ್ತೇನೆ. ಇದೇ ಸಂಕಲ್ಪ. ಇದೇ ಪ್ರತಿಜ್ಞೆ ಆಂತಹ ಮನ ಸ್ಸಿನ ಕೋಲಾಹಲದಲ್ಲಿಯೂ ಅಣ್ಣನ ಗರ್ವಭಂಗವೇ ಹೊರತು, ಅವನನ್ನು ಕೊಲ್ಲು ವುದಲ್ಲ ಎಂಬ ಭಾವನೆಯನ್ನು ತಾಳುತ್ತಾನೆ ಬಾಹುಬಲಿಯ ಮನಸ್ಸು, ಆತ್ಮ

ದೇಹಗಳು ಲೌಕಿಕ ಮತ್ತು ಅಲೌಕಿಕ ತಪಸ್ಸುಗಳಿಂದ ಹುರಿಗೊಂಡಿದ್ದರೂ ಅವನು ಆಕಾಶದಮೇಲೆ ಹಾರುವ ಹಕ್ಕಿಯಲ್ಲ ಆದರೆ ಅವನು ಭೂಮಿಯನ್ನು ಹೊರುವ ದಿಗ್ದಂತಿ.

ಯುದ್ಧ ಪ್ರಾರಂಭವಾಗುವ ಮುನ್ನ ಭರತ ಮತ್ತು ಬಾಹುಬಲಿಯ ಇಬ್ಬರ ವೃದ್ಧ ಮಂತ್ರಿಗಳೂ ಸೇರಿ ಆದಿಜಿನತನಯರನ್ನು ನೀವಿಬ್ಬರೂ ಚರಮಾಂಗರು ಅನ್ಯಾಯವಾಗಿ ರಕ್ತಪಾತವಾಗುವುದೆಂಬ ದೃಷ್ಟಿಯಿಂದ ಇಬ್ಬರಲ್ಲಿ ದೃಷ್ಟಿಯುದ್ಧ, ಜಲ ಯುದ್ಧ ಮತ್ತು ಮಲ್ಲಯುದ್ಧಗಳನ್ನು ಮಾಡಿ ಜಯಾಪಜಯಗಳನ್ನು ನಿರ್ಣಯಿಸಿ ಎಂದು ಪ್ರಾರ್ಥಿಸಿ ಒಪ್ಪಿಸುವರು.

ಆ ಧರ್ಮ ಯುದ್ಧಗಳಲ್ಲಿಯೂ ಸಹ ಬಾಹುಬಲಿಯು ಶಾಂತಚಿತ್ತ ಸಮನ್ವಿತನಾಗಿರುತ್ತಾನೆ. ದೃಷ್ಟಿಯುದ್ಧದಲ್ಲಿ ಬಾಹುಬಲಿಯ ತೀಕ್ಷ್ಣ ಕಣ್ಣಿನ ಕಾಂತಿಯನ್ನು ತಾಳಲಾರದೆ ಭರತನು ತಲೆ ತಗ್ಗಿಸುವನು. ಆ ಕಣ್ಣಿನಲ್ಲಿ ಸೂರ್ಯಕಾಂತಿ ಪ್ರಜ್ವಲಿಸುತ್ತಲಿದ್ದರೂ ಮುಖಮಂಡಲವೆಲ್ಲಾ ಸೌಮ್ಯವಾಗಿರುತ್ತದೆ. ಜಲಯುದ್ಧದಲ್ಲಿಯೂ ಬಾಹುಬಲಿಯು ಭರತನನ್ನು ಸೋಲಿಸುವನು. ಮಲ್ಲಯುದ್ಧ ಪ್ರಾರಂಭವಾದಾಗ ಭರತನು ಆವೇಶದಿಂದ ನುಗ್ಗಿಬಂದು ನೂರು ಮುಷ್ಟಿ ಪ್ರಹಾರವನ್ನು ಮಾಡುವನು ಆದರೂ ಬಾಹುಬಲಿಯು ವಜ್ರದೋಪಾದಿಯಲ್ಲಿ ಶಾಂತ ಸೌಮ್ಯವಾಗಿರುತ್ತಾನೆ. ಕೊನೆಗೆ ಭರತನ ಎರಡೂ ಕೈಗಳನ್ನು ಹಿಡಿದು ಸುತ್ತಿ ತಿರುಗಿಸಿ ಭರತನ ವಿಜಯೇಂದ್ರ ಆನೆಗೆ ಗುರಿಯಿಟ್ಟು ಎಸೆಯುತ್ತಾನೆ. ಅಲ್ಲಿಯೂ ಅಣ್ಣನ ಮೇಲೆ ವಾತ್ಸಲ್ಯವನ್ನೇ ಮೆರೆಯುತ್ತಾನೆ. ಅಣ್ಣನಿಗೆ ಅಪಾಯ ಒದಗಬಾರದೆಂದು ಹಸ್ತಿಗೆ ಗುರಿಯಿಟ್ಟು ಎಸೆಯುತ್ತಾನೆ. ಆ ಧರ್ಮಯುದ್ಧವನ್ನು ನೋಡಲು ನೆರೆದ ಸೌಧರ್ಮೇಂದ್ರಾದಿ ಎಲ್ಲ ದೇವತೆಗಳಿಗೂ ಸಹ ಕಣ್ಣು ಕತ್ತಲೆ ಕಟ್ಟಿದಂತಾಗುತ್ತದೆ. ಭರತನು ಶುಶ್ರೂಷೆ ಹೊಂದಿ ಮತ್ತೆ ಭೀಕರವಾಗಿ ಮಲ್ಲಯುದ್ಧವನ್ನು ಪ್ರಾರಂಭಿಸುತ್ತಾನೆ. ಆ ಭೀಕರ ಯುದ್ಧ ಎರಡು ಗ್ರಹಗಳ ಮರಕತಗಿರಿಗಳ ಹೋರಾಟದಂತಿರುತ್ತದೆ. ಕೊನೆಗೆ ಬಾಹುಬಲಿಯು ಭರತನನ್ನು ಮೇಲೆತ್ತಿ ಹಿಡಿಯುತ್ತಾನೆ. ಆದರೂ ಅಣ್ಣನನ್ನು ಕೆಳಕ್ಕೆಸೆಯುವುದಿಲ್ಲ. ತಿರ್ಪುಗಾರರಲ್ಲಿ ಒಬ್ಬನಾದ ಪ್ರಭಾಸರಾಜನನ್ನು ಕುರಿತು ಬಾಹುಬಲಿಯು ಹೀಗೆ ಹೇಳುತ್ತಾನೆ. "ಅಮರರಾಜ ಭರತೇಶ್ವರನು ನನಗೆ ಗುರು ಹಿರಿಯಣ್ಣ, ಚಕ್ರವರ್ತಿ, ಮಹಿಮಾಸ್ಪದ! ಈತನನ್ನು ನೆಲಕ್ಕೆಸದು ಭಂಗವನ್ನುಂಟು ಮಾಡುವೆನೆ" ಎಂದು ಹೇಳಿ ಮೆಲ್ಲಗೆ ಕೆಳಗಿಳಿಸುತ್ತಾನೆ.

ಮುಂದುವರಿಯುವುದು

# ಚಂದ್ರಪ್ರಭಾ ಟ್ರಸ್ಟ್
# ಜಿನವಾಣಿ ಕಾರ್ಯಾಲಯ

ನಂ ೬೩. ಡಿ. ಬಸುವಯ್ಯರಸ್ತೆ, ಮೈಸೂರು.

ಜಿನವಾಣಿ REG. NO. K.R.N. 17

೧೪) ಎ. ಸಿ. ಎ. ದೇವೇಂದ್ರಪ್ಪನವರು, ಮೈಸೂರು

೧೫) ಪಾರ್ಶ್ವನಾಥಯ್ಯನವರು, ಬೆಂಗಳೂರು

೧೬) ಬಿ ಜೆ. ಸುರೇಂದ್ರಕುಮಾರ್,

೧೭) ಎಂ. ಕೆ. ಅನಂತಯ್ಯನವರು, ವೇನಾಡು

೧೮) ಶ್ರೀಮತಿ ಚಂದ್ರಮತಿ ಅಮ್ಮನವರು, ವೇನಾಡು

೧೯) ಸಿ. ಡಿ. ಚಂದ್ರಪ್ರಭ, ರಾಡಿಕೆರೆ

೨೦) ಎಸ್. ಎಸ್. ಡಿ. ನಾಗರಾಜಯ್ಯನವರು, ಶ್ರವಣಬೆಳಗೊಳ

೨೧) ಶ್ರೀ ಚಂದ್ರಪ್ರಭ ಕರಿಂಗುತ್ತಿ

To

Sri

ಜಿನವಾಣಿಕಾರ್ಯಾಲಯ

ನಂ 67. ಡಿ. ಬನುಮಯ್ಯ ರಸ್ತೆ, ಮೈಸೂರು-೫೭೦೦೦೧

The Jinavani, the Kannada monthly Magazine is Edited and Published by Sri M. C. Padmanabhasharma & Printed by Sri B V. Alahiyamanavalan, Propritor, Sri Vijayalakshmi Press, 55, D. Subbiah Road, MYSORE-1.

ಜೈನಪ್ರಚಾರಸಂಘದ ಜೈನಧಾರ್ಮಿಕ ಕನ್ನಡ ಮಾಸಿಕಮುಖಪತ್ರಿಕೆ

# ಜಿನವಾಣಿ



ಮಾರ್ಚಿ 10 1984

ಅನಂತಕೃತಜ್ಞತಾಭಿನಂದನಗಳು

ಜಿನವಾಣಿರಜತೋತ್ಸವ ಸ್ಮಾರಕವಾದ

ಮಹಾವೀರಸ್ವಾಮಿಯ

೨೫೦೦ ನೇ ವೀರನಿರ್ವಾಣವಿಶೇಷಸಂಚಿಕೆಯಲ್ಲಿನ

ಜಿನವಾಣೀಸಂಪಾದಕನ

ವಿಶೇಷ ನಿವೇದನ ಪ್ರಾರ್ಥನಾನುಸಾರ

೧೯೭೮ನೇ ಮಾರ್ಚಿ ಸಂಚಿಕೆಯ

ಸಂಪೂರ್ಣಪ್ರಕಟಣಾದಿಗಳಿಗೆ ಪರಮಸಹಕಾರಿಗಳಾದ

ಬೆಂಗಳೂರಿನಲ್ಲಿರುವ ನ್ಯಾಯಧರ್ಮಪ್ರಭುಗಳಾದ

ಸನ್ಮಾನ್ಯಶ್ರೀ ಜಿ.ಹೆಚ್. ಆದಿರಾಜಯ್ಯ, I.A.S, ರವರಿಗೆ

ಮತ್ತು

ಹರಪನಹಳ್ಳಿಯಲ್ಲಿರುವ ಜೈನಜ್ಯೋತಿಷಧರ್ಮವಿದ್ಯಾವಿಶಾರದರಾದ

ಸನ್ಮಾನ್ಯಶ್ರೀ ಚೂಡಪ್ಪಶಾಸ್ತ್ರಿಗಳವರಿಗೆ

ಅನಂತಪೃತ್ಪೂರ್ವಕಕೃತಜ್ಞತಾಯುಕ್ತವಾದ ಧನ್ಯವಾದಗಳನ್ನು ಅರ್ಪಿಸುವೆವು.

ಈ ಔದಾರ್ಯ ವಾತ್ಸಲ್ಯಗಳೇ ನಮ್ಮ ರಕ್ಷಾಕವಚ !!

ಇದೇ ಈಸಂಚಿಕೆಯ

ಮುದ್ರಣಪ್ರಕಟಣಾದಿಗಳಿಗೆ ಆಧಾರ!!!

ಇಂತು ಕೃತಜ್ಞ

ಎಂ. ಸಿ ಪದ್ಮನಾಭಶರ್ಮ

ಸಂಪಾದಕ, ಜಿನವಾಣಿ

ಮೈಸೂರು

೧೦-೩-೭೮

॥ಓಮ್॥

॥ ಓಮ್ ನಮಸ್ಸಿದ್ಧೇಭ್ಯಃ ॥

# ಜಿ ನ ವಾ ಣಿ

# JINAVANI

ಜೈನಸಾಹಿತ್ಯ ಪ್ರಚಾರಸಂಘದ ಮುಖಪತ್ರಿಕೆ

## ಜೈ ನ ಧಾ ರ್ಮಿ ಕ

## ಕ ನ್ನ ಡ ಮಾ ಸ ಪ ತ್ರಿ ಕೆ

KANNADA MONTHLY MAGZINE

ಸತ್ವೇಷು ಮೈತ್ರೀಂ ಗುಣಿಷು ಪ್ರಮೋದಂ ಕ್ಲಿಷ್ಟೇಷು ಜೀವೇಷು ಕೃಪಾಪರತ್ವಮ್
ಮಾಧ್ಯಸ್ಥಭಾವಂ ವಿಪರೀತವೃತ್ತೌ ಸದಾ ಮಮಾತ್ಮಾ ವಿದಧಾತು ದೇವ ! ॥

–ಅಮಿತಗತಿ

ಎಲೈ ! ದೇವನೇ ! ಪ್ರಾಣಿಗಳಲ್ಲಿ ಸ್ನೇಹವನ್ನೂ, ಗುಣವಂತರಲ್ಲಿ ಸಂತೋಷವನ್ನೂ, ಕಾಯಕ್ಲೇಶ ಮನಃಕ್ಲೇಶಗಳಲ್ಲಿ ತೊಳಲಾಡುವ ಪ್ರಾಣಿಗಳಲ್ಲಿ ದಯೆಯನ್ನೂ, ಶಾಸ್ತ್ರಾಗಮಾಪ್ತವ್ಯತಿರೇಕಮಾರ್ಗಾಶ್ರಯಿಗಳಲ್ಲಿ ಮಾಧ್ಯಸ್ಥಭಾವುಯನ್ನೂ ನನಗೆ ಉಂಟುಮಾಡು.

MP·A ತಿಲಕ್, M·A., ಮೈಸೂರು.

ಮಂಡಲ ೩೩-೩೪) ಮೈಸೂರು ೧೦ನೆಯ ಮಾರ್ಚಿ ೧೯೮೪ (ಕಿರಣ- ೫
(ಗೊಮ್ಮಟ-ಚಾವುಂಡರಾಯ-ಶಕ– ೧೦೦೩)




## ಭಗವಾನ್ ವೃಷಭತೀರ್ಥಂಕರದೇವರು

### ವೃಷಭದೇವನ ಜನ್ಮಪ್ರಸಂಗ

ಜಗತ್ತು ಅನಾದಿನಿಧನವಾದುದು. ಭಗವಾನ್ ವೃಷಭದೇವನು ನಮ್ಮಂತೆಯೇ ಸಂಸಾರಸಾಗರದಲ್ಲಿ ಇರುತ್ತಿರಲು ತನ್ನ ೧೦ನೇ ಭವದಲ್ಲಿ ಅಯೋಧ್ಯಾನಗರಿಯ

ರಾಜನಾದ ನಾಭಿರಾಜನ ಪಟ್ಟದರಸಿಯಾದ ಮರುದೇವಿಯ ಗರ್ಭದಲ್ಲಿ ಜನಿಸಿದನು. ಈ ವೃಷಭದೇವ ಆತ್ಮನು 'ಸರ್ವಾರ್ಥಸಿದ್ಧಿ' ಎಂಬ ದೇವಲೋಕದಿಂದ ಬಂದು ವಸುಧಾರಾದಿಮಹಾವೈಭವದಿಂದ ನಾಭಿರಾಜನ ಪುತ್ರನಾಗಿ ಜನಿಸಿ ೮೪ ಲಕ್ಷಪೂರ್ವ ಆಯುಷ್ಯ ಉಳ್ಳವನಾಗಿ ಯಶಸ್ವತಿ ಸುನಂದೆ ಎಂಬ ಕನ್ಯೆಯರನ್ನು ವಿವಾಹವಾಗಿ ಬಹುಕಾಲ ಸಂಸಾರದಲ್ಲಿದ್ದು ದೇವಲೋಕದಲ್ಲಿ ನೀಲಾಂಜನೆಯ ನರ್ತನವನ್ನು ನೋಡುತ್ತಿದ್ದಂತೆಯೇ ಆಕೆಯ ಪುಣ್ಯಕ್ಷಯದಿಂದ ಅದೃಶ್ಯಳಾಗಿ ಅಲ್ಲಿ ಮರಣಹೊಂದಿದ ವಿಷಯವನ್ನು ವೃಷಭದೇವನು ತಿಳಿದು ಅದರಿಂದ ಸಂಸಾರ ಶರೀರಭೋಗಗಳಲ್ಲಿ ವಿರಕ್ತನಾಗಿ ಆಷಾಢಮಾಸದ ಶುದ್ಧ ಷಷ್ಠಿಯಂದು ಉತ್ತರಾಷಾಢನಕ್ಷತ್ರದಲ್ಲಿ ದಿಗಂಬರ ಮುನಿಯಾಗಲು "ಓಂ ನಮಃ ಸಿದ್ಧೇಭ್ಯಃ" ಎಂಬ ಮಂತ್ರವನ್ನು ಜಪಿಸುತ್ತ ಪಂಚಮುಷ್ಟಿಯಿಂದ ತಲೆಗೂದಲುಗಳನ್ನು ಕಿತ್ತುಹಾಕಿ ಮಹಾವ್ರತಧಾರಿಯಾಗಿ ಒಂದುವರ್ಷಕಾಲ ಯೋಗಾವಸ್ಥೆಯಲ್ಲಿದ್ದು ನಂತರ ಆಹಾರನಿಮಿತ್ತವಾಗಿ ಹಸ್ತಿನಾಪುರಕ್ಕೆ ದಯಮಾಡಿಸಿದರು. ಆಗ ಅಲ್ಲಿಯ ಸೋಮಪ್ರಭ-ಶ್ರೇಯಾಂಸರೆಂಬ ಸಹೋದರರು ವೃಷಭಮುನಿಯನ್ನು ನಿಲ್ಲಿಸಿ ವಿಧಿಪೂರ್ವಕವಾಗಿ ಆಹಾರದಾನವನ್ನು ಕೊಟ್ಟು ಸತ್ಕರಿಸಿದರು. ಹೀಗೆ ಒಂದು ಸಾವಿರವರ್ಷಗಳವರೆಗೆ ತಪಸ್ಸನ್ನು ಆಚರಿಸಿ ಕೇವಲಜ್ಞಾನ ಪಡೆದರು. ನಂತರ ದೇವೇಂದ್ರ ನಿರ್ಮಿತವಾದ ಸಮವಸರಣಭೂಮಿಯಲ್ಲಿ ವಿಹರಿಸಿ ಉಪದೇಶವನ್ನು ಮಾಡಿದರು.

ನಂತರ ಆಯುಷ್ಯವು ಒಂದುತಿಂಗಳು ಇರುವಾಗ ಕೈಲಾಸಪರ್ವತದಲ್ಲಿ ಅಘಾತಿಕರ್ಮಗಳನ್ನು ಕೆಡಿಸಿ ಸಿದ್ಧಿಯನ್ನು ಪಡೆದರು. ಮೋಕ್ಷ–ನಿರ್ವಾಣವನ್ನು ಪಡೆದರು; ಎಂದರೆ– ಮಾಘಮಾಸದ ಚತುರ್ದಶಿಯ ಕೊನೆಯ ಜಾವದಲ್ಲಿ ನಿರ್ವಾಣ ಹೊಂದಿದರು.

ಇಂತಹ ತೀರ್ಥಂಕರರ ಉಪದೇಶಾಮೃತವಾಣಿಯು ಜಿನವಾಣಿಯಾಗಿ ಲೋಕಕ್ಕೆ ಜ್ಞಾನದಾಹವನ್ನು ತಣಿಸಿದೆ. ಇಂತಹ ಮಹಾಪುರುಷನಿಗೆ ನಮೋಸ್ತು.

**ಸಂಪಾದಕ, ಜಿನವಾಣಿ**

---

ಸುಭಾಷಿತ: – ವಿಧ್ಯಾದಿಯೇ ನಗರ ಗುಹೆಗಳೇ ವಾಸಸ್ಥಾನ. ಪರ್ವಗಳ ಹಾಸುಗಲ್ಲುಗಳೇ ಹಾಸಿಗೆ. ಚಂದ್ರಕಿರಣಗಳೇ ದೀಪಗಳು, ಮೃಗಗಳೇ ಸಹಚರಿಗಳು, ಸತ್‌ಸಹವಾಸವೇ ಮೈತ್ರಿ, ವಿಜ್ಞಾನವೇ ತೀರ್ಥ, ತಪಸ್ಸೇ ಆಹಾರ, ಇಂತಹ ಸನ್ನಿವೇಶ, ಯಾವ ನಿಗಿದೆಯೋ ಆತನೇ ಪ್ರಶಾಂತಾತ್ಮ, ಇಂತಹವರೇ ಧನ್ಯರು, ಕಾರಣ: ಇವರು ಸಂಸಾರವೆಂಬ ಕೆಸರಿನ ಹೊಂಡದಿಂದ ದೂರಸರಿಯುವ ಮಾರ್ಗದರ್ಶಕರು, ಇವರೇ ನಮಗೆ ಶರಣು.

ಸಂಗ್ರಹ: B V. ಸಿಂಹಶರ್ಮ.

# ಜೈನ ವಿವಿಧ ವಾರ್ತೆಗಳು

ಮತ್ತು

# ಪ್ರಕಟಣ ವಿಮರ್ಶಾದಿಗಳು

## ಇದೊಂದು ಪ್ರಕಟಣೆ

## ಶ್ರೀ ದಿಗಂಬರ ಮಹಾವೀರ ಸಂಘ (ರಿ). ಬೆಂಗಳೂರು

ಬೆಂಗಳೂರಿನಲ್ಲಿ ತಾ|| ೪-೫-೮೪ರಿಂದ ೮-೫-೮೪ರ ವರೆಗೆ ಶ್ರೀ. ಧರ್ಮಸ್ಥಳ ಮಂಜುನಾಥಸ್ವಾಮಿ ಕಲ್ಯಾಣಮಂದಿರ, ದೊಡ್ಡ ಗಣಪತಿ ದೇವಸ್ಥಾನದ ಆವರಣ ಬಸವನಗುಡಿ ರಸ್ತೆ, ಬೆಂಗಳೂರು-೫೬೦ ೦೦೪ ಇಲ್ಲಿ ನಡೆಯಲಿರುವ ಬೆಂಗಳೂರಿನ ಚಿಕ್ಕಪೇಟೆ ದಿವಾನಖಾನೆ ಲೇನ್‌ನಲ್ಲಿರುವ ಶ್ರೀ ಮಹಾವೀರ ದಿಗಂಬರಜೈನ ಚೈತ್ಯಾಲಯದ ಶತಮಾನೋತ್ಸವ, ನೂತನಬಿಂಬ ಪ್ರತಿಷ್ಠಾಪನೆ— ಪಂಚಕಲ್ಯಾಣದ ಸಂದರ್ಭದಲ್ಲಿ ಎರಡುದಿನಗಳ ವಿಚಾರಗೋಷ್ಠಿಯನ್ನು ನಡೆಸಲು ಯೋಚಿಸಲಾಗಿದೆ ಈ ಸಂದರ್ಭದಲ್ಲಿ ಸಮಾಜದ ಎದುರಿಗಿರುವ ಕೆಲವು ಮುಖ್ಯ ವಿಷಯಗಳನ್ನು ಚರ್ಚಿಸಲಾಗುವುದು.

೧) ಅಳಿಯುತ್ತಿರುವ 'ಶಾಸ್ತ್ರಿ' ಮತ್ತು ಪುರೋಹಿತರ ಸಂಪತ್ತು ಈಗ ಇದರ ಉತ್ಥಾನ ಹೇಗೆ?

೨) ಮದುವೆಗಳಲ್ಲಿ ನಡೆಯುವ ದುಡುಮೆ ಮತ್ತು ಅನಾವಶ್ಯಕ ವಿಧಿಗಳು— ಈಗ ಇವುಗಳಕತೆ ಹೇಗೆ?

ಶ್ರವಣ ಬೆಳ್ಗೊಳದ ಹಿಂದಿನ ಮಠಾಧಿಪತಿಗಳಾಗಿದ್ದ ಸ್ವ. ನೇಮಿಸಾಗರ ಸ್ವಾಮಿಗಳ ಕಾಲದಲ್ಲಿ 'ಶಾಸ್ತ್ರಿ'ಗಳನ್ನು ತರಬೇತುಮಾಡಿದ್ದರಿಂದ ಈಗ ಅಲ್ಲೊಬ್ಬರು ಇಲ್ಲೊಬ್ಬರು ಶಾಸ್ತ್ರಿಗಳು ಉಳಿದಿರುತ್ತಾರೆ. ಅವರಿಗೂ ವಯಸ್ಸಾಗುತ್ತಾಬಂದಿದೆ. ಮುಂದೆ ಪ್ರತಿಷ್ಠಾತಿಲಕವನ್ನು ಓದಿ ವಿಧಿಗಳನ್ನು ಹೇಳಿ, ಪೂಜೆಮಾಡಿಸುವ ಶಾಸ್ತ್ರಿಗಳೇ ಇರುವುದಿಲ್ಲ.

ಈ ಶಾಸ್ತ್ರಿಗಳ ಸಂಖ್ಯೆಯನ್ನು ಬೆಳೆಸಲು ಏನುಮಾಡಬೇಕು?

ಇದೇರೀತಿ ಪುರೋಹಿತವರ್ಗ ಸಹ ಕಡಿಮೆಯಾಗುತ್ತಿದೆ ಪೂಜಾ ವಿಧಿ

ವಿಧಾನಗಳನ್ನು ತಿಳಿದವರು ವಿರಳವಾಗುತ್ತಿದ್ದಾರೆ. ಇವರ ಉತ್ಥಾನ ಹೇಗೆ ? ಈ ವರ್ಗದ ಕುಟುಂಬದ ಸದಸ್ಯರಿಗೆ ಪೂಜಾವಿಧಾನ, ಜ್ಯೋತಿಷ್ಯ, ಮತ್ತು ವೈದ್ಯ ಇತ್ಯಾದಿ ಕಲಿಸಿದರೆ ತಮ್ಮ ಜೀವನ ನಿರ್ವಹಿಸಲು ಮತ್ತು ಹೆಚ್ಚು ಮನಶ್ಯಾಂತಿಯಿಂದ ಮತಕ್ಕೆ ಹಿತವಾಗಿ ನಡೆದುಕೊಂಡು ಸಮಾಜಕ್ಕೆ ಮಾರ್ಗದರ್ಶನ ಮಾಡಲು ಸಾಧ್ಯ ವಾಗಬಹುದಲ್ಲವೆ ? ಈ ವರ್ಗದ ಉಳಿವೇ ನಮ್ಮ ಮಂದಿರಾದಿಗಳ ಉಳಿವಿನ ಆಧಾರ ವಲ್ಲವೆ ?

ಮದುವೆಗಳಲ್ಲಿ ಕಾಶಿಯಾತ್ರೆಯಂತಹ ಕೆಲವು ವಿಧಿಗಳು ಮಿಕ್ಕ ಸಂಪ್ರದಾಯ ದಿಂದ ಬಂದಂತಿವೆ. ಇವುಗಳ ಮುಂದುವರಿಕೆ ಅವಶ್ಯಕವೆ ? ಆರತಕ್ಷತೆ–ಆಡಂಬರ ಇದು ತಪ್ಪಿಸಲು ಸಾಧ್ಯವಿಲ್ಲವೆ ? ಒಂದು ದಿನದಲ್ಲಿ ಮದುವೆಯ ಕಾರ್ಯಕ್ರಮ (ಸರಳವಾಗಿ) ಮುಗಿಸಲು ಸಾಧ್ಯವಿಲ್ಲವೆ ?

ಫಲಕೊಡುವಾಗ ತೆಂಗಿನಕಾಯಿ ಬದಲು ಇತರೆ ಫಲಕೊಡುವುದು. ಉಡುಗೊರೆ (ಮುಯ್ಯಿ) ಹಣದರೂಪದಲ್ಲಿ ಎಲ್ಲರೂ ವಧೂವರರ ಆಸೆ ಆಕಾಂಕ್ಷೆಯ ವಸ್ತುಗಳನ್ನು ತರಲು ಅವರಿಗೆ ಹೆಚ್ಚಿನ ಅವಕಾಶ ಒದಗಿಸಿದಂತಾಗುತ್ತದೆ. ಲಗ್ನಪತ್ರಿಕೆ ಗಳನ್ನು ಅಂಚೆ ಮುಖಾಂತರ ಕಳಿಸುವುದು. ಫೋಟೋ ಇತ್ಯಾದಿ ದುಂದುವೆಚ್ಚವನ್ನು ಕಡಿಮೆಮಾಡುವುದು, ಮದುವೆಗಳಲ್ಲಿ ರಾತ್ರಿ ಭೋಜನ, ಕಂದ ಮೂಲಾದಿಗಳನ್ನು ಉಪಯೋಗಿಸದಿರುವುದು– ಈಗಲೂ ಸಾಧ್ಯವಲ್ಲವೆ?

ನಮ್ಮ ವಿದ್ಯಾರ್ಥಿವೃಂದದ ಅನುಕೂಲಕ್ಕಾಗಿ ಸುವ್ಯವಸ್ಥಿತ ವಿದ್ಯಾರ್ಥಿ ನಿಲಯುಗಳ ನಿರ್ವಹಣೆ, ಪುಸ್ತಕಭಂಡಾರಗಳು ಮತ್ತು ವಿದ್ಯಾರ್ಥಿವೇತನಗಳನ್ನು ಕೊಡುವ ವ್ಯವಸೆಮಾಡುವುದು.

ಈ ಕುರಿತು ತಮ್ಮ ಅನಿಸಿಕೆಗಳನ್ನು ತಾ|| ೧೫–೪–೮೪ ರೊಳಗಾಗಿ ಬರೆದು ಕಳಿಸಿರಿ. ತಮ್ಮ ವಿಚಾರಗಳನ್ನು ವಿಚಾರಗೋಷ್ಠಿಯಲ್ಲಿ ಮಂಡಿಸಲಾಗುವುದು. ಅವಶ ವಾದದ ಕಡೆ ತಾವು ಸಹ ಗೋಷ್ಠಿಯಲ್ಲಿ ಭಾಗವಹಿಸಿ ವಿವರಿಸಲು ಅವಕಾಶಮಾಡ ಲಾಗುವುದು. ತಮ್ಮ ಅನಿಸಿತೆಗಳನ್ನು ಈ ಕೆಳಗಿನ ವಿಳಾಸಕ್ಕೆ ಬರೆದುತಿಳಿಸಿರಿ.

ಅ.ನಾ. ಚಂದ್ರಕೀರ್ತಿ,
ಶ್ರೀ ದಿಗಂಬರ ಜೈನ ಮಹಾವೀರ ಸಂಸ್ಥೆ (ರಿ).
೨೭೨/೪೩ ರಾಜಗೃಹ, ಅಶೋಕ ಸ್ತಂಭ ರಸ್ತೆ,
೨ನೇ ವಿಭಾಗ, ಜಯನಗರ,
ಬೆಂಗಳೂರು–೫೬೦ ೦೧೧.

---

ವಿ.ಸೂ. ಈ ವಿಚಾರಗಳನ್ನು ಇತರರಿಗೂ ತಿಳಿಸಿ ಅವರಿಂದಲೂ ಬರೆಸಿರಿ.

# ಜಂಬೂದ್ವೀಪ ಶ್ರೀ ವಿಹಾರವು ರಾಷ್ಟ್ರೀಯ ಭಾವೈಕ್ಯತೆಯನ್ನು ಸಾಧಿಸಲಿ !

--ಸರಗೂರಿನಲ್ಲಿ ಪೂಜ್ಯ ಹೊಂಬುಜ ಶ್ರೀಗಳವರು

ಹಸ್ತಿನಾಪುರದ ಪೂಜ್ಯ ಆರ್ಯಿಕಾ ಜ್ಞಾನಮತಿ ಮಾತಾಜಿಯವರ ಅಪೇಕ್ಷೆಯಂತೆ ರಾಷ್ಟ್ರದ ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿಯವರ ಶುಭ ಹಸ್ತಗಳಿಂದ ಉದ್ಘಾಟಿಸಲ್ಪಟ್ಟು ಇದೀಗ ಕರ್ನಾಟಕದಲ್ಲಿ ಶ್ರೀ ವಿಹಾರ ಮಾಡುತ್ತಿರುವ ಜಂಬೂದ್ವೀಪ ಜ್ಞಾನಜ್ಯೋತಿಯು ಜನತೆಯ ಅಜ್ಞಾನವನ್ನು ದೂರಗೊಳಿಸಿ ರಾಷ್ಟ್ರದಲ್ಲಿ ಭಾವೈಕ್ಯತೆಯನ್ನು ಸಾಧಿಸಲಿ ಎಂದು ಮೈಸೂರು ಜಿಲ್ಲಾ ಸರಗೂರು ಪಟ್ಟಣದಲ್ಲಿ ನಡೆದ ಸಮಾರಂಭದಲ್ಲಿ ಪರಮಪೂಜ್ಯ ಸ್ವಸ್ತಿಶ್ರೀ ಶ್ರೀ ಶ್ರೀ ಮದ್ದೇವೇಂದ್ರಕೀರ್ತಿ ಭಟ್ಟಾರಕಮಹಾಸ್ವಾಮಿಗಳವರು ತಮ್ಮ ಆಶಯವನ್ನು ವ್ಯಕ್ತಪಡಿಸಿದರು. ಜಂಬೂದ್ವೀಪಜ್ಞಾನಜ್ಯೋತಿಶ್ರೀವಿಹಾರವು ಕೇವಲ ಜೈನ ಸಮಾಜದವರಿಗಾಗಿ ಆಯೋಜಿತಗೊಂಡ ಯೋಜನೆಯಾಗಿರದೆ ಅದು ರಾಷ್ಟ್ರದ ಸಮಸ್ತ ನಾಗರಿಕರಾದ ಪ್ರಜೆಗಳಲ್ಲಿ ಪರಸ್ಪರಪ್ರೀತಿ, ವಿಶ್ವಾಸ, ಒಗ್ಗಟ್ಟುಗಳನ್ನು ಸಾಧಿಸಿಕೊಡುವುದಲ್ಲದೆ ರಾಷ್ಟ್ರದ ಸಮಗ್ರತೆಯ ದೃಷ್ಟಿಯಿಂದ ಎಲ್ಲರ ಭಾವೈಕ್ಯತೆಯನ್ನು ಸಾಧಿಸಬೇಕೆಂದು ಪೂಜ್ಯ ಸ್ವಾಮಿಗಳವರು ಅಪ್ಪಣೆಕೊಡಿಸಿದರು.

ಜೈನ ಭೂಗೋಳ ಶಾಸ್ತ್ರದಲ್ಲಿ ವಿವರಿಸಿದ ಈ ವಿಶ್ವ ಮತ್ತು ಅದರ ಸ್ವರೂಪವನ್ನು ತಿಳಿದುಕೊಳ್ಳಲು ಈ ವಿಹಾರವು ಹೆಚ್ಚಿನ ಪ್ರಯೋಜನಕಾರಿಯಾಗುವುದು; ಎಂದೂ ಮಹಾಸ್ವಾಮಿಗಳವರು ತಮ್ಮ ಪ್ರವಚನದಲ್ಲಿ ಬೆಳಸಿ ಅದರ ಸಂಕ್ಷೇಪ ವಿವರಗಳನ್ನು ತಿಳಿಸಿದರು .

ದಿ. ೪-೧-೮೪ ರಂದು ಜಂಬೂದ್ವೀಪ ಶ್ರೀ ವಿಹಾರವು ಸರಗೂರು ಪಟ್ಟಣಕ್ಕೆ ಆಗಮಿಸಿದ್ದು ಸಹಸ್ರ ಸಹಸ್ರ ಸಂಖ್ಯೆಯ ಧರ್ಮಾಭಿಮಾನಿಗಳು ಅದನ್ನು ಭಕ್ತಿಯಿಂದ ಸ್ವಾಗತಿಸಿದರು. ಧಾರ್ಮಿಕ ಪ್ರವಚನ ಕಾರ್ಯಕ್ರಮವು ಇಲ್ಲಿಯ ಜಿನದತ್ತರಾಯ ಮಂಟಪದಲ್ಲಿ ನೆರವೇರಿತು.

## ಸರಗೂರಿನಲ್ಲಿ ಮಹಿಳಾ ಸಮಾಜದ ರಜತೋತ್ಸವ

ಮೈಸೂರು ಜಿಲ್ಲಾ ಸರಗೂರು ಪಟ್ಟಣದಲ್ಲಿ ಶ್ರೀ ಅನಂತಮತಿ ಮಹಿಳಾ ಸಮಾಜದ ರಜತೋತ್ಸವ ಸಮಾರಂಭವು ದಿ. ೪.೧.೮೪ರಂದು ಪರಮ ಪೂಜ್ಯ ಸ್ವಸ್ತಿಶ್ರೀ ಮದ್ದೇವೇಂದ್ರಕೀರ್ತಿ ಭಟ್ಟಾರಕಮಹಾಸ್ವಾಮಿಗಳವರ ನೇತೃತ್ವದಲ್ಲಿ

ಉತ್ಸಾಹದ ವಾತಾವರಣದಲ್ಲಿ ನೆರವೇರಿತು. ತುಮಕೂರಿನ ಶ್ರಾವಕಿ ಶ್ರೀಮತಿ ಶಾಂತಾ ದೇವಿ ಸನ್ಮತಿ ಕುಮಾರರವರಿಂದ ಉದ್ಘಾಟಿಸಲ್ಪಟ್ಟ ಈ ಸಮಾರಂಭದ ಅಧ್ಯಕ್ಷತೆಯನ್ನು ಬೆಂಗಳೂರಿನ ಶ್ರಾವಕಿ ಶ್ರೀಮತಿ ಕೌಸಲ್ಯ ಯಂ. ಸಿ. ಅನಂತರಾಜಯ್ಯನವರು ವಹಿಸಿದ್ದರು. ಮೈಸೂರಿನ ಶ್ರಾವಕಿ ಶ್ರೀಮತಿ ರುಕ್ಮಿಣಿ ಮಹಾವೀರ ಪ್ರಸಾದರವರಿಂದ ಶಾಸ್ತ್ರದಾನದ ಬಿಡುಗಡೆಯೂ ಇದೇ ಸಂದರ್ಭದಲ್ಲಿ ನೆರವೇರಿತು.

ಸಮಾರಂಭದಲ್ಲಿ ಉಪಸ್ಥಿತರಿದ್ದು ಆಶೀರ್ವಚನವನ್ನು ಮಾಡಿದ ಪರಮ ಪೂಜ್ಯ ಸ್ವಸ್ತಿಶ್ರೀ ದೇವೇಂದ್ರಕೀರ್ತಿಭಟ್ಟಾರಕಮಹಾಸ್ವಾಮಿಗಳವರು ಮಹಿಳೆಯರ ಕರ್ತವ್ಯ ಆದರ್ಶತನ ವಾತ್ಸಲ್ಯ ಪ್ರವೃತ್ತಿಗಳನ್ನು ವಿವರಿಸಿದರಲ್ಲದೆ ಪುರಾಣ ಪ್ರಸಿದ್ಧರಾಗಿರುವ ರೇವತಿರಾಣಿ, ಅನಂತಮತಿ, ಸೀತಾದೇವಿಯರ ಉದಾಹರಣೆಗಳನ್ನು ನೀಡಿ ಅವರೆಲ್ಲರ ಜೀವನದ ಆದರ್ಶ ಮೌಲ್ಯಗಳು ಇಂದಿನ ಮಹಿಳೆಯರಿಗೆ ಸ್ಫೂರ್ತಿದಾಯಕವಾಗಿರಬೇಕೆಂದು ಆಶಿಸಿದರು.

ಪ್ರಾರಂಭದಲ್ಲಿ ಮಹಿಳಾ ಸಮಾಜದ ವತಿಯಿಂದ ಪರಮಪೂಜ್ಯ ಮಹಾಸ್ವಾಮಿಗಳವರ ಚರಣಕಮಲಗಳಲ್ಲಿ ನಮೋಸ್ತುಪತ್ರವನ್ನು ಅರ್ಪಿಸಲಾಯಿತು. ಪೂಜ್ಯ ಮಹಾಸ್ವಾಮಿಗಳವರ ಮಂಗಲ ಶೋಭಾಯಾತ್ರೆಯು ಪಟ್ಟಣದ ಪ್ರಮುಖ ಬೀದಿಗಳಲ್ಲಿ ಧರ್ಮಪ್ರಭಾವನಾಪೂರ್ವಕವಾಗಿ ನೆರವೇರಿತು. ಶೋಭಾಯಾತ್ರೆ ಮತ್ತು ರಜತೋತ್ಸವ ಸಮಾರಂಭದಲ್ಲಿ ಸರಗೂರು ಮತ್ತು ದೂರ ದೂರದ ಸಂಗಳಿಳದ ಆಗಮಿಸಿದ್ದ ಸಹಸ್ರ ಸಹಸ್ರ ಸಂಖ್ಯೆಯ ಜೈನ ಜೈನೇತರ ಭಕ್ತಾದಿಗಳು ಭಾಗವಹಿಸಿ ಸಮಾರಂಭಗಳಿಗೆ ಹೆಚ್ಚಿನ ಕಳೆಯನ್ನು ತಂದುಕೊಟ್ಟಿದ್ದರು.

ಸುದ್ದಿ – ಶ್ರೀಮಠಮೂಲದಿಂದ

## ಶ್ರೀ ಪಾರ್ಶ್ವನಾಥಸ್ವಾಮಿ ಶುದ್ಧ ಸಂಪ್ರೋಕ್ಷಣ ಮಹೋತ್ಸವ

ಸಸತ್ಯವಿದ್ಯಾತಪಸಾಂ ಪ್ರಣಾಯಕಃ ಸಮಗ್ರಧೀರುಗ್ರಕುಲಾಂಬರಾಂಶುಮಾನ್।
ಮಯಾ ಸದಾ ಪಾರ್ಶ್ವಜಿನಃ ಪ್ರಣಮ್ಯತೇ ವಿಲೀನಮಿಥ್ಯಾಪಥದೃಷ್ಟಿವಿಭ್ರಮಃ॥

ಬೆಳ್ತಂಗಡಿ ನೆರಿಯಗ್ರಾಮದ ಬೈಲಂಗಡಿ ಪಾರ್ಶ್ವಥಸ್ವಾಮಿಯವರ ದೇವಾಲಯದ ಜೀರ್ಣೋದ್ಧಾರವು ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆರವರಾದ ನಮ್ಮ ಮಹಾಮಾತೃಶ್ರೀರವರಾದ ಶ್ರೀಮತಿ ರತ್ನಮ್ಮನವರಿಂದ ನೆರವೇರಿ ತತ್ಪ್ರಯುಕ್ತ ಶುದ್ಧ ಮಹಾಸಂಪ್ರೋಕ್ಷಣ ಉತ್ಸವವು ೧೭-೨-೮೮ರಿಂದ ೧೯-೨-೮೮ರ ಪರ್ಯಂತ ನೆರವೇರಿತು. ಧರ್ಮಬಂಧುಗಳು ಆಗಮಿಸಿ ತೀರ್ಥಂಕರರ ಕೃಪೆಗೆ ಪಾತ್ರರಾಗಿ ಉತ್ಸವವನ್ನು ಸಾಂಗಗೊಳಿಸಿ ಶಾಸನದೇವತೆಗಳ ಕೃಪೆಗೆ ಪಾತ್ರರಾದರು.

# ಅಖಿಲ ಕರ್ನಾಟಕ ೩ನೇ ಜೈನ ಸಾಹಿತ್ಯ ಸಮ್ಮೇಳನದ

# ಅಧ್ಯಕ್ಷ ಭಾಷಣ

"ಮೋಕ್ಷ ಮಾರ್ಗಸ್ಯ ನೇತಾರಂ ಭೇತ್ತಾರಂ ಕರ್ಮಭೂಭೃತಾಂ ।
ಜ್ಞಾತಾರಂ ವಿಶ್ವತತ್ವಾನಾಂ ವಂದೇ ತದ್ಗುಣಲಬ್ಧಯೇ" ॥

ಪೂಜ್ಯರೆ,

ಮಾನ್ಯರಾದ ಹಿರಿಯ ಹಾಗೂ ಕಿರಿಯ ಧರ್ಮಬಾಂಧವರೆ, ಭಗಿನಿಯರೇ ಪ್ರತಿಜೀವಿಗೂ ಅದರ ಕರ್ಮಕ್ಕೆ ಅನುಸಾರವಾಗಿ ಹಿತ, ಅಹಿತ ಸಂಗತಿಗಳು ಜರಗುವಂತೆ ಆ ಜೀವಿಗೆ ಹೊಟ್ಟೆಹೊರೆದುಕೊಳ್ಳುವ ಮಾರ್ಗವೂ ನಿರ್ದಿಷ್ಟವಾಗಿ ಒಂದೇ ಇರುತ್ತದೆಂದು ನನ್ನ ನಂಬಿಕೆ. ಈ ಹಿನ್ನೆಲೆಯಲ್ಲಿ, ನನ್ನ ಹೊಟ್ಟೆಹೊರೆದುಕೊಳ್ಳಲು ನನ್ನ ಕರ್ಮ ತಂದ ದಾರಿ- ಶಿಕ್ಷಕನಾಗಿರುವುದು. ಶಿಕ್ಷಕನೆಂದರೆ ಕೇವಲ ಕಲಿಸುವುದಷ್ಟೇ ಅಲ್ಲ, ಕಲಿಯುವುದೂ ಶಿಕ್ಷಕನ ಮೊದಲ ಕೆಲಸ. ತನಗೆ ಗೊತ್ತಿಲ್ಲದ್ದನ್ನು ಅನ್ಯರಿಗೆ ಹೇಳಲು ಅದು ಹೇಗೆ ಸಾಧ್ಯ ? ಅದರಂತೆ ತಾನು ಮಾಡದ್ದನ್ನು ಅನ್ಯರು ಮಾಡಲಿ ಅಥವಾ ತಾನು ಮಾಡುತ್ತಿರುವುದನ್ನು ಅನ್ಯರು ಮಾಡಬಾರದೆಂದು ಬಯಸುವುದೂ ತಪ್ಪು. ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು "ಮಾಸ್ತರಿಕೆ" ಮಾಡಬಯಸಿದ ನಾನು ಹಲವಾರು ವರುಷಗಳ ಅವಧಿಯಲ್ಲಿ ಹಲವಾರು ಗ್ರಂಥಗಳನ್ನು ಓದುವುದು ಅನಿವಾರ್ಯವಾಯಿತು. ಕಲಿಸುವುದರ ಜೊತೆಗೆ ಬರೆಯುವುದನ್ನೂ, ಅಪ್ರಕಟಿತ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸುವ ಕೆಲಸವನ್ನೂ ಅಂಟಿಸಿಕೊಂಡುದರ ಫಲವಾಗಿ ನನ್ನ ಶುಭಕರ್ಮದ ಫಲವಾಗಿ, ನಾನು ನಾಲ್ಕಾರು ಪುಸ್ತಕಗಳನ್ನು ಹೊರತರುವುದು ಜೊತೆಗೆ, ಅಲ್ಲಲ್ಲಿ ಆಗಾಗ ಕೆಲವು ಲೇಖನಗಳನ್ನು ಬರೆಯುವುದರ ಜೊತೆಗೆ, ಮಾತನಾಡುವ ಕಾಯಕವನ್ನೇ ಮಾಡುತ್ತಿರುವುದರಿಂದ, ಹಲವಾರು ಕಡೆ ಭಾಷಣ ಮಾಡಿದ್ದೂ ಉಂಟು. ಇದೆಲ್ಲವೂ ಹೊಟ್ಟೆಹೊರೆದುಕೊಳ್ಳಲು ಕೈಕೊಂಡ ಕೆಲಸದ ಅಂಗವಾಗಿಯೇ ನಾನು ಮಾಡಿದ ಕೆಲಸವೇ ಹೊರತು ಅನ್ಯಥಾ ಇಲ್ಲ. ಹೀಗೆ ನಾನು ಮಾಡಿದ ಅಲ್ಪ ಕೆಲಸವನ್ನೇ ಸಾಸುವೆಕಾಳಿನಲ್ಲಿ ಸಾಗರವನ್ನೇ ಕಾಣುವಂತೆ ಸಹೃದಯರಾದ ತಾವು ಈ ಅಲ್ಪಕಾರ್ಯವನ್ನೇ ದೊಡ್ಡದಾಗಿ ಕಂಡು, ನನ್ನನ್ನು ಸನ್ಮಾನಿಸುತ್ತಿರುವುದಕ್ಕಾಗಿ, ನಾನು ತಮಗೆಲ್ಲ ಉಪಕೃತನಾಗಿದ್ದೇನೆ; ಹೃತ್ಪೂರ್ವಕನಂದನೆಗಳನ್ನು ಸಲ್ಲಿಸುತ್ತೇನೆ.

ಸಾಮಾನ್ಯವಾಗಿ, ಇಂತಹ ಸಮ್ಮೇಳನದ ಅಧ್ಯಕ್ಷನಾದವನು, ನಾಲ್ಕು ಮಾತುಗಳನ್ನು ಆಡುವುದು ರೂಢಿಯಾಗಿ ಬಂದಿದೆಯಲ್ಲದೆ, ನಮ್ಮ ಪರಂಪರೆಯನ್ನು ನೆನೆಯುವುದೂ ವಾಡಿಕೆಯಾಗಿದೆ. ಸಂಪ್ರದಾಯವನ್ನು ಮುರಿಯುವ ಧೈರ್ಯ

ಮಾಡದೆ, ನಾನೂ, ಸ್ವಲ್ಪದರಲ್ಲಿಯೇ, ನಮ್ಮ ಪರಂಪರೆಯ ರೂಪರೇಷೆಗಳನ್ನು ಗುರುತಿಸಲು ಪ್ರಯತ್ನಿಸಿದ್ದೇನೆ.

ಜಗತ್ತಿನ ಹಲವಾರು ಮುಖ್ಯ ಧರ್ಮಗಳಲ್ಲಿ ಜೈನ ಧರ್ಮವೂ ಒಂದು ಪ್ರಮುಖ ಧರ್ಮವಾಗಿದೆಯಲ್ಲದೆ, ತನ್ನದೇ ಆದ ವೈಜ್ಞಾನಿಕ ತತ್ವದ ಹಿನ್ನೆಲೆಯಲ್ಲಿ ವೈಶಿಷ್ಟ್ಯಪೂರ್ಣವೂ ಆಗಿದೆ ಈ ಧರ್ಮ, ಭಾರತದ ಸಾಹಿತ್ಯಿಕ, ರಾಜಕೀಯ ಧಾರ್ಮಿಕ, ಸಾಂಸ್ಕೃಕ ಹಿನ್ನೆಲೆಯಲ್ಲಿ, ಬಹು ಪ್ರಾಚೀನಕಾಲದಿಂದಲೇ, ಮಹತ್ವದ ಪಾತ್ರವನ್ನು ಆಡುತ್ತ ಬಂದು, ಮರೆಯಲಾರದ ಕೊಡುಗೆಗಳನ್ನು ಇತ್ತಿದೆ-ತನ್ನ ಹೆಸರನ್ನು ಇತಿಹಾಸದ ಪುಟಗಳಲ್ಲಿ ಭದ್ರಪಡಿಸಿದೆ ಕರ್ನಾಟಕದ ವಿಷಯಕ್ಕೆ ಬಂದರೂ ಕೂಡ, ಜೈನ ಧರ್ಮವು. ಮೇಲೆ ಉಲ್ಲೇಖಿಸಿದ ಎಲ್ಲಾ ಕ್ಷೇತ್ರಗಳಲ್ಲಿ ಅಜರಾಮರ ವಾದ ಕಾರ್ಯವನ್ನು ಮಾಡಿದೆ ಕರ್ನಾಟಕಕ್ಕೆ ಹೊರಗಿನಿಂದ ಬಂದವರೆಂದು ಹೇಳಿಸಿ ಕೊಳ್ಳುತ್ತಿದ್ದರೂ, ಒಮ್ಮೆ ಕರ್ನಾಟಕದಲ್ಲಿ ಬಂದ ಜೈನರು, ಕನ್ನಡನಾಡಿನ ಮಣ್ಣಿನ ಮಕ್ಕಳಾಗಿಯೇ ನಿಂತರು. ಆಗ ಕರ್ನಾಟಕದಲ್ಲಿ ಮನೆ ಮಾತು ಕನ್ನಡವೇ ಆಗಿದ್ದರೂ, ತಜ್ಞರ ಅಲಕ್ಷ್ಯಕ್ಕೆ ಗುರಿಯಾಗಿತ್ತು. ಹೀಗಾಗಿ ಕನ್ನಡದಲ್ಲಿ ಸಾಹಿತ್ಯ ರಚನೆ ಆಗುತ್ತಿರ ಲಿಲ್ಲ. ಮಾತೃಭಾಷೆಯಲ್ಲಿ ಹೇಳಿದರೆ ಮಾತ್ರ ಅದು ನೇರವಾಗಿ ಸಾಮಾನ್ಯನಿಗೆ ಅರ್ಥ ವಾಗುತ್ತದೆ ಎಂಬ ಸೂತ್ರವನ್ನು ಮನಗಂಡ ಜೈನ ವಿದ್ವಾಂಸರು, ಕನ್ನಡದಲ್ಲೇ ಗ್ರಂಥ ರಚನೆಗೆ ಆರಂಭಮಾಡಿದರು ಮತ್ತು ಬಹುಬೇಗನೆ ತಮಗಿದ್ದ ಸಂಸ್ಕೃತ, ಪ್ರಾಕೃತ ಭಾಷೆಗಳ ಪ್ರಭುತ್ವದ ಹಿನ್ನೆಲೆಯಲ್ಲಿ ಕನ್ನಡ ಭಾಷೆಯ ಶಬ್ದಕೋಶವನ್ನು ಹೆಚ್ಚಿಸಿ ಕ್ರಿ ಶ. ಹತ್ತನೆಯ ಶತಮಾನಕ್ಕೆ ಬರುವಷ್ಟರಲ್ಲಿ, ಸಂಸ್ಕೃತ, ಪ್ರಾಕೃತದ ಮಹಾ ಕಾವ್ಯಗಳಿಗೆ, ಸರಿದೊರೆಯಡಿಗುವಂತಹ ಮಹಾನ್ ಗ್ರಂಥಗಳನ್ನು ರಚಿಸಿ ಕೃತಕೃತ್ಯ ರಾದರು ಹಾಗೂ ಕನ್ನಡದಲ್ಲಿ ಮೊದಲಬಾರಿಗೆ ಸಾಹಿತ್ಯ ರಚಿಸಿದವರು ಜೈನಕವಿಗಳೇ ಎಂಬ ಶ್ರೇಯಸ್ಸಿಗೂ ಪಾತ್ರರಾದರು. ಕ್ರಿ. ಶ. ೧೦ನೆಯ ಶತಮಾನದಲ್ಲಿ ರಚಿತವಾದ ಉತ್ತಮ ಕೃತಿಗಳನ್ನು ಲಕ್ಷಿಸಿ, ಕನ್ನಡ ಸಾಹಿತ್ಯ ಚರಿತ್ರೆಯ ಇತಿಹಾಸದಲ್ಲಿ ಈ ಶತಮಾನವನ್ನು "ಸುವರ್ಣಯುಗ"ವೆಂದು ಕರೆಯಲಾಗಿದೆಯಲ್ಲದೆ, ಈ ಕಾಲದಲ್ಲಿ ಬಾಳಿದ ಮಹಾಕವಿ ಪಂಪ, ಪೊನ್ನ, ರನ್ನರನ್ನು "ರತ್ನತ್ರಯ"ರೆಂದು ಕರೆಯಲಾಗಿದೆ ಸಮ್ಯಕ್‌ದರ್ಶನ, ಜ್ಞಾನ, ಚಾರಿತ್ರ ಇವುಗಳ ಹಿನ್ನೆಲೆಯಲ್ಲಿ ಈ ಮೂವರು ಕವಿಗಳನ್ನು "ರತ್ನತ್ರಯ"ರೆಂದಿದ್ದು ಶಮಂಜಸವಾಗಿದೆ. ಆದರೆ ಇವರಿಗಿಂತ ಮೊದಲು ಹಾಗೂ ಇವರ ನಂತರ ಆದ ಹಲವಾರು ಜೈನ ಕವಿಗಳನ್ನು ನೆನೆದುಕೊಂಡಾಗ, ಇನ್ನೂ ಹಲವು ಜೈನ ಕವಿಗಳು 'ರತ್ನ' ರೆನ್ನಿಸಿಕೊಳ್ಳಲು ಅರ್ಹರಾಗಿದ್ದಾರೆಂಬುದನ್ನು ವಿವರಿಸಿ ಹೇಳ ಬೇಕಾಗಿಲ್ಲ. ಕಾವ್ಯಗಳನ್ನೂ, ಶಾಸ್ತ್ರಗಳನ್ನೂ ಬರೆದ ಜೈನ ಕವಿಗಳು, ಕನ್ನಡ ಗ್ರಂಥ ಸಾಹಿತ್ಯದ ಸಿರಿಯನ್ನು ಹೆಚ್ಚಿಸುವಲ್ಲಿ ಮಹತ್ವದ ಕಾಣಿಕೆಗಳನ್ನು ನೀಡಿದ್ದಾರೆ. ಕನ್ನಡ ಸಾಹಿತ್ಯಕ್ಕೆ, ರಾಷ್ಟ್ರಕವಿ ಕುವೆಂಪು ಅವರು ಹೇಳಿದಂತೆ, "ಚಕ್ರವರ್ತಿಯಾದ

ನೃಪತುಂಗ, ನಾಗವರ್ಮದ್ವಯರು, "ಕರ್ಣಾಟಕೃತಿಗೆ ಸೀಮಾಪುರುಷರ್" ಎಂದೆನಿಸಿಕೊಂಡ ನೇಮಿ, ಜನ್ನರು, ಜೈನರಾಮಾಯಣವನ್ನು ಕನ್ನಡಕ್ಕೆ ಕೊಟ್ಟ ನಾಗಚಂದ್ರ ಶಸ್ತ್ರ-ಶಾಸ್ತ್ರಗಳಲ್ಲಿ ಬಲ್ಲಿದನಾಗಿ, ಮಹಾಪುರಾಣವನ್ನು ಗದ್ಯದಲ್ಲಿ ಬರೆದುದಲ್ಲದೆ, ಶ್ರವಣಬೆಳ್ಗೊಳದಲ್ಲಿ ಶಿಲ್ಪಕಲೆಯೇ ಮೈವೆತ್ತುನಿಂತಂತೆ ಭಗವಾನ್ ಬಾಹುಬಲಿಯನ್ನು ಕೆತ್ತಿಸಿದ ಕಲಿ-ಕವಿ ಚಾವುಂಡರಾಯ, (ಗದ್ಯಗ್ರಂಥದ ಹಿನ್ನೆಲೆಯಲ್ಲಿ ವಡ್ಡಾರಾಧನೆಯ ಕರ್ತೃವನ್ನೂ ನೆನೆಯಬೇಕು), ಕೇವಲ ಕನ್ನಡದಲ್ಲೇ ಗ್ರಂಥ ಬರೆಯುವ ಸಾಹಸ ಮಾಡಿದ ಕವಿ ಆಂಡಯ್ಯ, ಹತ್ತು ಸಾವಿರಕ್ಕೂ ಹೆಚ್ಚು ಪದ್ಯಗಳಿರುವ ಮಹಾನ್‌ಗ್ರಂಥ "ಭರತೇಶವೈಭವ" ಗ್ರಂಥವನ್ನು ಸಾಂಗತ್ಯದಲ್ಲಿ ರಚಿಸಿದ ಕವಿ ರತ್ನಾಕರ ವರ್ಣಿ ಹಾಗೂ ಚಂಪೂ, ಷಟ್ಪದಿ, ಸಾಂಗತ್ಯ ಮೊದಲಾದ ರೂಪಗಳಲ್ಲಿ ತಮ್ಮ ಕಾವ್ಯ ರಚಿಸಿದ ಇನ್ನೂ ಹಲವಾರು ಜೈನಕವಿಗಳು- ಒಬ್ಬೊಬ್ಬರೂ ಒಂದೊಂದು ಅಮೌಲ್ಯ ರತ್ನಗಳೇ ಆಗಿದ್ದಾರೆ. ಈ ಎಲ್ಲ ಕವಿಗಳ ಕೃತಿಗಳ ವಿವರವಾದ ಪರಿಚಯವನ್ನು ಮಾಡುವ ಅಗತ್ಯವಿಲ್ಲೆಂದು ಭಾವಿಸಬಹುದು.

ಕನ್ನಡಕ್ಕೂ ಜೈನರಿಗೂ "ಬಿಟ್ಟೇನೆಂದರೂ ಬಿಡಲಾರದ ನಂಟು; ಗಂಟು ರಾಜ್ಯ ಹೋದರೂ ರಾಜರ ಆಶ್ರಯ ತಪ್ಪಿದರೂ, ತಮ್ಮ ನಾಡು, ನುಡಿಗಳ ಸೇವೆಯನ್ನು ಮುಂದುವರಿಸಿಕೊಂಡೇ ಬಂದಿದ್ದಾರೆ ಜೈನರು! ಕಾಲಕಾಲಕ್ಕೆ ಆಗಿಹೋಗಿರುವ ಕವಿಗಳ ಪರಿಚಯ ಮಾಡುತ್ತ ಹೋಗುವುದು ಇಲ್ಲಿ ಅಪ್ರಸ್ತುತ. ಸಾಹಿತ್ಯ ರಚನೆಯ ಈ ಪವಿತ್ರ ಕಾರ್ಯದಲ್ಲಿ ಶ್ರಮಣರೂ ಅಂದರೆ ಮುನಿಗಳೂ ಹಾಗೂ ಶ್ರಾವಕರೂ ಕಾಣಿಕೆ ಸಲ್ಲಿಸುತ್ತ ಬಂದಿದ್ದಾರೆ. ಕನ್ನಡ ಸಾಹಿತ್ಯದ ನಿರಂತರ ಪ್ರವಾಹದಲ್ಲಿ ಜೈನ ಕವಿಗಳ, ಸಾಹಿತಿಗಳ ಕಾಣಿಕೆ, ದೊಡ್ಡ ನದಿಯರೂಪದಲ್ಲಿ ಆಗದಿದ್ದರೂ, ಸಣ್ಣ, ಅಂದರೆ ಸ್ವಚ್ಛ ಝುರಿಯ ರೂಪದಲ್ಲಿ ಸತತವಾಗಿ ಕಾಣಿಸುತ್ತ ಬಂದಿದೆ-ಬರುತ್ತಿದೆ ಎಂಬುದು ಗಮನಾರ್ಹ!! ಈ ದೃಷ್ಟಿಯಿಂದ, ನಮ್ಮ ಪೂರ್ವಾಚಾರ್ಯರ ಪುರಾಣಗಳನ್ನು, ತತ್ವಗ್ರಂಥಗಳನ್ನು ಹೊಸಗನ್ನಡಕ್ಕೆ ಅನುವಾದಿಸಿ ಬಹು ಶ್ಲಾಘನೀಯ ಕಾರ್ಯ ಮಾಡಲಾಗಿದೆ. ಪಾಂಡಿತ್ಯವೇ ಮೈವೆತ್ತುನಿಂತಂತೆ ಇದ್ದ ಈ ವಿದ್ವಾಂಸರು ಅಕ್ಷರಶಃ "ವಿದ್ವನ್ಮಣಿ"ಗಳೇ ಅರ್ಥಾತ್ "ವಿದ್ಯೆಯ ರತ್ನ"ಗಳೇ ಆಗಿದ್ದರು. ಈ ಸಾಲಿನಲ್ಲಿ ಅನೇಕರ ಹೆಸರುಗಳನ್ನು ಉಲ್ಲೇಖಿಸಬಹುದು . ದಿವಂಗತರುಗಳಾದ ಎ. ಶಾಂತಿರಾಜ. ಶಾಸ್ತ್ರಿ, ಎ. ಸುಬ್ಬಯ್ಯಶಾಸ್ತ್ರಿ, ಪಂಡಿತ, ಕೆ. ಭುಜಬಲಿಶಾಸ್ತ್ರಿ, ವರ್ಧಮಾನಶಾಸ್ತ್ರಿ, ಲೋಕನಾಥಶಾಸ್ತ್ರಿ, ಮುಂತಾದ ಇನ್ನೂ ಹಲವರ ಹೆಸರುಗಳೊಂದಿಗೆ, ಜೈನರು ಎಂದೂ ಮರೆಯಲಾರದ ಮಹನೀಯರೆಂದರೆ, ಸಾಹಿತ್ಯಕ್ಕೆ ಮತ್ತು ಸಾಹಿತಿಗಳಿಗೆ ಪ್ರೋತ್ಸಾಹ ನೀಡಿದ ದಿವಂಗತ ಮಂಜಯ್ಯ ಹೆಗ್ಗಡೆ, ಅವರು (ಈ ಕಾರ್ಯ ಧರ್ಮಸ್ಥಳದಲ್ಲಿ ಈಗಲೂ ಮುಂದುವರಿದಿದೆ). ದಿವಾನ್ ಬಹಾದ್ದೂರು ಎ. ಪಿ. ಚೌಗುಲೆ,

ಡಾ|| ಎ. ಎನ್. ಉಪಾಧ್ಯೆ, ಮಿರ್ಜಿ ಅಣ್ಣಾರಾಯರು! ! ಡಾ|| ಎ. ಎನ್. ಉಪಾಧ್ಯೆ ಅವರು ತಮ್ಮ ವಿದ್ವತ್ಪೂರ್ಣ ಮುನ್ನುಡಿಗಳಿಂದ ಸಂಪಾದಿಸಿ ಪ್ರಕಟಿಸಿದ ಗ್ರಂಥಗಳಿಂದಾಗಿ ಜೈನಧರ್ಮ ಹಾಗೂ ತತ್ವ, ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ರಂಗದಲ್ಲಿ ಬೆಳಗುವಂತಾಯಿತು. ಶ್ರೀ ಮಿರ್ಜಿ ಅಣ್ಣಾರಾಯರು ಕೆಲವು ಪ್ರಾಚೀನ ಗ್ರಂಥಗಳನ್ನು ಪ್ರಕಟಿಸಿದ್ದಲ್ಲದೆ "ಜೈನಧರ್ಮ"ವೆಂಬ ಉದ್ಗ್ರಂಥವನ್ನು ಕನ್ನಡಿಗರಿಗೆ ಕೊಟ್ಟ ಶ್ರೇಯಸ್ಸಿಗೆ ಪಾತ್ರರಾಗಿದ್ದಾರೆ. ಅಲ್ಲದೆ ಅವರ ಸಾಹಿತ್ಯಕೃಷಿ ಆಧುನಿಕ ಕನ್ನಡ ಸಾಹಿತ್ಯದ "ಕಾದಂಬರಿ," "ಕಥೆ," "ಕವನ," "ಪ್ರವಾಸ ಸಾಹಿತ್ಯ," "ಮಕ್ಕಳ ಸಾಹಿತ್ಯ" ಮೊದಲಾದ ರೂಪಗಳಲ್ಲಿ ಕವಲೊಡೆದು ಅವರ ಹೆಸರು ಚಿರಸ್ಮರಣೀಯ ವಾಗುವಂತಾಗಿದೆ ಡಾ|| ಉಪಾಧ್ಯೆ ಹಾಗೂ ಶ್ರೀ ಅಣ್ಣಾರಾಯರು ಮಾಡಿದ ಕಾರ್ಯ ಆದರ್ಶಪ್ರಾಯವಾದುದು. ಬೆಳೆಯಬೇಕೆಂಬ ಎಳೆಯ ವಿದ್ವಾಂಸರು ಇವರನು ಅನುಸರಿಸಿ ಕಾರ್ಯ ಮಾಡಿ, ಅವರ ಹಂತಕ್ಕೆ ಏರಲು ಪ್ರಯತ್ನಿಸಿದರೆ ಸ್ವಂತ ಹಿ ಹಾಗೂ ಸಮಾಜದ ಗೌರವ ಎರಡೂ ಸಾಧಿಸುವುವೆಂದು ನನ್ನ ನಂಬಿಕೆ.

ಮೇಲ್ಕಾಣಿಸಿದ ಮಹನೀಯರ ಜಾಡಿನಲ್ಲಿಯೆ ಉತ್ತಮ ಕಾರ್ಯವನ್ನು ಈಗಲೂ ಹಲವರು ಮುಂದುವರಿಸಿರುವುದು ಸಂತಸದ ಸಂಗತಿಯಾಗಿದೆ ಶ್ರೀ ಎಂ ಸಿ. ಪದ್ಮನಾಭಶರ್ಮ, ಡಿ ಪದ್ಮನಾಭಶರ್ಮ ಅವರೊಂದಿಗೆ, ನ್ಯಾಯಮೂರ್ತಿಗಳಾಗಿ, ಸಾಹಿತ್ಯಕ್ಕೆ ತಮ್ಮ ಸೇವೆಸಲ್ಲಿಸಿದ ದಿ, ಟಿ, ಕೆ, ತುಕೋಳ; ಸಲ್ಲಿಸುತ್ತಿರುವ ಶ್ರೀ ಸೇಕ, ಮಮಿರಾಜಮಲ್ಲ ಅವರನ್ನೂ, ಪ್ರಾಧ್ಯಾಪಕರಾಗಿ ಜೈನಧರ್ಮಕ್ಕೆ, ತತ್ವಕ್ಕೆ ಸಾಹಿತ್ಯಕೆನ ಕಾಣಿಕೆ ಸಲ್ಲಿಸುತ್ತಿರುವ ಡಾ|| ಟಿ: ಜಿ. ಕಲಘಟಗಿ, ಪ್ರಾಧ್ಯಾಪಕ ಜಿ, ಬ್ರಹ್ಮಪ್ಪ ಪ್ರಾಧ್ಯಾಪಕ ಹಂಪನಾ, ಪ್ರಾಧ್ಯಾಪಕಿ ಕಮಲಾಹಂಪನಾ, ಪ್ರಾಧ್ಯಾಪಕ ಎ. ಎಸ್ ಧರಣೇಂದ್ರಯ್ಯ, ಡಾ|| ಎಂ. ಡಿ ವಸಂತರಾಜ್, ಪ್ರಾ|| ಜಯಚಂದ್ರ, ಪ್ರಾ|| ಶುಭ ಚಂದ್ರ. ಪ್ರಾಧ್ಯಾಪಕ ಎಸ್. ಪಿ. ಪಾಟೀಲ, ಪ್ರಾಧ್ಯಾಪಕಿ ಪ್ರೇಮಕುಮಾರಿ ಶ್ರೀಮತಿ ಪೂರ್ಣಿಮಾ ಗುಡಿಬಂಡೆ, ಶ್ರೀಮತಿ ಕೌಸಲ್ಯ ಧರಣೇಂದ್ರಯ್ಯ, ಡಾ|| ಶಾಂತಿ ನಾಥದೇಸಾಯಿ ಮೊದಲಾದವರನ್ನು ನೆನೆಯಬೇಕು ಪ್ರಾಧ್ಯಾಪಕ ವೃತ್ತಿಯಲ್ಲಿಯೇ ಇದ್ದು ಕನ್ನಡಕ್ಕೆ ಜೈನಧರ್ಮಕ್ಕೆ ಉತ್ತಮಕೊಡುಗೆಯನ್ನು ಕೊಟ್ಟು, ಅವರಿಂದ ಕನ್ನಡಿಗರು ಇನ್ನೂ ಹೆಚ್ಚಿನ ಕೊಡುಗೆಯನ್ನು ನಿರೀಕ್ಷಿಸುತ್ತಿರುವ ಸಮಯದಲ್ಲಿ ಅಕಾಲ ಮೃತ್ಯುವಿಗೆ ಬಲಿಯಾಗಿ ಹೋದ ನನ್ನ ಸ್ನೇಹಿತರಾಗಿದ್ದ ಪ್ರಾಧ್ಯಾಪಕ ಬಿ, ಬಿ, ಮಹೀಷವಾಡಿಯವರ ಸೇವೆಯನ್ನು ಪ್ರತ್ಯೇಕವಾಗಿ ನೆನೆದುಕೊಳ್ಳುತ್ತೇನೆ. ಸಮಾಜ ಸೇವೆಯನ್ನಿಟ್ಟುಕೊಂಡು, ವೈದ್ಯಕೀಯ ಕ್ಷೇತ್ರದಲ್ಲಿದ್ದು, . ಜ್ಯೋತಿಷ್ಯವನ್ನವಲಂಬಿಸಿ ಕೊಂಡು, ಸ್ವಂತ ವ್ಯಾಪಾರ ಉದ್ಯೋಗಗಳನ್ನು ಮಾಡಿಕೊಂಡು ಹಾಗುತ್ತ, ಜೈನ ಧರ್ಮ, ಸಾಹಿತ್ಯಗಳಿಗೆ ಕೊಡುಗೆಯನ್ನು ನೀಡುತ್ತಿರುವವರು ಅನೇಕರಿದ್ದಾರೆ.

ಚಾವುಂಡರಾಯ ಅಂದು ಕೆತ್ತಿಸಿದ ಬಾಹುಬಲಿಯನ್ನು ಕುರಿತು ಚಲನಚಿತ್ರವನು ತೆಗೆದು, ಚಾವುಂಡರಾಯ ಪುರಾಣವನ್ನು ರಚಿಸಿದ ಆ ಬಾಹುಬಲಿಯನ್ನು ಕೆತ್ತಿಸಿ "ಮಹಾಶಿಲ್ಪಿ"ಯ ಮಹಾಪರಿಚಯುವನ್ನು ಮಾಡಲು ಪ್ರಯತ್ನಿಸಿದ ರಾಜಕೀಯ ಸಾಮಾಜಿಕ ಕಾರ್ಯಕರ್ತ ಸಾಹಿತಿ ಶ್ರೀ ಹೆಚ್, ಬಿ, ಜ್ವಾಲ್ನಯ್ಯನವರನ್ನು ಇಲ್ಲಿ ತಪ್ಪದೇ ನೆನೆಯಬಹುದು ಲೇಖನ ಬಹಳೇ ಬೆಳದೀತೆಂಬ ಭೀತಿಯಿಂದ ಇಲ್ಲಿ ಎಲ್ಲರ ಹೆಸರುಗಳನ್ನು ಕೊಡಲು ಸಾಧ್ಯವಾಗಿಲ್ಲ ಇಲ್ಲಿ ಹೆಸರಿಸಲಾರದವರು ನನ್ನನ್ನು ಕ್ಷಮಿಸ ಬೇಕು, ಮತ್ತು ತಪ್ಪುಭಾವನೆಗೆ ಆಸ್ಪದಕೊಡಬಾರದು.

ಅಂತು, ಕನ್ನಡ ಭಾಷೆ ಇನ್ನೂ ಬಾಲ್ಯಾವಸ್ಥೆಯಲ್ಲಿದ್ದಾಗಲೇ ಅದನ್ನು ಬೆಳೆಯಿಸಿಕೊಂಡು ಬಂದ ಜೈನರು, ಅದರ ಬೆಳವಣಿಗೆಯೊಂದಿಗೆ, ಸಮಯಕ್ಕೆ ತಕ್ಕಂತೆ ಸ್ಪಂದಿಸುತ್ತ ಕನ್ನಡದ ಸೇವೆಮಾಡುತ್ತ ಬಂದಿದ್ದಾರೆ–ಬರುತ್ತಿದ್ದಾರೆ; ಎಂಬುದು ಸ್ಪಷವಾಗಿದೆ. ಇದು ಸ್ತುತ್ಯವಾದ ಕಾರ್ಯವೇ ಸರಿ !

ಆದರೆ ಇಂದು ಕನ್ನಡದ ಸೇವೆಯನ್ನು ಮುಂದುವರಿಸುತ್ತಿರುವವರು ಬಹು ಜಾಣ್ಮೆಯಿಂದ ಎಚ್ಚರದಿಂದ ಮುಂದುವರಿಯುವುದು ಲೇಸೆಂದು ಅನ್ನಿಸುತ್ತದೆ. ಇಂದ ಜಗತ್ತಿನಾದ್ಯಂತ ಹೊಸಗಾಳಿ ಬೀಸುತ್ತಿದೆ. ವಿಜ್ಞಾನ ಯುಗ, ತಾಂತ್ರಿಕ ಯುಗ ಎಂದು ಕರೆಯಲ್ಪಡುತ್ತಿರುವ ಇಂದು ನಾವು ಸುಧಾರಿಸಿದ್ದೇವೆಂದು ಭಾವಿಸುತ್ತಿದ್ದೇವೆ; ನಿಜ ! ಉಡಿಗೆ ತೊಡಿಗೆ, ದೇಹದ ಅಲಂಕಾರ, ಊಟ ಉಪಚಾರ, ಪ್ರವಾಸದ ಅನುಕೂಲತೆ ಮೊದಲಾದುವುಗಳ ಹಿನ್ನೆಲೆಯಲ್ಲಿ ಬದಲಾವಣೆಗಳು ಉಂಟಾಗಿವೆ ಅದೇ ರೀತಿ ವಿದ್ಯಾಪ್ರಸಾರದ ಅನುಕೂಲತೆಗಳಿಂದಾಗಿ, ನಮಗೆ ವಿಶ್ವದ ನಾನಾ ಭಾಷೆ ಸಾಹಿತ್ಯಗಳ ಪರಿಚಯುವೂ ಆಗುತ್ತಲಿದೆ ಕಾಲಕ್ಕೆ ತಕ್ಕಂತೆ ನಾವು ಇವೆಲ್ಲವುಗಳನೂ ಉಪಯೋಗಿಸಿಕೊಳ್ಳಬೇಕು; ಅಭ್ಯಸಿಸಲೇಬೇಕು; ಜೈನರಾದವರಂತೂ ತಪ್ಪದೇಕೆ ಮಾಡಬೇಕು. ಏಕೆಂದರೆ ಪ್ರಾಚೀನಕಾಲದಲ್ಲಿಯೂ ಸಹ, ಜೈನರು, ತಾವು ನೆಲಸಿದ ನೆಲ, ಜಲ, ಭಾಷೆಗಳಿಗೆ ಅಂಟಿಕೊಂಡು, ಅದನ್ನು ಅಳವಡಿಸಿಕೊಂಡು, ಜನೋಪಕಾರವನ್ನು ಮಾಡುತ್ತಲೇ ಬಂದರು ಆದರೆ ಅವರು ತಮ್ಮತನವನ್ನು ಬಿಡಲಿಲ್ಲ. ಅರ್ಥಾತ್ ತಮ್ಮ ಅಂತಸ್ಸತ್ವವನ್ನು ಸಡಿಲಿಸಿಕೊಳ್ಳಲಿಲ್ಲ ಇದನ್ನು ಇಂದಿನ ನಾವೂ ಗಮನಿಸಿದರೆ ಒಳ್ಳೆಯದು; ಎಂದು ಕಾಣುತ್ತದೆ ಏಕೆಂದರೆ ಹೊಸ ಗಾಳಿಯ ಸೆಳೆತಕ್ಕೆ ಸಿಕ್ಕಿ ನಾವು "ಕಾಲಕ್ಕೆ ತಕ್ಕಂತೆ ಕುಣಿಯಬೇಕು" ಎನ್ನುವ ಘೋಷಣೆ ಮಾಡವ ಪ್ರಯತ ನಡೆಸುತ್ತಿದ್ದೇವೆ ಬಾಹ್ಯ ಉಪಕರಣಗಳ ಉಪಯೋಗದಲ್ಲಿ ಕಾಲಕ್ಕೆ ತಕ್ಕಂತೆ ಬದಲಾವಣೆ ಮಾಡಿಕೊಳ್ಳುವಲ್ಲಿ ಯಾವ ತೊಂದರೆ. ತರಕಾರು ಬರಬೇಕಾಗಿಲ್ಲ. ಆದರೆ ಕಾಲ ಬದಲಾಗಿದೆಎನ್ನುವ ನೆಪದಲ್ಲಿ ನಾವು ನಮ್ಮತನವನ್ನು, ನಮ್ಮ ಅಂತಸ್ಸತ್ವವನು

ಕಳೆದುಕೊಳ್ಳಬೇಕಾಗಿಲ್ಲ ದೃಢಸಂಕಲ್ಪದ ಎದುರು ಕಾಲ ಏನು ಮಾಡಬಲ್ಲದು? ಹೊಸವಾತಾವರಣದಿಂದ ಹೊಸ ಹೊಸ ಸಾಹಿತ್ಯಗಳ ಅಭ್ಯಾಸದಿಂದ, ನಮ್ಮದೃಷ್ಟಿ ಕೋನಬದಲಾಗಬಾರದೇ ಎಂಬ ಪ್ರಶ್ನೆ ಬರಬಹುದು ಇದಕ್ಕೆ ಉತ್ತರ ದೃಷ್ಟಿಕೋನ ಬದಲಾಗಲಿ, ಆದರೆ ಅದೇ ವಿನಾಶಕಾರಿ ಆಗಿರದೆ( Destructive) ರಚನಾತ್ಮಕ Constructive) ಆಗಿರಲಿ ! ! ಈ ಮಾತನ್ನು ಹೇಳುವ ಉದ್ದೇಶವೆಂದರೆ- ಹಿಂದಿನದೆಲ್ಲ ಹೊಲ್ಲ" ಎಂಬ ಮನೋಭಾವನೆ ಇಂದಿನ ನಮ್ಮಲ್ಲಿ, ನಮಗೆ ಗೊತ್ತಾಗದೆ, ಮೊಳೆತು ಮರವಾಗುತ್ತಲಿದೆ ಈ ಮನೋಭಾವನೆ ಬೆಳೆಯಲು ಆಸ್ಪದ ಕೊಟ್ಟರೆ ನಾವು ದೊಡ್ಡ ತಪ್ಪು ಮಾಡಿದಂತಾಗುತ್ತದೆ. ಏಕೆಂದರೆ "ಹಿಂದೆ" ಇಲ್ಲದೇ "ಇಂದು" ಇಲ್ಲ, "ಇಂದು" ಇಲ್ಲದೆ "ನಾಳೆ' ಇಲ್ಲ ಮುಂದಿನವರ ಪ್ರಗತಿಗೆ ಇಂದಿನದು ಹೇಗೆ ಪೌಷ್ಟಿಕ ಆಹಾರವೋ ಹಾಗೆ ಇಂದಿನ ನಮಗೆ ಹಿಂದಿನವರ ಸಾಧನೆ, ಆಧಾರ ಸ್ಥಂಭ ಎಂಬುದನ್ನು ಮರೆಯಬಾರದು; ಒಬ್ಬರ ಹೆಗಲ ಮೇಲೆ ಒಬ್ಬರು ನಿಲ್ಲದೆ ಬರುವು ದಿಲ್ಲವೆಂದರೆ ಮುಂದಿನ ದಿಗಂತ ಕಾಣುವುದು ಹೇಗೆ? ಈ ಹಿನ್ನೆಲೆಯಲ್ಲಿ ಅನುನಿತ್ಯ ಬೆಳೆಯುತ್ತಿರುವ ಈಗಿನವಿಜ್ಞಾನ ಎಂಬ ವೃಕ್ಷಕ್ಕೆ ಹಿಂದಿನವರ ಸಾಧನೆ ಎಂಬ "ಗೊಬ್ಬರ" ಅಗತ್ಯ ಎಂಬುದನ್ನು ಅಲ್ಲಗಳೆಯಲು ಆಗುವುದೇ? ಕಾರಣ ನಾವು ಮೊದಲುಮಾಡಬೇಕಾದ ಅಗತ್ಯದ ಕೆಲಸವೆಂದರೆ-ನಮ್ಮ ಪೂರ್ವಾಚಾರ್ಯರು ಹಾಗೂ ಕವಿಪುಂಗವರು ಬರೆದಿಟ್ಟ ಸಾಹಿತ್ಯವನ್ನು ಬೆಳಕಿಗೆ ತರುವುದು ಪ್ರಾಚೀನ ಗ್ರಂಥ ಗಳೆಂದು ಇವುಗಳ ಬಗೆಗೆ ಅಸಡ್ಡೆ, ಅನಾದರ ತೋರಿಸದೆ, ಕವಿಯ ಕಾಲ, ದೇಶ, ಪರಿ ಸರ ಹಾಗೂ ಮತ ಇವುಗಳ ಹಿನ್ನೆಲೆಯಲ್ಲಿ, ಅವುಗಳನ್ನು ಸರಿಯಾಗಿ ಅಭ್ಯಸಿಸಿ, ನಮ್ಮ ಪ್ರಾಚೀನರ ಸಾಧನೆ, ಸಂಸ್ಕೃತಿಯನ್ನು ಈಗಿನವರಿಗೆ ಪರಿಚಯ ಮಾಡಿಕೊಡಬೇಕು, ನಮ್ಮವರು ಎಂಬ ಹಿನ್ನೆಲೆಯಲ್ಲಿ ಅವರನ್ನು ಆಕಾಶಕ್ಕೆ ಏರಿಸುವುದೂಬೇಡ ಕವಿ ಕಾಲದ ಕೂರು ಮಾನವರ ಏಳಿಗೆ ಆಗಲೆಂಬುದೇ ಅವನ ಆಶೆ ಈ ಹಿನ್ನೆಲೆಯಲ್ಲಿ ಹೊಸ ದೃಷ್ಟಿಕೋನದಿಂದಲೇ! ನೋಡಿಯೂ ಸಹ, ಅವರು ಇಂದಿನ ಪೀಳಿಗೆಗೆ ಪುಷ್ಟಿ ಯಾಗಲು ಕೊಟ್ಟ ಅಂಶಗಳೇನೆಂಬುದನ್ನು ತೋರಿಸಬೇಕು ಗ್ರಂಥ ಸಂಪಾದನಾ ಕಾರ್ಯದಲ್ಲಿ ಉದ್ವೇಗಕ್ಕೆ, ಆವೇಶಕ್ಕೆ ಅವಹೇಳನೆಗೆ ಆಸ್ಪದವಿಲ್ಲ; ಇರಬಾರದೆಂದು ಹೇಳುವುದೇ ನನ್ನ ಉದ್ದೇಶ. ಜೈನಾಚಾರ್ಯರ, ಜೈನಕವಿಗಳ ಪ್ರಾಚೀನ ಕೃತಿ ಗಳನ್ನು ಸಂಪಾದಿಸುತ್ತಿರುವ ನನ್ನ ಸ್ನೇಹಿತರು ನನ್ನ ಅಭಿಪ್ರಾಯದಲ್ಲಿ ದೋಷವಿದ್ದರೆ ಅನ್ಯಥಾಭಾವಿಸಬಾರದು

ಸರಿಯಾದ ಸಂದರ್ಭ ದೊರೆತಾಗ, ತನ್ನ ಮನಸ್ಸಿನ ದ್ವಂದ್ವವನ್ನು, ತನ್ನ ಪರವನ್ನು ಪಟನೆದುದು ತೋರಿಕೊಳ್ಳುವುದು, ವಿಚಾರಮಾಡಲು ಸಾಧ್ಯವಿದ್ದ ಜೀವಿಗೆ

(೩ನೇ ಪುಟದಲ್ಲಿ ಮುಂದುವರೆದಿದೆ)

ಓಂ ನಮಸ್ಸಿದ್ಧೇಭ್ಯಃ

# ತ್ರಿಲೋಕ ದರ್ಶನ

( ಕಳೆದ ಸಂಚಿಕೆಯಿಂದ ಮುಂದುವರೆದುದು )

ಲೇಖಕರು: ಡಿ. ಶ್ರೀಪತಿಜೋಯಿಸ್, ಭುವನಹಳ್ಳಿ.

ಲ್ಲಿಇಯವರೆವಿಗೆ- ಅಹಿಂಸೆಯ ಅಡಿಗಲ್ಲ ಮೇಲೆ ಅನೇಕಾಂತವಾದ ನುಡಿಗಳಲ್ಲಿ ನಿಧೃತವಾದ ಜೈನ ಸಿದ್ಧಾಂತವು ತನ್ನ ನಿರೂಪಣಾನುಗುಣವಾದ ಕರ್ಮಸಿದ್ಧಾಂತವನ್ನು ಮುಂದಿಟ್ಟು ಲೋಕಾಲೋಕವಿಚಾರ ಮಂಥನ ಮಾಡಿದೆ. ಇದೆಲ್ಲವೂ ತೀರ್ಥಂಕರಪರಮದೇವನ ಮುಖೋದ್ಭೂತವಾಗಿ ಜಿನವಾಣಿಯಾಗಿದೆ ಇದರ ಅನುಸಾರವಾಗಿಪ್ರಥಮಾನುಯೋಗಾದಿಗಳಲ್ಲಿ ಲೋಕಸ್ವರೂಪವಿವರಣೆ, ತ್ರಿಲೋಕದ ಔನ್ನತ್ಯ, ಅದರ ವಿಸ್ತಾರ, ತ್ರಸನಾಳ ವಿಚಾರ, ರಜ್ಜು ವಿಚಾರ, ಅಧೋಲೋಕ ಮಧ್ಯಲೋಕ-ಊರ್ಧ್ವಲೋಕಗಳ ವಿಸ್ತಾರಾಯತಾಧಿವರ್ಣನೆ, ಪ್ರಥಮ ಸ್ವರ್ಗದಿಂದ ಸಿದ್ಧಶಿಲೆಯವರೆಗೆ ಲೋಕಗಳ ವಿಸ್ತಾರ, ವಾಯುವಲಯ ವರ್ಣನೆ, ಲೋಕದ ಮತ್ತು ಅಧೋಲೋಕದ ಘನಫಲ, ಆತ್ಮಾಂಗುಲದ ಉಪಯೋಗ, ಪಲ್ಯಪ್ರಮಾಣ, ಸಾಗರ ಪ್ರಮಾಣ, ಅಧೋಲೋಕದ ವರ್ಣನೆ, ಪೃಥ್ವಿಗಳ ವರ್ಣನೆ, ಖರಭಾಗಾದಿಪೃಥ್ವೀಭಾಗಾಂಗವಿವರಣೆ, ರತ್ನಗರ್ಭಾ ಎಂಬ ಭೂನಾಮದ ಸಾರ್ಥಕತೆ, ಅದರ ವಿಸ್ತೀರ್ಣ, ಬಿಲ, ಅದರ ಸಂಖ್ಯಾವಿವರಣ ಇಂತಿಷ್ಟು ವಿವರಿಸಿದ್ದಾಯ್ತು. [ಮುಂದೆಓದಿ]

## ನರಕದ ದುಃಖಗಳ ವರ್ಣನೆ

ದುಷ್ಟ ವ್ಯಾಘ್ರವು ಜಿಂಕೆಗಳ ಮರಿಗಳನ್ನು ಕಂಡಾಕ್ಷಣ ಮೇಲೆರಗುವಂತೆ ಹಳೆಯ ನಾರಕೀಗಳು ಹೊಸ ನಾರಕಿಗಳನ್ನು ಕಂಡು ಹೆದರಿಸುತ್ತಾ ಅವರ ಕಡೆ ಓಡುತ್ತಾರೆ. ನಾಯಿಯ ಗುಂಪು ಇನ್ನೊಂದು ಗುಂಪಿನೊಡನೆ ಹೋರಾಡುವಂತೆ ನಾರಕಿಗಳು ನಿತ್ಯವೂ ಪರಸ್ಪರ ಹೋರಾಡುತ್ತಾರೆ. ಸಹಿಸಲಸಾಧ್ಯವಾದ ತೊಂದರೆಗಳನ್ನು ಅನುಭವಿಸುತ್ತಾರೆ. ಈ ನಾರಕಿಗಳು ಶೂಲ, ತೋಮರ, ಮುದ್ಗರ ಭರ್ಜಿ, ಸೂಜಿ, ಒನಕೆ, ಕತ್ತಿ ಮುಂತಾದ ಶಸ್ತ್ರರೂಪಗಳನ್ನೂ ವನ, ಪರ್ವತ,

ಬೆಂಕಿ, ತೋಳ, ವ್ಯಾಘ್ರ, ನಾಯಿ, ಬೆಕ್ಕು ಮುಂತಾದ ಪ್ರಾಣಿಗಳ ರೂಪಗಳನ್ನೂ ಧರಿಸುತ್ತಾರೆ. ಆಳವಾದ ಬಿಲ, ಹೊಗೆ, ವಾಯು, ತಲೆಬುರುಡೆ, ಯಂತ್ರ, ಬಲೆ, ಬೀಸುವ ಕಲ್ಲು, ಭರ್ಜಿ, ಮುಂತಾದ ಆಕಾರಗಳಲ್ಲೂ ತಮ್ಮ ಶರೀರಗಳನ್ನು ಅಡಗಿಸಿಕೊಳ್ಳುತ್ತಾರೆ. ಅಲ್ಲದೆ ಈ ನಾರಕಿಗಳು ಅನ್ಯರಿಗೆ ದುಃಖಕೊಡಲೆಂದೇ ದಾವಾನಲ, ಕೊಳೆತ ರಕ್ತ ಮತ್ತು ಕ್ರಿಮಿಕೀಟಗಳಿಂದ ಕೂಡಿದ ನದಿ, ಸರೋವರ, ಕಂದರ, ಭಾವಿ ಮುಂತಾದ ರೂಪಗಳಲ್ಲಿಯೂ ತಮ್ಮನ್ನು ವಿಲೀನಗೊಳಿಸಿ ಕೊಳ್ಳುತ್ತಾರೆ.

ಕೆಲವು ನಾರಕಿಯರು ವ್ಯಾಘ್ರ-ಸಿಂಹಗಳಾಗಿ ಬೇರೇ ನಾರಕಿಯರನ್ನು ಕಿತ್ತು ತಿನ್ನತೊಡಗುತ್ತವೆ. ಮತ್ತೆ ಕೆಲವು ನಾರಕಿಯರು ಇತರ ನಾರಕಿಯರಿಂದ ನಾವಿರಾರು ವಿಧದ ಯಂತ್ರಗಳಿಗೆ ಕೊಡಲ್ಪಡುತ್ತಾರೆ. ಕೆಲವರು ಮತ್ತೆ ಕೆಲವರನ್ನು ಕಂಬಗಳಿಗೆ ಕಟ್ಟಿ ಕಬ್ಬಿಣದ ಸಲಾಕಿಯಿಂದ ಹೊಡೆಯುತ್ತಾರೆ. ಕೆಲವರನ್ನು ಧಗಧಗಿಸುವ ಬೆಂಕಿಗೆ ಎಸೆಯುತ್ತಾರೆ. ಕೆಲವರನ್ನು ಆಯುಧದಿಂದ ಸೀಳುತ್ತಾರೆ ಭಯಂಕರ ಭರ್ಜಿಗಳಿಂದ ಇರಿಯುತ್ತಾರೆ. ಕೆಲವರು ಕಬ್ಬಿಣದ ಕಡಾಯಿಗಳಲ್ಲಿ ಕುದಿಯುವ ಎಣ್ಣೆಯೊಳಗೆ ಹಾಕಲ್ಪಡುತ್ತಾರೆ. ಸುಟ್ಟ ನೋವು ತಡೆಯಲಾರದವರು ಶೀತಲ ಜಲವೆಂದು ತಿಳಿದು ವೈತರಣೀ ನದಿಗೆ ಬೀಳುತ್ತಾರೆ. ಅದರಲ್ಲಿ ಅವರ ಶರೀರವು ಇನ್ನೂ ಅನೇಕ ರೋಗಗಳಿಂದ ಕೂಡುತ್ತದೆ. ಏಕೇದರೆ ಆ ವೈತರಣಿಯು ಕೊಳೆತ ರಕ್ತ ಕೀವುಗಳಿಂದ ತುಂಬಿ ಅಸಂಖ್ಯ ಜೀವಿಗಳಿಂದ ವ್ಯಾಪ್ತವಾಗಿದೆ. ಅಲ್ಲಿಯ ನಾರಕಿ ಜೀವಿಗಳೇ ಈ ರೂಪವನ್ನು ಹೊಂದುತ್ತಾರೆ. ಏಕೆಂದರೆ ಅಲ್ಲಿ ವಿಕಲತ್ರಯ ಜೀವಗಳು ಹುಟ್ಟುವುದಿಲ್ಲ. ಆ ವೈತರಣಿಯಲ್ಲಿ ಕತ್ತರಿಯ ಸಮಾನದ ತೀಕ್ಷ್ಣ ಜಲಚರ ಜೀವಿಗಳ ಆಕಾರ ಹೊಂದಿದ ನಾರಕಿಗಳು ಬೇರೇ ನಾರಕಿಗಳಿಗೆ ಸಹಿಸಲಸಾಧ್ಯವಾದ ಅನೇಕ ಪ್ರಕಾರದ ನೋವುಗಳನ್ನುಂಟುಮಾಡುತ್ತವೆ. ವೈತರಣಿ ನದಿಯ ಜಲದಲ್ಲಿ ಆಮೆ, ಕಪ್ಪೆ ಮತ್ತು ಮೊಸಳೆಗಳಂಥಾ ಜಲಜೀವಿಗಳ ವಿವಿಧ ರೂಪು ಧರಿಸಿದ ನಾರಕೀ ಜೀವಿಗಳು ಒಂದು ಮತ್ತೊಂದನ್ನು ಕಿತ್ತು ಭಕ್ಷಿಸುತ್ತವೆ. ಬಾದೆ ತಡೆಯಲಾರದ ನಾರಕಿ ಜೀವಿಗಳು ಬಿಲಗಳಲ್ಲಿ ನುಗ್ಗುತ್ತವೆ. ಅಲ್ಲಿ ಒಡನೆಯೆ ಭಯಂಕರ ಅಗ್ನಿಜ್ವಾಲೆ ಏಳುತ್ತದೆ. ಈ ಅಗ್ನಿಯಿಂದ ಬೆಂದ ಜೀವಗಳು ಶೀತಲ ನೆರಳಿನ ಆಸೆಯಿಂದ ಅಸಿಪತ್ರ ವನಕ್ಕೆ ಪ್ರವೇಶಿಸುತ್ತವೆ. ಅಲ್ಲಿಯೂ ಕೂಡ ವಜ್ರದಂಡ ಮತ್ತು ಕತ್ತಿಯ ಅಲುಗಿನಂಥ ಮರದ ಎಲೆಗಳು ಈ ಜೀವಗಳ ಶರೀರಗಳನ್ನು ಘಾಸಿಗೊಳಿಸಿ ಛಿದ್ರಗೊಳಿಸುತ್ತವೆ. ಚಕ್ರ, ಬಾಣ, ತೋಮರ, ಮುದ್ಗರ, ಖಡ್ಗ, ಭರ್ಜಿ, ಒನಕೆ ಮುಂತಾದ ಅನೇಕ ಶಸ್ತ್ರಗಳು ತಲೆಯ ಮೇಲೆ ಬೀಳುತ್ತವೆ. ಹೀಗೆ ನಾನಾ ವಿಧದಲ್ಲಿ ನೊಂದು ತಲೆಯೊಡೆದು ಕೈ-ಕಾಲುಗಳು

ತುಂಡಾಗಿ, ಕಣ್ಣು ಗುಡ್ಡೆಗಳು ಹೊರಬಂದು ಅಸಹಾಯಕತೆಯಿಂದ ಚೀರಿಡುತ್ತಾ ಆ ವನದಿಂದ ಹೊರ ಓಡುತ್ತವೆ. ಆಗ ಗರುಡ, ಕಾಗೆ ಮುಂತಾದ ವಜ್ರದಷ್ಟು ಕಠಿಣವಾದ ತೀಕ್ಷ್ಣ ಕೊಕ್ಕುಗಳುಳ್ಳ ಪಕ್ಷಿಗಳಾದ ನಾರಕಿಗಳು ಬಾಧೆಗೊಳ್ಳುತ್ತಿರುವ ನಾರಕಿಗಳನ್ನು ಬೆನ್ನಟ್ಟಿ ಅಂಗ ಉಪಾಂಗಗಳನ್ನು ಕ್ರೂರವಾಗಿ ಆಘಾತಗೊಳಿಸುತ್ತವೆ ಉಂಟಾದ ಗಾಯಗಳ ಮೇಲೆ ಕ್ಷಾರ ಪದಾರ್ಥಗಳನ್ನು ಹಾಕುವುದರಿಂದ ಆ ನಾರಕಿ ಜೀವಗಳು ಕರುಣಾಪೂರ್ಣವಾಗಿ ಪ್ರಲಾಪಿಸುತ್ತವೆ ಮತ್ತು ಬಾಧೆಯುಂಟು ಮಾಡುವ ನಾರಕಿಗಳ ಕಾಲುಗಳಿಗೆ ಎರಗುತ್ತವೆ. ಆದರೂ ಆ ನಿರ್ದಯಿ ನಾರಕಿಗಳು ಅವರನ್ನು ಬಿಡದೆ ತುಂಡು ತುಂಡು ಮಾಡಿ ಬಲಿಯಲ್ಲಿ ಹಾಕುತ್ತಾರೆ ಸ್ತ್ರೀ ಲಂಪಟನಾಗಿದ್ದವನ ಶರೀರಕ್ಕೆ ಕಾದ ಕಬ್ಬಿಣದ ಚೂರನ್ನು ಅಂಟಿಸಲಾಗುತ್ತದೆ. ಮಾಂಸಭಕ್ಷಣ ಪ್ರೇಮಿಯಾಗಿದ್ದವನ ಶರೀರದ ಮಾಂಸವನ್ನು ಕತ್ತರಿಸಿ ಅವನ ಮುಖಕ್ಕೇ ನೆತ್ತಲಾಗುತ್ತದೆ. ವದಿ ಅಥವಾ ಮಧ್ಯಪಾನಾಸಕ್ತನಾಗಿದ ಪ್ರಾಣಿಗೆ ಕಾದ ದ್ರವರೂಪದ ಕಬ್ಬಿಣವನ್ನು ಬಲವಂತವಾಗಿ ಕುಡಿಸಲ್ಪಡುತ್ತದೆ. ಇದರಿಂದ ಆ ನಾರಕಿಯ ಅವಯವಗಳೆಲ್ಲಾ ಕರಗಿ ಹೋಗುತ್ತವೆ. ಖಡ್ಗದ ಪ್ರಹಾರದಿಂದ ಸೀಳಿದ ನೀರು ಪುನಃ ಹೇಗೆ ಒಂದುಗೂಡುವುದೋ ಹಾಗೆ ಅನೇಕ ಶಸ್ತ್ರಗಳಿಂದ ಭಿನ್ನ-ಭಿನ್ನ ಮಾಡಲ್ಪಟ್ಟ ನಾರಕೀ ಶರೀರದ ಅಂಗಾಂಗಗಳೂ ಸಹ ಪುನಃ ಒಂದಾಗಿ ಸೇರುತ್ತವೆ. ಕಾರಣ ನಾರಕಿಯರು ಆಯುಷ್ಯವು ಮುಗಿಯದ ಮುನ್ನ ಏನೇ ಆದರೂ ಅಕಾಲಮರಣವಾಗುವುದಿಲ್ಲ.

ನರಕದ ಭೂಮಿಯು ಕಾದ ಕಬ್ಬಿಣದಂತೆ ದುಃಖವುಂಟುಮಾಡುವಂತಹುದಾಗಿದೆ. ಅಲ್ಲಿನ ಭೂಮಿಯು ಸೂಜಿಯಂಥ ತೀಕ್ಷ್ಣವಾಗಿರುವ ಹುಲ್ಲಿನಿಂದ ವ್ಯಾಪ್ತವಾಗಿದೆ. ಈ ಹುಲ್ಲಿನಿಂದ ಒಮ್ಮೆಗೇ ನೂರಾರು ಚೇಳುಗಳು ಕುಟುಕಿದಷ್ಟು ನೋವುಂಟಾಗುತ್ತದೆ. ನಾರಕಿಗಳ ಹೊಟ್ಟೆ-ಕಣ್ಣು-ತಲೆ-ಹಣೆ ಮುಂತಾದ ಅವಯವಗಳು ಕೋಟ್ಯಾಂತರ ರೋಗಗಳಿಂದ ಜರ್ಝರಿತವಾಗುತ್ತವೆ. ಈ ನಾರಕಿಗಳಿಗೆ ಹುಟ್ಟಿನಿಂದಲೇ ಒಟ್ಟು ಐದು ಕೋಟಿ ಅರವತ್ತೆಂಟು ಲಕ್ಷ ತೊಂಬತ್ತೊಂಬತ್ತು ಸಾವಿರದ ಐದುನೂರ ಎಂಬತ್ನಾಲ್ಕು (೫೬೮೯೯೫೮೪) ರೋಗಗಳು ಇರುತ್ತವೆ.

## ನಾರಕಿಗಳ ಆಹಾರ ಮತ್ತು ಮಣ್ಣಿನ ದೋಷ

ಶ್ವಾನ, ಕತ್ತೆ ಮುಂತಾದ ಪ್ರಾಣಿಗಳ ಕೊಳೆತ ಮಾಂಸ ಮತ್ತು ಮೂಳೆಗಳಿಂದ ಇಲ್ಲಿನ ಮಣ್ಣು ತುಂಬಿಹೋಗಿದೆ; ಅತ್ಯಂತ ಕೆಟ್ಟವಾಸನೆಯಿಂದ ಕೂಡಿದೆ. ನರಕದಲ್ಲಿ ತಾಪಗೊಂಡ ನಾರಕಿಗಳು ಹೆಚ್ಚಿನ ಹಸಿವಿನ ಬಾಧೆಯಿಂದ ಈ ಮಣ್ಣನ್ನೇ

ತಿನ್ನುತ್ತಾರೆ. ತಾಪ ಪೃಥ್ವಿಯು ಮೊದಲ ಪಟಲದ ಆಹಾರದ ಮಣ್ಣನ್ನು ಒಂದು ವೇಳೆ ಮಧ್ಯಲೋಕದಲ್ಲಿ ಹಾಕಿದರೆ ಅದರ ದುರ್ಗಂಧದಿಂದ ಒಂದು ಕ್ರೋಶದಷ್ಟು ವಿಸ್ತೀರ್ಣದಲ್ಲಿನ ಜೀವಗಳು ಮರಣ ಹೊಂದುತ್ತವೆ. ಇದರಿಂದ ಮುಂದೆ ಎರಡು ಮತ್ತು ಮೂರನೇ ಪಟಲಗಳಲ್ಲಿಯೂ ಅರ್ಧ-ಅರ್ಧ ಕ್ರೋಶದಷ್ಟು ಪ್ರಮಾಣದಲ್ಲಿ ಈ ಮರಣವು ಹರಡುತ್ತದೆ. ಏಳನೇ ನರಕದ ಕೊನೆಯ ೪೯ನೇ ಪಟಲದಲ್ಲಿ ಮಣ್ಣಿನ ಮರಣ ಶಕ್ತಿಯು ೨೫ ಕ್ರೋಶ ಪ್ರಮಾಣದಷ್ಟು ಅಧಿಕಗೊಳ್ಳುತ್ತದೆ.

## ತೀರ್ಥಂಕರಪ್ರಕೃತಿ ಬಂಧನಗೊಂಡು ನರಕಕ್ಕೆ ಹೋಗುವವರ ಸ್ಥಿತಿ

ಕೆಲವು ಜೀವಗಳು ಈ ಮಧ್ಯಲೋಕ ತೀರ್ಥಕರ ಪ್ರಕೃತಿಯ ಬಂಧನಕ್ಕೂ, ಮುಂಚಿತವಾಗಿ ನರಕಾಯುಃವನ್ನು ಪಡೆದಿದ್ದರೆ ಆ ಜೀವಗಳು ಮೊದಲ, ಎರಡನೆಯ ಮತ್ತು ಮೂರನೆಯ ನರಕದವರೆಗೂ ಹೋಗುವುವು. ಇಂಥ ಜೀವಗಳೂ ಕೂಡ ಅಸಾಧಾರಣ ದುಃಖದ ಅನುಭವವನ್ನು ಹೊಂದುತ್ತವೆ. ಅದೇ ವೇಳೆಗೆ ಸಮ್ಯಕ್ತ್ವದ ಮಹಿಮೆಯಿಂದ ಪೂರ್ವಕೃತ ಕರ್ಮವಿಪಾಕದ ಚಿಂತನೆಮಾಡುತ್ತವೆ. ಕೊನೆಗೆ ಈ ಜೀವಿಗಳ ಆಯುಷ್ಯವು ನರಕದಲ್ಲಿ ಆರುತಿಂಗಳು ಮಾತ್ರ ಉಳಿದಿದ್ದಾಗ ಸ್ವರ್ಗವಾಸಿಗಳು ಬಂದು ನಾಲ್ಕುಕಡೆಯೂ ಗೋಡೆಗಳನ್ನು ನಿರ್ಮಿಸಿ ಇವುಗಳ ತೊಂದರೆಯನ್ನು ನಿವಾರಣೆಮಾಡುತ್ತಾರೆ.

## ನಾರಕೀಯರ ದುಃಖಗಳಲ್ಲಿ ಭೇದ

ನರಕಭೂಮಿಗಳಲ್ಲಿ ನಾರಕೀಯರ ದುಃಖಗಳಲ್ಲಿ ನಾಲ್ಕು ಭೇದಗಳಿವೆ ಇವುಗಳು ಕ್ಷೇತ್ರಜನಿತ, ಶಾರೀರಿಕ, ಮಾನಸಿಕ ಮತ್ತು ರಾಕ್ಷಸಕೃತ.

ನರಕದಲ್ಲಿ ಉತ್ಪನ್ನವಾಗುವ ಶೀತ, ಉಷ್ಣ, ವೈತರಣೀನದಿ, ಶಾಲ್ಮಲಿ ವೃಕ್ಷ ಮೊದಲಾದುವುಗಳಿಂದ ಆಗುವ ದುಃಖ ಕ್ಷೇತ್ರಜನಿತ.

ಶರೀರದಲ್ಲಿ ಹುಟ್ಟುವ ರೋಗಬಾಧೆ, ಹೊಡೆದಾಟ, ಕುಂಭೀಪಾಕ ಮೊದಲಾದ ದುಃಖಗಳು ಶಾರೀರಿಕ.

ಸಂಕ್ಲೇಶ, ಶೋಕ, ವ್ಯಾಕುಲತೆ, ಪಶ್ಚಾತ್ತಾಪ ಮೊದಲಾದುವುಗಳ ನಿಮಿತ್ತದಿಂದ ಉತ್ಪನ್ನವಾಗುವ ದುಃಖ ಮಾನಸಿಕ.

ಮೂರನೇ ಪೃಥ್ವಿಯ ಪರ್ಯಂತ ಸಂಕ್ಲೇಶ ಪರಿಣಾಮಮಾಡುವ ಅಸುರಕುಮಾರ ಜಾತಿಯ ಭವನವಾಸೀದೇವತೆಗಳ ಮೂಲಕ ಉತ್ಪನ್ನವಾಗುವ ದುಃಖ ರಾಕ್ಷಸಕೃತ.

## ಅಸುರಕುಮಾರ ಕೃತ ದುಃಖ

ಪೂರ್ವದಲ್ಲಿ ದೇವಾಯು ಬಂಧಗೊಳಿಸಲ್ಪಟ್ಟ ಮನುಷ್ಯ ಜೀವ ಅನಂತಾನು ಯಾವುದಾದರೂ ಒಂದು ಜನ್ಮತಳೆದಾಗ ರತ್ನತ್ರಯವನ್ನು ನಷ್ಟಹೊಂದಿ ಅಸುರ ಕುಮಾರ ಜಾತಿಯ ದೇವನಾಗುತ್ತದೆ. ಈ ಅಸುರಕುಮಾರ ಜಾತಿಯ ದೇವತೆಗಳು ಮೂರನೆಯ ವಾಲುಕ ಪ್ರಭಾ ಪೃಥ್ವಿಯತನಕ ಹೋಗಿ ನಾರಕಿಗಳಿಗೆ ಕ್ರೋಧ ಹುಟ್ಟುವಂತೆ ಕೆರಳಿಸಿ ಪರಸ್ಪರ ಹೊಡೆದಾಡಿಸುತ್ತಾರೆ. ಇದರಿಂದ ಸಂತೋಷ ಗೊಳ್ಳುತ್ತಾರೆ.

## ನರಕದಲ್ಲಿ ಅವಧಿ ಜ್ಞಾನ

ನರಕದಲ್ಲಿ ಹುಟ್ಟಿದ ಅಂತರ್ಮುಹೂರ್ತದ ನಂತರ ಆರು ಪರ್ಯಾಪ್ತಿಗಳೂ ಪೂರ್ಣವಾಗುತ್ತವೆ. ಭವಪ್ರತ್ಯಯ ಅವಧಿಜ್ಞಾನ ಪ್ರಕಟವಾಗುತ್ತದೆ. ಇವು ಮಿಥ್ಯಾದೃಷ್ಟೀ ನಾರಕಿಗಳು ಇವುಗಳ ಅವಧಿಜ್ಞಾನ ವಿಭಂಗಾವಧಿ–ಕುವವಧಿ ಎನ್ನಲಾಗುತ್ತದೆ. ಸಮ್ಯಗ್ದೃಷ್ಟೀ ನಾರಕಿಗಳ ಜ್ಞಾನವು ಅವಧಿಜ್ಞಾನ ಎನ್ನಲಾಗುತ್ತದೆ.

## ಅವಧಿಯ ಕ್ಷೇತ್ರಪ್ರಮಾಣ

ಪ್ರಥಮ ನರಕದಲ್ಲಿ ಅವಧಿಜ್ಞಾನದ ವ್ಯಾಪ್ತಿಯು ಒಂದು ಯೋಜನ ಮುಂದೆ ಮುಂದೆ ಅರ್ಧ ಅರ್ಧ ಕ್ರೋಶ ಕಡಿಮೆಯಾಗುತ್ತಾ ಏಳನೇ ನರಕದಲ್ಲಿ ಒಂದು ಕ್ರೋಶ ಮಾತ್ರ ಉಳಿಯುತ್ತದೆ,

| | | |
|---|---|---|
| ಮೊದಲ ನರಕದಲ್ಲಿ | -- | ನಾಲ್ಕು ಕ್ರೋಶ (ಒಂದು ಯೋಜನ) |
| ಎರಡನೇ ನರಕದಲ್ಲಿ | -- | ಮೂರೂವರೆ ಕ್ರೋಶ |
| ಮೂರನೇ ನರಕದಲ್ಲಿ | — | ಮೂರು ಕ್ರೋಶ |

ನಾಲ್ಕನೇ ನರಕದಲ್ಲಿ -- ಎರಡೂವರೆ ಕ್ರೋಶ
ಐದನೇ ನರಕದಲ್ಲಿ -- ಎರಡು ಕ್ರೋಶ
ಆರನೇ ನರಕದಲ್ಲಿ -- ಒಂದೂವರೆ ಕ್ರೋಶ
ಏಳನೇ ನರಕದಲ್ಲಿ -- ಒಂದು ಕ್ರೋಶ

ಈ ಅವಧಿಜ್ಞಾನ ಪ್ರಕಟವಾಗುತ್ತಲೇ ಆ ನಾರಕಿಗಳು ಪೂರ್ವಜ್ಞಾನದ ಪಾಪಗಳನ್ನೂ, ವೈರ ಮತ್ತು ಶತ್ರುಗಳನ್ನೂ ತಿಳಿಯುತ್ತಾರೆ. ಸಮ್ಯಗ್ದೃಷ್ಟಿ ಇರುವವರು ತಮ್ಮ ಪಾಪಕ್ಕೆ ಪಶ್ಚಾತ್ತಾಪಪಡುತ್ತಾರೆ. ಮಿಥ್ಯಾದೃಷ್ಟಿ ಇರುವವರು ಪೂರ್ವ ಜನ್ಮದಲ್ಲಿ ಇನ್ನೊಬ್ಬರಿಂದ ಪಡೆದ ಉಪಕಾರವನ್ನೂ ಸಹ ಅಪಕಾರವೆಂದೇ ತಿಳಿದು ಯದ್ವಾತದ್ವಾ ಆರೋಪಮಾಡುತ್ತಾ ಪರಸ್ಪರ ಹೊಡೆದಾಡುತ್ತಾರೆ. ಕೆಲವು ಭದ್ರ ಮಿಥ್ಯಾದೃಷ್ಟಿ ಜೀವಿಗಳು ಪಾಪದ ಫಲವನ್ನು ಅನುಭವಿಸುತ್ತಾ ಅತ್ಯಂತ ದುಃಖದಿಂದ ಪಾಪಕ್ಕೆ ಪಶ್ಚಾತ್ತಾಪಪಡುತ್ತಾರೆ. ಆಗ ವೇದನೆ ಅನುಭವವೆಂಬ ಹೆಸರಿನ ನಿಮಿತ್ತದಿಂದ ಸಮ್ಯಗ್ದರ್ಶನವನ್ನು ಹೊಂದುತ್ತಾರೆ. ಅಂದರೆ ಯಾವ ನಾರಕಿಯು ಪಾಪದ ಫಲವನ್ನು ಅನುಭವಿಸುತ್ತಾ "ಅಯ್ಯೋ! ನಾನು ಪರಸ್ತ್ರೀ ಸಂಗ ಮಾಡಿದ್ದೆ. ಅದರ ಫಲವಾಗಿ ಇಲ್ಲಿ ಬಿಸಿಬಿಸಿ ಕಬ್ಬಿಣದ ಕಂಬಗಳ ಆಲಿಂಗನ ಮಾಡಿಸಲಾಯಿತು!" ಎಂದು ಯೋಚಿಸುತ್ತಾನೋ. ಯಾವ ನಾರಕಿಯು "ನಾನು ಮಧ್ಯಪಾನಾಸಕ್ತನಾಗಿದ್ದೆ. ಆ ಕಾರಣ ಕರಗಿದ ಬಿಸಿ ಕಬ್ಬಿಣ ದ್ರವವನ್ನು ಕುಡಿಸಲಾಗುತ್ತದೆ" ಎಂದು ಪಶ್ಚಾತ್ತಾಪ ಪಡುತ್ತಾನೋ, ಯಾರು "ನಾನು ಗುರು-ಶಾಸ್ತ್ರಗಳ ಉಪದೇಶ ಕೇಳಲಿಲ್ಲ, ಮನನ ಮಾಡಲಿಲ್ಲ. ದೇವರಲ್ಲಿ ನಂಬಿಕೆ ಇಡಲಿಲ್ಲ ನಿಯಮಗಳ ಉಲ್ಲಂಘನೆಮಾಡಿದೆ. ಇವುಗಳ ಪರಿಣಾಮವಾಗಿ ಈಗ ನಾನು ನರಕಯಾತನೆ ಅನುಭವಿಸಬೇಕಾಗಿದೆ. ಈಗ ಇದರಿಂದ ಬಿಡುಗಡೆ ಹೇಗೆ? ಎಲ್ಲಿ ಹೋಗಲಿ? ಏನುಮಾಡಲಿ?' ಎಂದೆಲ್ಲಾ ಪ್ರಲಾಪಿಸಿ ಪಶ್ಚಾತ್ತಾಪಹೊಂದುತ್ತಾನೋ ಆ ನಾರಕಿಯು ಆಗ ಜಿನಧರ್ಮ-ಶಾಸ್ತ್ರದಲ್ಲಿ ಪ್ರೀತಿ ಬೆಳೆಸಿಕೊಂಡು ಶ್ರದ್ಧೆಯಿಂದ ಸಮ್ಯಕ್ತ್ವರೂಪೀ-ಅಮೂಲ್ಯನಿಧಿಯನ್ನು ಕಾಣುತ್ತಾರೆ.

## ನರಕದಲ್ಲಿ ಸಮ್ಯಕ್ತ್ವದ ಕಾರಣ

ಧರ್ಮಾ ಮೊದಲಾದ ಪೃಥ್ವಿಯು ಮಿಥ್ಯಾತ್ವಭಾವದಿಂದ ಕೂಡಿದ ನಾರಕಿಗಳಲ್ಲಿ ಕೆಲವರು ಜಾತಿಸ್ಮರಣೆಯಿಂದ, ಕೆಲವರು ಸಹಿಸಲಸಾಧ್ಯ ವೇದನೆಯಿಂದ, ಕೆಲವರು ದೈವಧ್ಯಾನದಲ್ಲಿ ತಲ್ಲೀನರಾಗುವುದರಿಂದ ಭವಗಳನ್ನು ಕಳೆದು ಸಮ್ಯಗ್ದರ್ಶನವನ್ನು ಪಡೆಯುತ್ತಾರೆ.

ಪಂಕಪ್ರಭಾ ಮುಂತಾದ ಉಳಿದ ನಾಲ್ಕು ಪೃಥ್ವಿಗಳ ನಾರಕೀಜೀವಗಳು ದೇವಕೃತ ಪ್ರಬೋಧವಲ್ಲದೆ ಜಾತಿಸ್ಮರಣೆ ಮತ್ತು ವೇದನೆಯ ಅನುಭವ ಮಾತ್ರ ದಿಂದಲೇ ಸಮ್ಯಕ್ತ್ವವನ್ನು ಪಡೆಯುತ್ತಾರೆ.

ಮೊದಲ ನರಕದ ಆಯುಷ್ಯವನ್ನು ಯಾರು ಪೂರ್ಣಗೊಳಿಸುತ್ತಾರೊ ಅವರು ಸಮ್ಯಕ್ತ್ವವನ್ನುಪಡೆಯುತ್ತಾರೆ. ಇಂಥ ಜೀವಿಗಳು ಸಮ್ಯಕ್ತ್ವಸಹಿತ ನಿಧನ ರಾಗಿ ಪ್ರಥಮನರಕಕ್ಕೇ ಹೋಗುತ್ತಾರೆ ಎಲ್ಲ ನರಕಗಳಲ್ಲೂ ಸಮ್ಯಕ್ತ್ವಕ್ಕೆ ಕಾರಣ ಒಂದೇ : ನಾರಕಿಗಳಿಗೆ ಭೂತಸಾಮಗ್ರಿ ಸಿಗುವುದು; ಬೇರೇನೂ ಅಲ್ಲ.

## ನಾರಕಜೀವಿಗಳ ಅವಸ್ಥ

ಮಧ್ಯಪಾನಿಗಳು, ಮಾಂಸಾಭಿಲಾಷೆಯಿಂದ ಪ್ರಾಣಿಹತ್ಯಮಾಡುವವರು, ಕ್ಷಣಮಾತ್ರದ ಇಂದ್ರಿಯ ಸುಖಕ್ಕಾಗಿ ಆತುರಪಡುವವರು, ಕ್ರೋಧ-ಮಾನ-ಮಾಯ-ಲೋಭ ಮುಂತಾದುವುಗಳಿಗೆ ಸಿಲುಕಿ ಅಸತ್ಯ ನುಡಿಯುವವರು, ಅನ್ಯಾಯ ಎಸಗು ವವರು ನಾರಕಜೀವಿಗಳಾಗುತ್ತಾರೆ. ಉನ್ಮತ್ತ ಯವ್ವನಮದದಲ್ಲಿ ಪರಸ್ತ್ರೀ ಆಸಕ್ತ ರಾಗಿದ್ದವರು ಚಿರಕಾಲ ನಪುಂಸಕರಾಗುತ್ತಾರೆ; ಅನಂತ ದುಃಖಪಡೆಯುತ್ತಾರೆ.

ರತ್ನಪ್ರಭಾ ಪೃಥ್ವಿಯ ಮೊದಲ ಸೀಮಂತಕ ಪಟಲದ ನಾರಕೀಗಳ ಶರೀರದ ಎತ್ತರವು ಮೂರುಮೊಳ ಇರುತ್ತದೆ. ಇದರ ಮುಂದೆ ಹೆಚ್ಚುತ್ತಾ ಹೆಚ್ಚುತ್ತಾ ಕೊನೆಯ ಪಟಲದಲ್ಲಿ ೭ ಧನುಷ್, ೩ ಅಡಿ, ೬ ಅಂಗುಲ ಎತ್ತರವಾಗುತ್ತದೆ. ಕೊನೆಗೆ ಏಳನೆಯ ಪೃಥ್ವಿಯ ಕೊನೆಯ ಅವಧಿಸ್ಥಾನವೆಂಬ ಹೆಸರಿನ ಇಂದ್ರ ಕಬಿಲದಲ್ಲಿ ನಾರಕಿಗಳು ೫೦೦ ಧನುಷ್ ಪ್ರಮಾಣದ ಶರೀರವನ್ನು ಹೊಂದಿರುತ್ತಾರೆ.

ಪ್ರತಿ ನರಕ ಪೃಥ್ವಿಗಳ ಮೊದಲ ಪಟಲ ಮತ್ತು ಕೊನೆಯ ಪಟಲಗಳಲ್ಲಿ ನಾರಕಿಗಳ ಶರೀರದ ಪ್ರಮಾಣ ಕೆಳಗೆ ಕೊಟ್ಟಿರುವಂತಿರುವುದು.

| ನರಕ | ಪ್ರಥಮಪಟಲ | ಕೊನೆಯಪಟಲ |
|---|---|---|
| ಮೊದಲ ನರಕ | – ೩ ಮೊಳ | – ೭ ಧನುಷ್, ೩ ಅಡಿ, ೬ ಅಂಗುಲ |
| ಎರನೆಯ ನರಕ | – ೮ ಧನು ೩ ಅಡಿ ೧೧/೨೪-೬೦ | – ೧೫ ಧನು ೨ ಅಡಿ ೧೨ ಅಂ. |
| ಮೂರನೆಯ ನರಕ | – ೧೭ ಧನು ೩೪ ೨/೩ ಅಂ. | – ೩೧ ಧನು ೧ ಅಡಿ |

ನಾಲ್ಕನೆಯ ನರಕ – ೩೫ ಧನು ೨ ಅಡಿ ೨೦ ೪/೭ ಅಂ – ೬೨ ಧನು ೨ ಅಡಿ
ಐದನೆಯ ನರಕ – ೭೫ ಧನು – ೧೨೫ ಧನು
ಆರನೆಯ ನರಕ – ೧೬೬ ಧನು ೨ ಅಡಿ ೧೬ ಅಂ. – ೨೫೦ ಧನು
ಏಳನೆಯ ನರಕ ಪೃಥ್ವಿಯ ಅವಧಿಸ್ಥಾನ ಇಂದ್ರಕದಲ್ಲಿ – ೫೦೦ ಧನು

ಎಲ್ಲಾ ನಾರಕಿ ಜೀವಿಗಳ ಪರಿಣಾಮವೂ ಅಶುಭವಾಗಿಯೇ ಇರುತ್ತದೆ. ಈ ಜೀವಿಗಳೂ ಸಹ ಅಶುಭವನ್ನೇ ಅನುಭವಿಸುತ್ತವೆ. ಅವರ ಶರೀರವೂ ಸಹ ಅಶುಭ ಕರ್ಮದಿಂದ ಉಂಟಾಗುವ ಭಯಂಕರ ವೇದನೆಯನ್ನು ಅನುಭವಿಸುತ್ತವೆ. ಅವರ ಶರೀರವು ವೈಕ್ರಿಯಕವಾಗಿದ್ದರೂ ಮಲ-ಮೂತ್ರ-ಕೀವುಗಳಿಂದ ತುಂಬಿರುತ್ತೆ. ಕೆಲವು ನಾರಕೀ ಜೀವಗಳು ತಾವು ಶುಭಕಾರ್ಯಮಾಡಿದರೂ ಸಹ ಕರ್ಮೋದಯದಿಂದ ಅಶುಭ ವಾಗುವುದೆಂದು ಯೋಚಿಸುತ್ತಾರೆ. ಅಂಥವರು ದುಃಖವನ್ನು ದೂರಮಾಡಲು ಉಪಾಯ ಯೋಚಿಸಿದಷ್ಟೂ ಇಮ್ಮಡಿಯಾದ ದುಃಖಕ್ಕೆ ಒಳಗಾಗುತ್ತಾರೆ. ಕಷಾಯ ದಿಂದ ರಂಜಿತ ಮನಸ್ಸು ಮತ್ತು ವಚನಕಾರ್ಯದ ಪ್ರವೃತ್ತಿಯನ್ನೇ ಜೀವವೆನ್ನುತ್ತಾರೆ. ಅದರಲ್ಲಿ ಆರುಭೇದವಿದೆ ಅವುಗಳು ಕೃಷ್ಣ, ನೀಲ, ಕಪೋತ, ಪೀತ, ಪದ್ಮ ಮತ್ತು ಶುಕ್ಲ ಇವುಗಳಲ್ಲಿ ಕೃಷ್ಣ, ನೀಲ ಮತ್ತು ಕಪೋತ ಜೀವಿಗಳು ಅಶುಭವಾದುವು. ಉಳಿದ ಪೀತ, ಪದ್ಮ ಮತ್ತು ಶುಕ್ಲ ಜೀವಗಳು ಶುಭವಾದುವು. ನರಕದಲ್ಲಿ ಸದಾ ಅಶುಭತರ ಮತ್ತು ಅಶುಭತಮ ಜೀವಿಗಳೇ ಇರುತ್ತವೆ.

| ನರಕ | | ಇರುವಜೀವಿಗಳು |
|---|---|---|
| ಮೊದಲ ಮತ್ತು ಎರಡನೆ ನರಕ | – | ಕಪೋತ ಜೀವಿಗಳು |
| ಮೂರನೆ ನರಕ | – | ಮೇಲೆ ಕಪೋತ, ನೀಲಜೀವಿಗಳು |
| ನಾಲ್ಕನೇ ನರಕ | – | ನೀಲಜೀವಿಗಳು |
| ಐದನೇ ನರಕ | – | ಮೇಲೆ ನೀಲ, ಕೆಳಗೆ ಕೃಣಜೀವಿಗಳು |
| ಆರನೇ ನರಕ | – | ಕೃಷ್ಣ ಜೀವಿಗಳು |
| ಏಳನೇ ನರಕ | – | ಪರಮಕೃಷ್ಣ ಜೀವಿಗಳು |

## ಅಖಿಲ ಕರ್ನಾಟಕ ೩ನೇ ಜೈನ ಸಾಹಿತ್ಯಸಮ್ಮೇಳನದ ಅಧ್ಯಕ್ಷ ಭಾಷಣ

(೧೨ನೇ ಪುಟದಿಂದ ಮುಂದುವರಿದಿದೆ)

ಸಹಜವೆಂದು ಕಾಣುತ್ತದೆ ಕಾರಣ ನನ್ನ ತಲೆಯನ್ನು ತಿನ್ನುತ್ತಿರುವ ಇನ್ನೊಂದು. ವಿಷಯವನ್ನು ಇಲ್ಲಿ ಪ್ರಸ್ತಾಪಿಸಲು ಪ್ರಯತ್ನಿಸಿದ್ದೇನೆ.

ಒಂದು ಬಸದಿಯನ್ನು ಕಟ್ಟಿಸುತ್ತೇವೆ, ಜೈನಪೀಠವನ್ನು ಸ್ಥಾಪಿಸುತ್ತೇವೆ ಎಂದು ಬಂದವರಿಗೆ ಧಾರಾಳವಾ ದಾನಮಾಡುವ ಶ್ರೀಮಂತ ದಾನಿಗಳು ಜೈನಸಮಾಜದಲ್ಲಿದ್ದಾರೆ. ಇದು ನಾವು ಹೆಮ್ಮೆಪಡುವ ಅಂಶವೇ ಸರಿ. ಬಸದಿಯು ಸಿದ್ಧವಾಗುತ್ತದೆ. ಪ್ರತಿಷ್ಠಾಪನಾ ಕಾರ್ಯವು ಮುಗಿಯುತ್ತದೆ. ಆದರೆ ನಿತ್ಯಪೂಜೆ ಮುಂದುವರಿಸಿ ಕೊಂಡು ಹೋಗುವ ವ್ಯಕ್ತಿಯ ಅಭಾವ ನಮ್ಮ ಮುಖಕ್ಕೆ ಹೊಡೆಯುತ್ತಿರುತ್ತದೆ. ಆದರಂತೆ ಲಕ್ಷಗಟ್ಟಲೆ ಹಣವನ್ನು ಕೂಡಿಸಿ ಜೈನ ಧರ್ಮ, ತತ್ವ ಕಲೆ ಮೊದಲಾದವುಗಳ ಅಭ್ಯಾಸ ಮುಂದುವರೆಯಲೆಂಬ ಸದಿಚ್ಛೆಯಿಂದ ಜೈನಪೀಠಗಳು ಅಸ್ತಿತ್ವದಲ್ಲಿ ಬರುತ್ತಿವೆ-ಬಂದಿವೆ. ಆದರೆ ಅವುಗಳನ್ನು ನಡೆಸಿಕೊಂಡು ಹೋಗುವಂತಹ ಸಮರ್ಥ ವಿದ್ವಾಂಸರ ಅಭಾವ ಎಲ್ಲ ಪೀಠಗಳಲ್ಲೂ ತಲೆಯೆತ್ತಿ ನಿಂತಿದೆ ಈ ಸಮಸ್ಯೆಯನ್ನು ಎದುರಿಸುವವರಾರು ? ಇದಕ್ಕೆ ಪರಿಹಾರ ಹೇಳುವವರಾರು ! ದಾನಕೊಟ್ಟದ್ದಾಯಿತು, ಅಲ್ಲಿಗೆ ತಮ್ಮ ಕೆಲಸ ಮುಗಿಯಿತು ಎಂದು ದಾನಿಗಳು ಭಾವಿಸುತ್ತಾರೆ ತಂದ ಹಣದಿಂದ ಬಸದಿ ತಯಾರಾಗಿ ಪ್ರತಿಷ್ಠಾಪನಾ ಕಾರ್ಯ ಮಾಡಿದ್ದಾಯಿತು ಇಲ್ಲಿಗೆ ತಮ್ಮ ಕರ್ತವ್ಯ ಮುಗಿಯಿತೆಂದು ಬಸದಿ ನಿರ್ಮಾಣದ ಹೊಣೆಗಾರರು ಭಾವಿಸುತ್ತಾರೆ. ಇದು ಸರಿಯೇ ? ತನ್ನ ಪೂಜೆಯನ್ನು ಮಾಡಿಸಿಕೊಳ್ಳುವ ವ್ಯವಸ್ಥೆಯನ್ನು ಅಲ್ಲಿ ಪ್ರತಿಷ್ಠಾಪಿತನಾದ ತೀರ್ಥಂಕರನೇ ಮಾಡಿಕೊಳ್ಳಬೇಕೇ ? ಜೈನ ಪೀಠದ ಪ್ರಗತಿಯನ್ನು ಸಿದ್ಧಶಿಲೆಯಲ್ಲಿ ವಿರಾಜಮಾನರಾದ ಸಿದ್ಧಾತ್ಮರೇ ಸಾಧಿಸಬೇಕೇ ? ಇದು ಹಗುರಾಗಿ ಭಾವಿಸತಕ್ಕ ಸಮಸ್ಯೆಯಲ್ಲವೆಂದು ನನ್ನ ನಂಬುಗೆ. ಹಣಕೊಟ್ಟವರ ಹೊಣೆಗಾರಿಕೆ ತಾವು ಕೊಟ್ಟ ಹಣದ ಹಿನ್ನೆಲೆಯಲ್ಲಿ. ಬಸದಿ ಅಥವಾ ಪೀಠ ಯಾವುದೇ ಇದ್ದರೂ, ಅವು ಸರಿಯಾಗಿ ನಡೆದುಬರುವಂತೆ ಮಾಡುವುದೂ ಇದೆ, ಇದು ಸಮಾಜದ ಹೊಣೆಯೋ ಸರಿ ! ಶ್ರಮಪಟ್ಟು ಗಿಡವನ್ನು ಹಚ್ಚಿ, ಅದನ್ನು ಚೆನ್ನಾಗಿ ಬೆಳೆಯಿಸಲು ಪ್ರಯತ್ನಿಸದೆ ಅದು ನಾಶವಾಗಿ ಹೋಗುವಂತೆ ಮಾಡುವುದಕ್ಕಿಂತ ಗಿಡವನ್ನು ನೆಡದೇ ಇರುವುದು- ಲೇಸು. ಸಸಿಯನ್ನು ನೆಟ್ಟು ನಂತರ ಕೊಂದ ಹಿಂಸೆ, ಪಾಪ ವಾದರೂ? ಅಲ್ಲಿ ಇಲ್ಲ. ಕಾರಣ ಸಮಾಜ ಬಾಂಧವರು ಈ ಬಗ್ಗೆ ವಿಚಾರ ಮಾಡುವುದು ಅಗತ್ಯವೆಂದೇ ಕಾಣುತ್ತದೆ. ಈ ವಿಷಯದಲ್ಲಿ ನನಗೆ ಹೊಳೆಯುವುದೇನೇದರೆ-ಇದು ಸಮಾಜದವರ ಮತಬಾಂಧವರೆಲ್ಲರ, ಪ್ರಶ್ನೆ ಆಗಿರುವುದರಿಂದ, ಇಂತಹ ವಿಷಯಗಳು ತಲೆದೋರಿದಾಗ, ವೈಯಕ್ತಿಕ ಭಿನ್ನಾಭಿಪ್ರಾಯಗಳನ್ನು ತಮ್ಮ ಮನೆಯಲ್ಲೇ ಇಟ್ಟುಬಂದು, ಎಲ್ಲರೂ ಸಹಕಾರದಿಂದ, ಒಗ್ಗಟ್ಟಾಗಿ ನಿಂತು, ವಿಚಾರಿಸಿ ಮನೆಯಲ್ಲೇ ... ನಡೆಯುವಂತೆ ಮಾಡಬೇಕು. ಈ ರೀತಿ ಯಂತಹ ಕಾರ್ಯಗಳು ಪ್ರಗತಿ ಪಥದಲ್ಲಿ ನಡೆಯುವಂತೆ ಮಾಡಬೇಕು.

ವಿಚಾರ ಮಂಥನ, ಒಟ್ಟಾಗಿ ಸಾಗುವ ಪ್ರವೃತ್ತಿ ನಮ್ಮಲ್ಲಿ ಮೂಡಿ, ಬೆಳೆದು ಬಂದು ಕಾರ್ಯಗತವಾಗದಿದ್ದಲ್ಲಿ ನಮ್ಮ ಹಾಗೂ ನಿಮ್ಮ ಧರ್ಮದ ಅಸ್ತಿತ್ವದ ಬುಡವೇ ಕತ್ತರಿಸಿ ಹೋಗಬಹುದಾಗಿದೆ. ಇದರ ಜೊತೆಗೆ, ಇನ್ನೂ ಒಂದು ಮಹತ್ವದ ಕಾರ್ಯ ನಡೆಯಬೇಕು ಆಧುನಿಕ ಉಪಕರಣಗಳ ಮೂಲಕ ಜಗತ್ತು ಕೈಯಲ್ಲಿಯ ನೆಲ್ಲಿಕಾಯಿಯಂತೆ, ನೋಡಲು, ಅರಿಯಲು ಪ್ರತಿಯೊಬ್ಬ ವ್ಯಕ್ತಿಗೂ ಕರಗತವಾಗುತ್ತಲಿದೆ. ತನ್ನ ಅರಿವಿಗೆ ಬಂದ, ಅಳವಿಗೆ ಸಿಕ್ಕ ವಿವಿಧ ರೂಪಗಳಲ್ಲಿ ಆತನು ತನ್ನ ಕೃತಿಗಳನ್ನು ರಚಿಸಬಹುದು. ಹೀಗೆ ನಮ್ಮ ಸಾಹಿತ್ಯಕ್ಕೆ ವಿವಿಧತೆಯನ್ನು ತರುವ ತರುಣ ಸಾಹಿತಿ ಮಿತ್ರರ ಬಗೆಗೆನನಗೆ ಹೆಮ್ಮೆ ಅನ್ನಿಸುತ್ತದೆ

ಮುಂದಿನ ಸಂಚಿಕೆಯಲ್ಲಿ ಮುಂದುವರೆಯುವುದು

---

ಶ್ರೀಃ

ಶ್ರೀ ಶುಭಚಂದ್ರಾಚಾರ್ಯ ವಿರಚಿತಃ

# ಜ್ಞಾ ನಾ ರ್ಣ ವಃ

(ಭಾವತಲಸ್ಪರ್ಶಿವ್ಯಾಖ್ಯಕರ್ಣಾಟಕಾನುವಾದಯುತಃ)

ಕಳೆದ ಸಂಚಿಕೆಯಿಂದ ಮುಂದುವರೆದುದು

ಇಲ್ಲಿಯವರೆಗೆ—ಮನಶ್ಶಕ್ತಿಯ ಹಿರಿಮೆ, ಅದನ್ನು ಸಾರ್ಥಕಗೊಳಿಸುವ ಹಂತದಲ್ಲಿ ಮಾನವಕರ್ತವ್ಯ, ಅಲ್ಲಿ ಯೋಗದರ್ಶನದ ವೈವಿಧ್ಯತೆ, ಜೈನ-ವೈದಿಕಯೋಗಗಳ ಸಾಮರಸ್ಯ, ಯೋಗಮಾರ್ಗದಲ್ಲಿ ಜೈನ-ಜೈನೇತರರ ಸಾಮ್ಯ-ವೈಷಮ್ಯಗಳು, ಜೈನರ ಅಸಂದೃಷ್ಟಿ ವೈದಿಕರ ಅಷ್ಟಾಂಗಯೋಗ, ಜೈನ-ಯೋಗಪ್ರತಿಪಾದನೆಯಲ್ಲಿ ಜ್ಞಾನಾರ್ಣವದ ಸ್ಥಾನ, ಶ್ರುತಸಮನ್ವಯದ ಸಾರಿಯಲ್ಲಿ ವ್ಯಾಖ್ಯೆಯ ರಚನೆಯ ಕೌತುಕ, ಯೋಗಶಬ್ದಾರ್ಥ, ಅಲ್ಲಿ ಮನಸ್ಸಿನ ಸ್ಥಾನ. ವೈದಿಕದರ್ಶನದಲ್ಲಿ ಯೋಗಶಬ್ದಾರ್ಥ- ಪಾತಂಜಲ ಯೋಗಸ್ಥಾನಗಳಾದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಇವುಗಳ ಸ್ವರೂಪ ವಿವೇಚನಂ, ಮುಂತಾಂತರದಲ್ಲಿ ಯಮನಿಯಮಗಳಂ ಬಿಟ್ಟು ಆರುಯೋಗಸ್ಥಾನಗಳ ವಿವೇಚನೆ ಇದಲ್ಲದೆ ಉತ್ಸಾಹ, ನಿಶ್ಚಯ, ಧೈರ್ಯ, ಸಂತೋಷ, ತತ್ತ್ವದರ್ಶನ ಜನಪದತ್ಯಾಗ ಇವುಗಳಿಂದ ಯೋಗಸಿದ್ಧಿಯ ದಾರಿಯ ವಿವೇಚನೆಯಲ್ಲಿ ಉತ್ಸಾಹ-ನಿಶ್ಚಯಗಳ ವಿವರಣ; ಇಷ್ಟನ್ನು ತಿಳಿದಾಯಿತು.

ಇನ್ನು ಮುಂದೆ ಓದಿ.

ನಿಶ್ಚಯ—ಉತ್ಸಾಹವಮಾತ್ರ ಯೋಗಸಿದ್ಧಿಯನ್ನು ಸಾಧಿಸಲಾರದು. ಆದರೆ ಯೋಗಸಿದ್ಧಿಗೆ ದಾರಿಯನ್ನು ಸುಗಮವಾದ ತಳಹದಿಯ ಮೇಲೆ ನಿಲ್ಲಿಸುತ್ತದೆ. ಕಾರಣ ಉತ್ಸಾಹಾನುಗುಣವಾದ ಗುರಿ ಇಸಬೇಕು. ಇದೇ ನಿಶ್ಚಿತ ಯೋಗಸಿದ್ಧಿಜ್ಞಾನ. ಈ ನಿಶ್ಚಯವು ಜ್ಞಾನ. ಈ ಜ್ಞಾನ ತಥ್ಯವಾದುದು ಇಲ್ಲಿ ಸಂಶಯಕ್ಕೆಡೆಯಿಲ್ಲ. ಇಂತಹ ತಥ್ಯಜ್ಞಾನವು ಯೋಗಸಿದ್ಧಿಗೆ ಪೂರಕ

ಧೈರ್ಯ—ಉತ್ಸಾಹದಿಂದ ಮುನ್ನುಗ್ಗಿ, ನಿಶ್ಚಯಜ್ಞಾನದಿಂದ ಆ ಯೋಗಸಿದ್ಧಿಯ ದಾರಿಯಲ್ಲಿ ಸಾಗುವಾತನಿಗೆ ಎಡರುತೊಡರುಗಳಿಗೇನೂ ಕಮ್ಮಿಯಿಲ್ಲ. ಆಗ ಒದಗಬಹುದಾದ ಕ್ಷುದ್ರವಾದ ಹೃದಯ ದೌರ್ಬಲ್ಯವನ್ನು ಒತ್ತರಿಸಿ ಮುನ್ನುಗ್ಗುವ ಧೈರ್ಯ ಅತ್ಯಾವಶ್ಯಕ. ಧೀರನಲ್ಲಿರುವ ಎದೆಗಾರಿಕೆ ಧೈರ್ಯ. ಕಣ್ಣಿಗೆಕಾಣದ ಕೈಗೆ ಎಟುಕಲಾರದ ಯೋಗಸಿದ್ಧಿಗೆ ಪ್ರಯತ್ನಿಸುವಾತ ಯುದ್ಧಭೂಮಿಯಲ್ಲಿ ಜಯಾಪಜಯಗಳನ್ನು ಕಡೆಗಣಿಸಿ ಹಣಾಹಣಿಯಾಗಿ ಫಲವನ್ನು ಗೌಣವಾಗಿಟ್ಟು ಹೋರಾಡುವ ವೀರಯೋಧನಂತೆ ಹೆಜ್ಜೆಹೆಜ್ಜೆಗೂ ಮೇಲೇರಿಬರುವ ಕಾಮಕ್ರೋಧಾದಿಗಳನ್ನು ಜಯಿಸುವ ವೀರಗುಣವನ್ನು ಮೈಗೂಡಿಸಿಕೊಳ್ಳಬೇಕು. ಆಗಲೇ ಯೋಗಸಿದ್ಧಿ ಹತ್ತಿರವಾದಂತೆಯೇ ಸರಿ

ಸಂತೋಷ—ಉತ್ಸಾಹಸಂಪನ್ನನಾಗಿ, ಯೋಗಸಿದ್ಧಿಯ ನಿಶ್ಚಯಜ್ಞಾನವನ್ನು ಅದರ ದಾರಿಯಲ್ಲಿ ಸಾಗುವ ಧೈರ್ಯಗುಣವನ್ನು ಮೈಗೂಡಿಸಿಕೊಳ್ಳುವಾಗ ಸಂತೋಷಾಮೃತಪಾಯಿಯಾಗಲೇಬೇಕು ಇಲ್ಲದಿದ್ದರೆ ಬೇಕುಬೇಡಗಳ ಸುಳಿಯಲ್ಲಿ ಸಿಲುಕಿ ಉದಾಸೀನನಾಗಿ ಆಕಸ್ಮಿಕವಾಗಿ ಅಗಾಧಜಲರಾಶಿಯಲ್ಲಿ ಬಿದ್ದ ಮುಗ್ಧಜೀವಿಯಂತೆ ಕಂಡತ್ತ ಅತ್ತಿತ್ತ ನಡೆದರೆ ಅದರಿಂದ ಆತ್ಮತೃಪ್ತಿಗೆ ಕಂಟಕ. ಆದ್ದರಿಂದ ಸಂತೋಷಚಿತ್ತನಾಗಿರುವುದು ಅನಿವಾರ್ಯ. ಸುಖ-ದುಃಖಗಳನ್ನು ಸಮವಾಗಿರಿಸಿ ಲಾಭಾಲಾಭಗಳನ್ನು ಎಣಿಸದೆ ಜಯಾಪಜಯಗಳನ್ನು ತೃಣೀಕರಿಸಿ ಯೋಗಸಿದ್ಧಿಯ ಕಾರ್ಯದಲ್ಲಿ ಸಂತೃಪ್ತತೆಯಲ್ಲಿ ಮುಂದುವರಿಯುವಾತನ ಸಂತುಷ್ಟಾಂತರಂಗವುಳ್ಳ ಚಿತ್ತವೇ ಸಂತೋಷ. ಈ ಸಂತೋಷ ಯೋಗಸಿದ್ಧಿಯಲ್ಲಿ ಪ್ರಮುಖಸಾಧನೆಯೂ ಹೌದು !

ತತ್ತ್ವದರ್ಶನ- ಉತ್ಸಾಹ-ನಿಶ್ಚಯ-ಧೈರ್ಯ-ಸಂತೋಷಗಳಿಂದ ಯೋಗಸಿದ್ಧಿಗೆ ಹೆಜ್ಜೆಯಿಟ್ಟವನಿಗೆ ತತ್ತ್ವದರ್ಶನ ಅತ್ಯಾವಶ್ಯಕ ಇಲ್ಲದೆ ಇದ್ದರೆ ಅವುಗಳೆಲ್ಲಾ ವ್ಯರ್ಥವಾದೀತು. ತತ್ತ್ವವೆಂದರೆ ಜಗತ್ತಿನ ನಶ್ವರತೆ, ನಿತ್ಯತೆ ತತ್ಪ್ರಾಪ್ತ್ಯುಪಾಯ ಇವುಗಳ ನಿಷ್ಕೃಷ್ಟವಾದ ಸ್ವರೂಪ, ಇವುಗಳ ದರ್ಶನ, ತಿಳುವಳಿಕೆ.

ಏತಾನ್ಯೇವಾಹುಃ ಕೇಚಿಚ್ಚ ಮನಸ್ಸ್ಥೈರ್ಯಾಯ ಶುದ್ಧಯೇ ।
ತಸ್ಮಿನ್ ಸ್ಥಿರೀಕೃತೇ ಸಾಕ್ಷಾತ್ ಸ್ವಾರ್ಥಸಿದ್ಧಿರ್ಧ್ರುವಂ ಭವೇತ್ ॥೨॥

ಯಮಾದಿಷು ಕೃತಾಭ್ಯಾಸಃ ನಿಸ್ಸಂಗೋ ನಿರ್ಮಮೋ ಮುನಿಃ।
ರಾಗಾದಿಕ್ಲೇಶನಿರ್ಮುಕ್ತಂ ಕರೋತಿ ಸ್ವವಶಂ ಮನಃ ॥೩

---

ಈ ತತ್ತ್ವದ ತಿಳುವಳಿಕೆಯಿಂದ ಅದನ್ನು ಪಡೆಯುವ ಹಂಬಲ ಹೆಚ್ಚಿ ಜೀ ಉನ್ನತಸಾಧಕನಾಗಿ ಯೋಗಸಿದ್ಧಿಯನ್ನು ಪಡೆಯುವನು.

ಮುನಿಯ ಜನಪದತ್ಯಾಗ-ಈ ಮೇಲಿನ ಐದು ವಿಷಯಗಳು ಕೈಗೂಡುವುದ ಆತ್ಮಧ್ಯಾನತತ್ಪರನಾದ ಮನನ ಶೀಲನಾದ ಮುನಿಗೆ ಮಾತ್ರ. ಇಂತಹ ಮುನಿ ಲೌಕಿಕ ಸಂಸಾರಸಾಗರದಲ್ಲಿ ತೊಳಲಾಡುತ್ತಿದ್ದರೆ ಎಂದೂ ಗು ಯನ್ನು ಮುಟ್ಟಲಾರ. ಆದರೆ ಆತ ಜನಸಮ್ಮರ್ದದಿಂದ ಕೂಡಿದ ನಗರ ಗ್ರಾಮ-ಆರಾಮಗಳನ್ನು ಬಿಟ್ಟು ಏಕಾಂತವಾಸಿಯಾಗಬೇಕು. ಆಗಲೀಗ ಯೋಗಸಿದ್ಧಿಯನ್ನು ಪಡೆಯುವ ವಾತಾವರಣ ಸೃಷ್ಟವಾಗುತ್ತದೆ.

ಉತ್ಸಾಹಾದಿಗಳಿಂದ ಯೋಗಸಿದ್ಧಿಯೆಂಬುದು ಕೆಲವರ ಮತ. ಆದರೆ ಇವು ಸಾಕ್ಷಾತ್ತಾಗಿ ಯೋಗಸಿದ್ಧಿಗೆ ಪೂರಕವಲ್ಲ. ಆದರೆ ಮನಸ್ಸ್ಥೈರ್ಯ-ಶುದ್ಧ್ಯಾದಿ ಗಳಿಗೆ ಇವೇ ಕಾರಣ. ಇದೊಂದು ಮತಾಂತರ. ಅದನ್ನು ಆಚಾರ್ಯರು ಇಂತ ವಿಸ್ತರಿಸುತ್ತಾರೆ—

ಏತಾನ್ಯೇವಾಹುಃ ಇತ್ಯಾದಿಯಾಗಿ. ಮನಸ್ಸು ಚಂಚಲ; ಮತ್ತೆ ಪ್ರಮಾದ-ಕರ; ಮತ್ತೆ ಬಲಶಾಲಿಯಲ್ಲದೆ ದೃಢವೂ ಹೌದು. ಇಂತಹ ಮನಸ್ಸಿನ ಚಂಚಲತೆ ಯನ್ನು ತಡೆದಿಟ್ಟು ಮನಸ್ಸಿನ ಸ್ಥೈರ್ಯತೆಯನ್ನು ಪಡೆಯಲು ಹಾಗೂ ಆತ್ಮಶುದ್ಧಿ-ಯನ್ನು ಹೊಂದಲು ಈ ಆರೇ ಕಾರಣ. ಮನಸ್ಸೊಂದು ಸ್ಥಿರವಾದರೆ ನಮ್ಮ ಇಷ್ಟಾರ್ಥ ಸಿದ್ಧಿಸುತ್ತದೆ. ಇದು ಸತ್ಯ. ಇದು ಕೆಲವರ ಮತ.

ಮನೋಜಯಕ್ಕೆ ಮೂಲಕಾರಣ ಯಮಾದಿನಿಯಮಗಳು. ಈ ನಿಯಮ ಗಳೇ ಮನಸ್ಸನ್ನು ಸ್ವವಶದಲ್ಲಿರಿಸಲು ಅರ್ಹ; ಎಂದು ಈ ಮುಂದಿನ ಕಾರಿಕೆಯಲ್ಲಿ ಆಚಾರ್ಯರು ವಿವರಿಸುತ್ತಾರೆ —

ಅಷ್ಟಾವಂಗಾನಿ ಯೋಗಸ್ಯ ಯಾನ್ಯುಕ್ತಾನ್ಯಾರ್ಯಸೂರಿಭಿಃ ।
ಚಿತ್ತಪ್ರಸತ್ತಿಮಾರ್ಗೇಣ ಬೀಜಂ ಸ್ಯುಸ್ತಾನಿ ಮುಕ್ತಯೇ ॥೪॥

ಅಂಗಾನ್ಯಷ್ಟಾವಪಿ ಪ್ರಾಯಃ ಪ್ರಯೋಜನವಶಾತ್ ಕ್ವಚಿತ್।
ಉಕ್ತಾನ್ಯತ್ರೈವ ತಾನ್ಯುಚ್ಚೈಃ ವಿದಾಂಕುರ್ವಂತು ಯೋಗಿನಃ ॥೫॥

---

ಯಮಾದಿಷು ಇತ್ಯಾದಿಯಾಗಿ. ಮುನಿ ಮನನಶೀಲ. ಆತ ನಿಸ್ಸಂಗನಾದರೆ ಮನನಶೀಲತೆ ಬೇರೂರುತ್ತದೆ. ಅದು ಬೇರೂರಲು ನನ್ನದು ಎಂಬುದೊಂದರ ಸೋಂಕು ಆತನತ್ತ ಸುಳಿಯಬಾರದು. ಇಂತಹ ನಿಸ್ಸಂಗತ್ವ-ನಿರ್ಮಮತ್ವಗಳು ಮುನಿಯಲ್ಲಿ ಒದಗಬೇಕಾದರೆ ಯಮ-ನಿಯಮಾದಿಗಳನ್ನು ಅಭ್ಯಸಿಸಬೇಕು. ಈ ಅಭ್ಯಾಸ ವೈರಾಗ್ಯಕ್ಕೆ ಹೆದ್ದಾರಿ ಆದರಿಂದ ಮನಸ್ಸು ಪರಿಶುದ್ಧವಾಗುತ್ತದೆ. ಅಂತಹ ಮನಕ್ಕೆ ರಾಗದ್ವೇಷಾದಿಗಳ ಸೋಂಕು ತಟ್ಟದು ಆಗಲೀಗ ಆ ಮನಸ್ಸು ಸ್ವಾಧೀನದಲ್ಲಿ ನಿಲ್ಲುತ್ತದೆ

ಯಮನಿಯಮಾದ್ಯಷ್ಟಾಂಗಗಳಿಗೆ ಪರಂಪರಯಾ ಮುಕ್ತಿಸಾಧನೆಯ ಕಾರಣತ್ವವನ್ನು ಪೂರ್ವಾಚಾರ್ಯೋಕ್ತ್ಯನುವಾದದ್ವಾರಾ ಗ್ರಂಥಕಾರರು ಸಮರ್ಥಿಸುತ್ತಾರೆ–

ಅಷ್ಟಾವಂಗಾನಿ ಯೋಗಸ್ಯ ಇತ್ಯಾದಿಯಾಗಿ. ಲೋಕವಿಶ್ರಾಂತಕೀರ್ತಿಗಳಾದ ಪಂತಜಲ್ಯಾದಿಗಳು ಯೋಸಿದ್ಧಿಗೆ ಯಮನಿಯಮಾದಿಗಳು ಅಷ್ಟಾಂಗವೆಂದು ಬಣ್ಣಿಸಿದ್ದಾರೆ. ಆದರೆ ಅವೆಲ್ಲ ಸಾಕ್ಷಾತ್ ಯೋಗಸಿದ್ಧಿಸಾಧಕಗಳಲ್ಲ ಆದರೆ ಮನಸ್ಸಿನ ಪ್ರಸನ್ನತೆಗೆ ಅವುಗಳು ಕಾರಣ. ಆದ್ದರಿಂದ ಮುನಿಯು ತನ್ಮೂಲಕ 'ಆತ್ಮನ್ಯೇವಾತ್ಮನಾ ತುಷ್ಟಃ' ಆತ್ಮಧ್ಯಾನತತ್ಪರನಾದ ಮುನಿಯು ಮುಕ್ತಿಯನ್ನು ಸಾಧಿಸುತ್ತಾನೆ. ಆದರಿಂದ ಇವುಗಳು ಮುಕ್ತಿಗೆ ಪರಂಪರಯಾ ಹೇತುಗಳಾಗಿವೆ.

ಯಮನಿಯಮಾದಿ-ಅಷ್ಟಾಂಗಗಳ ವರ್ಣನೆಯ ಕಾರಣವನ್ನಿಂತು ಆಚ [illegible] ಬಣ್ಣಿಸುತ್ತಾರೆ –

ಅಂಗಾನ್ಯಷ್ಟಾವಪಿ ಇತ್ಯಾದಿಯಾಗಿ. ಯೋಗಾಂಗಗಳು ಎಂಟು. ಪ್ರಾಯಿಕ-ವಾಗಿ ಅವುಗಳ ಪ್ರಯೋಜನ ಹೆಚ್ಚು ಆದ್ದರಿಂದ ಈ ಘಟ್ಟದಲ್ಲಿಯೇ ಅದನ್ನು ಬಣ್ಣಿಸಲಾಯಿತು ಯೋಗಿಗಳು ಇದನ್ನು ತಿಳಿದು ಮನನಮಾಡಿ ಸಾರ್ಥಕಪಡಿಸಿಕೊಳ್ಳಲಿ.

ಮನೋರೋಧೇ ಭವೇದ್ರುದ್ಧಂ ವಿಶ್ವಮೇವ ಶರೀರಿಭಿಃ ।
ಪ್ರಾಯೋಸಂವೃತಚಿತ್ತಾನಾಂ ಶೇಷರೋಧೋಽಪ್ಯಪಾರ್ಥಕಃ ॥೬॥

ಕಲಂಕವಿಲಯಃ ಸಾಕ್ಷಾತ್ ಮನಶ್ಶುದ್ಧ್ಯೈವ ದೇಹಿನಾಮ್ ।
ತಸ್ಮಿನ್ನಪಿ ಸಮೀಭೂತೇ ಸ್ವಾರ್ಥಸಿದ್ಧಿರುದಾಹೃತಾ ॥೭॥

---

ವಿಶ್ವಸಂಚಾರಿಯಾದ ಮನದ ಸಂರೋಧವೇ ಆತ್ಮಸಿದ್ಧಿಗೆ ಹೆದ್ದಾರಿಯೆಂಬುದನ್ನು ಆಚಾರ್ಯರಿಂತು ಬಣ್ಣಿಸುತ್ತಾರೆ-

ಮನೋರೋಧೇ ಇತ್ಯಾದಿಯಾಗಿ. ಮನಸ್ಸು ಎತ್ತೆತ್ತ ಚಲಿಸಿದಂತೆ ಅತ್ತಿತ್ತ ಸಾಗುವಂತಹುದುದು. ಗಾಳಿಯನ್ನಾದರೂ ತಡೆದಿಡಬಹುದು ಆದರೆ ಮನವನ್ನು ತಡೆದಿಡಲು ಅಸಾಧ್ಯ. ಇಂತಹ ಮನಸ್ಸಿನ ನಿಗ್ರಹ, ಸಂರೋಧ, ಸ್ವವಶೀಕರಣ ಯಾವ ಜೀವಿ ಮಾಡುತ್ತಾನೆಯೋ ಆತನಿಗೆ ಲೋಕವೇ ಸ್ವವಶದಲ್ಲಿರುತ್ತದೆ. ಮನೋಪರೋಧವಿಲ್ಲದೆ ಇಂದ್ರಿಯೋಪರೋಧವಮಾಡಿದರೆ ಅದು ವ್ಯರ್ಥ. ದೈಹಿಕ ಕ್ರಿಯೆಗಳೆಲ್ಲವನ್ನು ಹುಚ್ಚೆದ್ದ ಮನ ತಾನೇ ವಗಾಡಿ ಜೀವಿಯನ್ನು ಅಧಃಪಾತಾಳಕ್ಕೆ ತಳ್ಳುತ್ತದೆ. ಸಾಮಾನ್ಯಸ್ಥಿತಿಯಲ್ಲಿ ವಿಷಯವಸ್ತುಗಳತ್ತ ಮನ ಚಲಿಸಿದಾಗ ಇಂದ್ರಿಯ ತನ್ನ ಚಾಪಲ್ಯವನ್ನು ತಣಿಸಿಕೊಳ್ಳುವುದು ಸಹಜ-ಸ್ವಭಾವಧರ್ಮವಲ್ಲವೆ ? ಮನವನ್ನು ತಡೆಹಿಡಿದಿಡದೆ ಇಂದ್ರಿಯಗಳನ್ನು ಬಚ್ಚಿಡುವುದು ಅರ್ಥವಿಲ್ಲದ್ದಾಗಿದೆ. ಆದ್ದರಿಂದ ಐಶ್ವರ್ಯವನ್ನು ಬಚ್ಚಿಡುವಂತೆ ಆ ಮನವನ್ನು ಅದು ತೆಡೆಹಿಡಿದು ಸನ್ಮಾರ್ಗದಲ್ಲಿ ಓಡುವಂತೆ ಸ್ವವಶದಲ್ಲಿರಿಸಿಕೊಳ್ಳಬೇಕೆಂಬುದು ತಾತ್ಪರ್ಯ.

ಮನಶ್ಶುದ್ಧಿಯೇ ಆತ್ಮಸಿದ್ಧಿಗೆ ಹೆದ್ದಾರಿಯೆಂಬುದನ್ನು ಆಚಾರ್ಯರು ರಸವತ್ತಾಗಿ ಬಣ್ಣಿಸುತ್ತಾರೆ—

ಕಲಂಕವಿಲಯಃ ಇತ್ಯಾದಿಯಾಗಿ. ದೇಹವಂತ ಜೀವಿ. ಈ ಜೀವಿ ಮನವನ್ನು ಸ್ವವಶದಲ್ಲಿರಿಸಿ ಅದನ್ನು ಸನ್ಮಾರ್ಗದತ್ತ ಒಯ್ಯಬೇಕು. ಆಗಲೀಗ ಸರ್ವಕಶ್ಮಲಗಳೂ ತಾನೇ ತಾನಾಗಿ ದೂರಸರಿದು ಮನವು ಶುದ್ಧಸ್ಫಟಿಕದಂತೆ, ಪರಿಶುಭ್ರ ಕನ್ನಡಿಯಂತೆ ಹೊಳೆಯುತ್ತದೆ. ಇಂತಹ ಮನದ ಮೇಲೆ ರಾಗದ್ವೇಷಾದಿಗಳ ಪರಿಣಾಮವೆಂತಾದೀತು ? ಆಗಲೀಗ ಸ್ವಾರ್ಥಸಿದ್ಧಿಯೂ ತಾನೇತಾನಾಗಿ ಆಗಿ ಯೋಗಸಿದ್ಧಿ ಕೈಗೊಡುತ್ತದೆ ಇದು ಆಚಾರ್ಯರ ಭಾವ.

# ಚಂದ್ರಪ್ರಭಾಟ್ರಸ್ಟ್
## ಜಿನವಾಣಿ ಕಾರ್ಯಾಲಯ
ನಂ. ೬೭. ಡಿ ಬನುಮಯ್ಯರಸ್ತೆ, ಮೈಸೂರು.

ಜಿನವಾಣಿ REG. NO. K.R.N.N. 17

೧೩) ಎ. ಸಿ. ಎ. ದೇವೇಂದ್ರಪ್ಪನವರು, ಮೈಸೂರು
೧೪) ಪಾರ್ಶ್ವನಾಥಯ್ಯನವರು, ಬೆಂಗಳೂರು
೧೫) ಬಿ ಜೆ. ಸುರೇಂದ್ರಕುಮಾರ್,
೧೬) ಎಂ. ಕೆ. ಅನಂತಯ್ಯನವರು, ವೈನಾಡು
೧೭) ಶ್ರೀಮತಿ ಚಂದ್ರಮತಿ ಅಮ್ಮನವರು, ವೈನಾಡು
೧೮) ಪಿ. ಡಿ. ಚಂದ್ರಪ್ರಭ, ರೌಡಿಕೆರೆ
೧೯) ಎಸ್. ಎಸ್. ಡಿ. ನಾಗರಾಜಯ್ಯನವರು, ಶ್ರವಳಬೆಳಗೊಳ

To

BOOK POST

**ಜಿನವಾಣಿಕಾರ್ಯಾಲಯ**
ನಂ.67. ಡಿ. ಬನುಮಯ್ಯ ರಸ್ತೆ, ಮೈಸೂರು-೫೭೦೦೦೧



The Jinavani, the monthly Kannada Magazine is Edited and Published by Sri M.C. Padmanabhasharma & Printed by B.V. Alahiyamanavalan, Propritor, Sri Vijayalakshmi Press, 355, D Subbiah Road, MYSORE- 570001

ಜೈನಸಾಹಿತ್ಯಪ್ರಚಾರಸಂಘದ ಜೈನಧಾರ್ಮಿಕ ಕನ್ನಡ ಮಾಸಿಕ ಮುಖಪತ್ರಿಕೆ

# ಜಿ ನ ವಾ ಣಿ



## ಏಪ್ರಿಲ್ 10 1984

## ಅನಂತಕೃತಜ್ಞತಾಭಿನಂದನಗಳು



**ಜಿನವಾಣೀರಜತೋತ್ಸವ ಸ್ಮಾರಕವಾದ**

ಶ್ರೀ ಮಹಾವೀರಸ್ವಾಮಿಯ

**೨೫೦೦ ನೇ ವೀರನಿರ್ವಾಣವಿಶೇಷಸಂಚಿಕೆಯಲ್ಲಿನ**

ಜಿನವಾಣೀಸಂಪಾದಕನ

**ಎಂ. ಸಿ. ಪದ್ಮನಾಭ ಶರ್ಮನಾದ ನನ್ನ**

**ವಿಶೇಷ ನಿವೇದನಪ್ರಾರ್ಥನಾನುಸಾರ**

**೧೯೭೪ನೇ ಏಪ್ರಿಲ್ ಸಂಚಿಕೆಯ**

**ಸಂಪೂರ್ಣ ಪ್ರಕಟಣಾದಿಗಳಿಗೆ ಪರಮಸಹಕಾರಿಗಳಾದ**

ಮೈಸೂರಿನಲ್ಲಿರುವ ನ್ಯಾಯಧರ್ಮ ಪ್ರವರ್ತಕರಾದ

**ಸನ್ಮಾನ್ಯಶ್ರೀ ರಘುಚಂದ್ರ ಅಜ್ಜರವರಿಗೆ**

ಅನಂತಹೃತ್ಪೂರ್ವಕಕೃತಜ್ಞತಾಯುಕ್ತವಾದ ಧನ್ಯವಾದಗಳನ್ನು ಅರ್ಪಿಸುವೆವು.

**ಈ ಔದಾರ್ಯ ವಾತ್ಸಲ್ಯಗಳೇ ನಮ್ಮ ರಕ್ಷಾಕವಚ !!**

**ಇದೇ ಈ ಸಂಚಿಕೆಯ**

**ಮುದ್ರಣಪ್ರಕಟಣಾದಿಗಳಿಗೆ ಆಧಾರ!!!**

ಇಂತು ಕೃತಜ್ಞ

**ಮೈಸೂರು**
೧೦-೪-೭೪

**ಎಂ. ಸಿ ಪದ್ಮನಾಭಶರ್ಮ**
ಸಂಪಾದಕ, ಜಿನವಾಣಿ

॥ಓಮ್॥

॥ ಓಮ್ ನಮಃಸ್ಸಿದ್ಧೇಭ್ಯಃ ॥

# ಜಿ ನ ವಾ ಣಿ

# JINAVANI

ಜೈನಸಾಹಿತ್ಯ ಪ್ರಚಾರಸಂಘದ ಮುಖಪತ್ರಿಕೆ

## ಜೈ ನ ಧಾ ರ್ಮಿ ಕ

## ಕ ನ್ನ ಡ ಮಾ ಸ ಪ ತ್ರಿ ಕೆ

KANNADA MONTHLY MAGZINE

ಸತ್ವೇಷು ಮೈತ್ರೀಂ ಗುಣಿಷು ಪ್ರಮೋದಂ ಕ್ಲಿಷ್ಟೇಷು ಜೀವೇಷು ಕೃಪಾಪರತ್ವಮ್
ಮಾಧ್ಯಸ್ಥಭಾವಂ ವಿಪರೀತವೃತ್ತೌ ಸದಾ ಮಮಾತ್ಮಾ ವಿದಧಾತು ದೇವ ! ॥

–ಅಮಿತಗತಿ

ಎಲೈ ! ದೇವನೇ ! ಪ್ರಾಣಿಗಳಲ್ಲಿ ಸ್ನೇಹವನ್ನೂ, ಗುಣವಂತರಲ್ಲಿ ಸಂತೋಷವನ್ನೂ, ಕಾಯಕ್ಲೇಶ-ಮನಃಕ್ಲೇಶಗಳಲ್ಲಿ ತೊಳಲಾಡುವ ಪ್ರಾಣಿಗಳಲ್ಲಿ ದಯೆಯನ್ನೂ, ಶಾಸ್ತ್ರಾಗಮಾಪ್ತವ್ಯತಿರೇಕಮಾರ್ಗಾಶ್ರಯಿಗಳಲ್ಲಿ ಮಾಧ್ಯಸ್ಥಭಾವನೆಯನ್ನೂ ನನಗೆ ಉಂಟುಮಾಡು.

M.P.A. ತಿಲಕ್, M.A., ಮೈಸೂರು.

ಮಂಡಲ ೩೩-೩೪) ಮೈಸೂರು ೧೧ನೆಯ ಏಪ್ರಿಲ್ ೧೯೮೪ (ಕಿರಣ– ೬
(ಗೊಮ್ಮಟ-ಚಾವುಂಡರಾಯ ಶಕ– ೧೦೦೩)

## ಪರಮಾತ್ಮಸ್ತುತಿ

ಜ್ಞಾನಲಕ್ಷ್ಮೀಘನಾಶ್ಲೇಷಪ್ರಭವಾನಂದನಂದಿತಮ್।
ನಿಷ್ಠಿತಾರ್ಥಮಜಂ ನೌಮಿ ಪರಮಾತ್ಮಾನಮವ್ಯಯಮ್॥

ಸಮಸ್ತ ಚರಾಚರಾತ್ಮಕಪ್ರಪಂಚತತ್ತ್ವಜ್ಞಾನವನ್ನು ಹೊಂದಿ ತದ್ದ್ವಾರಾ ಮೋಕ್ಷಲಕ್ಷ್ಮೀಪ್ರಾಪ್ತಿಗೆ ಕಾರಣವಾದ ವೀತರಾಗರೂಪವಾದ ವಿಶಿಷ್ಟಗುಣವನ್ನು ದೃಢಾಲಿಂಗನಮಾಡಿ ಆದರಿಂದ ಉಂಟಾಗುವ ದಿವ್ಯಾತ್ಮಾನಂದಾನುಭವವನ್ನು ಹೊಂದಿ ಸಂತುಷ್ಟಾಂತರಂಗನಾಗಿರುವವನು ಯಾವನೋ ಅವನೇ ಅಜ-ಮನುಷ್ಯತ್ವದಿಂದ ದೈವತ್ವಕ್ಕೇರಿದ ಪರಮಾತ್ಮ. ಆತ ನಿಷ್ಠಿತಾರ್ಥ– ಈ ಜಗತ್ತಿನಲ್ಲಿ, ಜಗದಿಂದ ಅವನಿಗೆ ಆಗ

ಬೇಕಾದುದೇನೂ ಇಲ್ಲ. ಆತ ನಿತ್ಯ ಆ ಪರಮಾತ್ಮನಿಗೆ ಐಹಿಕಾಮುಷ್ಮಿಕಫಲಪ್ರಾಪ್ತಿಗಾಗಿ ಆತ್ಮಾತ್ಮೀಯಸಮರ್ಪಣಾರೂಪವಾದ ನಮನವನ್ನು ಮಾಡುವೆನು.

ಸಂಗ್ರಹ: ಎಂ. ಪಿ. ಅರವಿಂದತಿಲಕ್, M.A. ಮೈಸೂರು.

★★★★★★★★★★★★★★★★★★★★★★




## ಭಗವಾನ್ ಮಹಾವೀರ ತೀರ್ಥಂಕರರು

ಮತ್ತು

## ಅವರ ಲೋಕೋಜ್ಜೀವನ ಕಾರ್ಯಗಳು

### ತೀರ್ಥಂಕರರು, ಅವರ ಸಂಖ್ಯೆ, ಜನನಕಾಲಾದಿಗಳು

ತೀರ್ಥಂಕರರೆಂದು ಜಿನರ ನಾಮಧೇಯ. ಇದರ ಅಂತರಾರ್ಥ ಇಷ್ಟು- "ಶಾಸ್ತ್ರಸ್ಯ ಪುಣ್ಯಕ್ಷೇತ್ರಸ್ಯವಾ ಕರಃ" ಎಂಬ ವ್ಯುತ್ಪತ್ತಿಯಿಂದ ಶಾಸ್ತ್ರದ ಪುಣ್ಯಕ್ಷೇತ್ರದ ಸಂಕೇತಕ್ಕೆ ಕಾರಣ ತೀರ್ಥಕರ ಎಂದಾಗುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ—ತನ್ನ ಜನ್ಮದಿಂದ ಯಾವ ಪ್ರದೇಶವನ್ನು ಮಹಾಕ್ಷೇತ್ರವನ್ನಾಗಿ ಯಾವನು ಆಗಿಸುತ್ತಾನೆಯೋ ಮತ್ತೆ ಯಾವ ಪುಣ್ಯಕ್ಷೇತ್ರದಲ್ಲಿ ಉದಯಿಸಿದಾತ ಸರ್ವಕರ್ಮಗಳನ್ನು ಕಳೆದು ತನ್ನ ದಿವ್ಯಧ್ವನಿಯಿಂದ ಜೈನಶಾಸ್ತ್ರ ಪ್ರವರ್ತಕನಾಗಿ ಲೋಕವನ್ನು ಉದ್ಧರಿಸುತ್ತಾನೆಯೋ ಆತನೇ ತೀರ್ಥಂಕರ- ಜಿನ; ಎಂಬ ಅರ್ಥಬರುತ್ತದೆ. ಇದನ್ನೇ "ಚತುರ್ದಶ-ವಿದ್ಯಾನಾಂ ಬಾಹ್ಯವಿದ್ಯಾಮಯಾನಾಂ ಚ ಪ್ರಣೇತಾ ಪ್ರವಕ್ತಾ-ತೀರ್ಥಕರಃ" ಎಂಬ ಅಭಿಯುಕ್ತೋಕ್ತಿಯು ಸಮರ್ಥಿಸುತ್ತದೆ. ಯಾವಾತನು ಚತುರ್ದಶ ವಿದ್ಯೆ (೧೪ ವಿದ್ಯೆ) ಗಳ ಮತ್ತೆ ಬಾಹ್ಯವಿದ್ಯೆಗಳ ಕರ್ತೃವೋ ಮತ್ತೆ ಉಪದೇಶಕನೋ ಆತನೇ ತೀರ್ಥಂಕರ; ಎಂಬ ಉಕ್ತಿ ಸಮರ್ಥಿಸುತ್ತದೆ

ಇಂತಹ ತೀರ್ಥಂಕರರು ಭೂತ-ಭವಿಷ್ಯತ್-ವರ್ತಮಾನಕಾಲಗಳಲ್ಲಿ ಆಗುತ್ತಾರೆ. ಅವರಿಂದ ಅವರ ಉಪದೇಶಾಮೃತದಿಂದ ಜಗತ್ತು ತನ್ನ ಉದ್ಧಾರದತ್ತ ಮುನ್ನಡೆಯುತ್ತದೆ.

ಜೈನಶಾಸ್ತ್ರಗಳ ರೀತ್ಯಾ ಮೇಲಿನ ಕಾಲತ್ರಯಗಳಲ್ಲಿ ೨೪-೨೪ ಜನ ತೀರ್ಥಂಕರರು ಉದಯಿಸುತ್ತಾರೆ; ಉದಯಿಸಿದ್ದಾರೆ; ಉದಯಿಸಲಿದ್ದಾರೆ. ಹೀಗೆ ಉದಯಿಸಿದ ಜಿನರ ಜನ್ಮಾನುಗುಣವಾದ ಕರ್ಮಬಂಧ ಹರಿದಾಗ ಕುಬೇರನಿರ್ಮಿತಸಮವಸರಣ

ಮಂಟಪದಲ್ಲಿ ಅವರು ವಿರಾಜಮಾನರಾಗಲು ಅವರ ದಿವ್ಯಮುಖದಿಂದ ದಿವ್ಯಧ್ವನಿ ಉದಯಿಸುತ್ತದೆ. ಅದನ್ನು ಗಣಧರರು ವ್ಯಾಖ್ಯಾನಿಸುತ್ತಾರೆ. ಅದೇ ಜೈನಶಾಸ್ತ್ರ.

## ಮಹಾವೀರರ ಜನನಕಾಲ ಅವರ ಬಾಲ್ಯಯೌವನಾದ್ಯವಸ್ಥೆಗಳು

ಜಗತ್ತು ಸಂಸಾರಸಾಗರದಲ್ಲಿ ತೊಳಲಾಡುತ್ತಿದ್ದ ಒಂದು ಸಂದರ್ಭದಲ್ಲಿ ಮಹಾವೀರಜೀವ ತನ್ನ ಹಿಂದಿನ ಭವಗಳನ್ನು ಕಳೆದು ಮಹಾವೀರನಾಗಿ ಉದಯಿಸಿತು. ಇವರು ವರ್ತಮಾನತೀರ್ಥಂಕರರಲ್ಲಿ ಿಳನೆಯವರು. ಇವರ ೭೨ ವರ್ಷ ದೀರ್ಘವಾದ ಜೀವನ ಕ್ರಮದಲ್ಲಿ ೩೦ ವರ್ಷಗಳಷ್ಟುಕಾಲ ಬಾಲ್ಯಯೌವನಗಳಲ್ಲಿ ಕಳೆಯಿತು. ಅವರು ನಂತರ ೧೨ ವರ್ಷಕಾಲ ಕಾಯಕ್ಲೇಶ ಮನಃಕ್ಲೇಶರೂಪವಾದ ತಪ್ಪನ್ನು ಆಚರಿಸಿದರು. ನಂತರ ೪೦ ವರ್ಷಗಳಕಾಲ ಧರ್ಮೋಪದೇಶದಲ್ಲಿ ಆ ಮಹಾತ್ಮನ ಕಾಲಕಳೆಯಿತು. ನಂತರ ಕೊನೆಯಲ್ಲಿ ಪಾವಾಪುರಿಯಲ್ಲಿ ಮೋಕ್ಷವನ್ನು ನಿರ್ವಾಣವನ್ನು ಪಡೆದರು.

ಈ ಮಹಾಪುರುಷ ಕ್ಷತ್ರಿಯವಂಶದಲ್ಲಿ ಜನಿಸಿದ್ದರೂ ಸಂಸಾರ-ಶರೀರ-ಭೋಗಗಳಲ್ಲಿ ವಿರಕ್ತರಾಗಿ ಕೇವಲ ಧರ್ಮವನ್ನು ಆಶ್ರಯಿಸಿ ಮಹಾತ್ಯಾಗಿಯಾದರು. ಇದು ಇವರ ತ್ಯಾಗದ ಹಿರಿಮೆಯನ್ನು ಎತ್ತಿತೋರಿಸುತ್ತದೆ.

ಇವರ ತಪಃಕಾಲದಲ್ಲಿ ಅಜ್ಞಾನಿಗಳಾದ ಕೆಲವರು ಅವರ ತಪಸ್ಸಿಗೆ ಉಪಸರ್ಗವನ್ನು ಉಂಟುಮಾಡುತ್ತಿದ್ದರು. ಅದೆಲ್ಲವನ್ನೂ ಲಕ್ಷಿಸದ ಆ ಮಹಾಪುರುಷ-'ಕ್ಷಮಾ ಶಸ್ತ್ರಂ' ಎಂಬಂತೆ ಕ್ಷಮಾಸ್ತ್ರವನ್ನು ಆಶ್ರಯಿಸಿ ಅದರಿಂದ ಜಗತ್ತನ್ನೇ ಗೆದ್ದರು. ಆಗಲೀಗ ಈ ಜಗತ್ತೇ ಅವರ ಉಪದೇಶವನ್ನು ಕೇಳಲು ಆಚರಿಸಲು ತವಕಗೊಂಡಿತು. ಆಗ ದಯಾಮಯಿಯಾದ ಆ ಭಗವಂತ ತನ್ನ ನಿರ್ವಾಣಕಾಲದ ಕೊನೆಯ ಘಳಿಗೆಯವರಿವಿಗೂ ಉಪದೇಶದಲ್ಲಿಯೇ ಕಾಲವನ್ನು ಕಳೆದರು.

## ಮಹಾವೀರರ ಉಪದೇಶದಲ್ಲಿ ಪ್ರಧಾನವಾದ ಜೈನ ತತ್ತ್ವಶಾಸ್ತ್ರಾರ್ಥಸಾರ

ಮಹಾವೀರರು-ಸಪ್ತತತ್ತ್ವ ನವಪದಾರ್ಥ ಷಟ್-ದ್ರವ್ಯ ಪಂಚಾಸ್ತಿಕಾಯ ಎಂಬ ೨೭ ತತ್ತ್ವಗಳಲ್ಲಿ ಶ್ರದ್ಧಾವಂತನಾಗಿ ಯಾವಾತನು ಅವುಗಳನ್ನು ತನ್ನ ಆಚರಣೆಯಲ್ಲಿ ಅಳವಡಿಸಿಕೊಳ್ಳುವನೋ ಆತ ನಿಶ್ಚಯವಾಗಿ ಮೋಕ್ಷಭಾಗಿಯಾಗುವನೆಂದು ಉಪದೇಶಿಸಿದರು.

## ಮಹಾವೀರರ ಉಪದೇಶದಿಂದ ಜೀವಿಯು ಅರಿಯಬೇಕಾದ ಅಂಶ

ಮಾನವ ಮಾನವತ್ವದಿಂದ ದೈವತ್ವಕ್ಕೇರಲು ಸತತಪ್ರಯತ್ನಶೀಲನಾಗಬೇಕು.

ಅದಕ್ಕೆ ಮಹಾವೀರರ ಉಪದೇಶದಂತೆ ಆಚರಿಸುವುದು ಅತ್ಯಾವಶ್ಯಕ. ಇಂತಹ ಪ್ರಯತ್ನವನ್ನಾದರೂ ಆತ ಮಾಡಿದರೆ ಎಂದಾವರೊಂದುದಿನ ಆತ.

'ಗಚ್ಛತ್ಪಿಪೀಲಿಕಾಪಂಕ್ತಿಃ ಸಮುದ್ರಮಪಿ ಗಚ್ಛತಿ' ಎಂಬಂತೆ ಎಂದರೆ– ನಿಧಾನವಾಗಿ ಚಲಿಸುತ್ತಾ ತನ್ನ ಗತಿಯಿಂದ ಇರುವೆಯ ಸಾಲು ಗುರಿಯನ್ನು ತಲುಪಲು ಬಹುಕಾಲ ತೆಗೆದುಕೊಳ್ಳುವುದಾದರೂ ಎಂದಾದರೊಂದುದಿನ ಅದು ಗುರಿಯನ್ನು (ಸಮುದ್ರವನ್ನು) ತಲಪಿಯೇ ತಲಪುತ್ತದೆ; ಎಂದಹಾಗೆ ತನ್ನ ಕರ್ಮಾನುಷ್ಠಾನಾದಿಗಳಿಂದ ನಾನಾಭವಗಳಲ್ಲಿ ಸುಖದುಃಖಗಳೊಳು ತೊಳಲಾಡಿ ಅಂತ್ಯದಲ್ಲಿ ಶುದ್ಧನಾಗಿ ಆತ್ಮಧ್ಯಾನಮಾಡಿ ಕರ್ಮಗಳನ್ನು ಕೆಡಿಸಿ ಜೀವಿಯು ಆತ್ಮಾನಂದವನ್ನು ತರುವ ನಿರ್ವಾಣವನ್ನು ಹೊಂದಿಯೇ ತೀರುತ್ತಾನೆ.

ಆದ್ದರಿಂದ ಪ್ರತಿಮಾನವನೂ ಪುರುಷಾರ್ಥ ಸಾಧನೆಯನ್ನು ಧರ್ಮಮುಖದಲ್ಲಿ ಮಾಡುತ್ತಾ ಸಮ್ಯಕ್‌ಶ್ರದ್ಧಾನಾದಿಗಳಿಂದ ರತ್ನತ್ರಯಾರಾಧಕನಾಗಿ ಆತ್ಮಮಂಗಳವನ್ನು ಮಾಡಲು ಪ್ರಯತ್ನಿಸಬೇಕೆಂಬುದನ್ನು ನಮಗೆ ಜ್ಞಾಪಿಸುವುದಕ್ಕೇನೇ ಇಂತಹ ಮಹಾಪುರುಷರ ಜಯಂತಿಯ ಆಚರಣೆಯು ನಮ್ಮ ಸಮಾಜದಲ್ಲಿ ಅಭ್ಯಾಸದಲ್ಲಿ ಬಂದಿದೆ. ಈಗಲೀಗ ಈ ೧೩-೪-೬೪ ರಂದು ಶ್ರೀಮಹಾವೀರರ ಜನ್ಮದಿನ. ಇಂದಿನ ದಿನವಾದರೂ ಪ್ರತಿಜೀವಿಯೂ ಆತ್ಮಶೋಧನೆಮಾಡಿಕೊಂಡು ತನ್ನ ಪ್ರವೃತ್ತಿಧರ್ಮಕ್ಕಾಗಿ ಪಶ್ಚಾತ್ತಾಪಪಟ್ಟು ನಿವೃತ್ತಿಧರ್ಮಕ್ಕಾಗಿ ಕಿಂಚಿತ್ತಾದರೂ ಹಾತೊರೆದರೆ ಇದೇ ಈ ಜಯಂತಿಯ ಆಚರಣೆಗೆ ಒಂದು ಅರ್ಥ ಕೊಟ್ಟಂತಾದೀತು!! ಜಯಜಿನೇಂದ್ರಶ್ರೀ ಮಹಾವೀರ ಜಯ.

ಇಂತು ನಮ್ರನಿವೇದಕ,

**ಸಂಪಾದಕ, ಜಿನವಾಣಿ**

## ಸುಭಾಷಿತ

ಹಿಂಸಾಯಾಮನೃತೇ ಸ್ತೇಯೇ ಮೈಥುನೇ ಚ ಪರಿಗ್ರಹೇ।
ವಿರತಿರ್ವ್ರತಮಿತ್ಯುಕ್ತಂ ಸರ್ವಸತ್ವಾನು ಕಂಪಕೈಃ॥

–ಆಚಾರ್ಯ ಶುಭಚಂದ್ರರು.

ಪ್ರಾಣಿಹಿಂಸೆ, ಸುಳ್ಳಿನನುಡಿ, ಕಳವು, ಪರಸ್ತ್ರೀರಸಂಗ, ಪರದ್ರವ್ಯಲೋಲುಪ-ಪರಿಗ್ರಹ-ಈ ಮಹಾಪಾತಕಗಳಲ್ಲಿ ವಿರಾಗಿಯಾದ ರೀತಿಯೇ ವ್ರತ. ಇದನ್ನೇ ಸರ್ವ ಪ್ರಾಣಿಗಳಲ್ಲಿ ಅನುಕಂಪವುಳ್ಳ ಮುನಿಗಳೂ ಅನುಮೋದಿಸುತ್ತಾರೆ

ಸಂಗ್ರಹ: M P. M.A., ಮೈಸೂರು

## ಜೈನ ವಿವಿಧ ವಾರ್ತೆಗಳು

ಮತ್ತು

## ಪ್ರಕಟಣ ವಿಮರ್ಶಾದಿಗಳು

### ಭಗವಾನ್ ಶ್ರೀ ಕುಂದಕುಂದರ ವಚನಾಮೃತಸಾರ

# ಸಮಯಸಾರದ ಮಹತ್ವ

ಲೇಖನ: ಎಂ. ಸಿ. ಪದ್ಮನಾಭಶರ್ಮ, ನ್ಯಾಯತೀರ್ಥ,
ವಿಶ್ರಾಂತ ಪರಿಶೋಧಕರು
ಪ್ರಾ.ವಿ.ಸಂ. ಸಂಸ್ಥೆ, ಮೈ.ವಿ.ವಿ. ಮೈಸೂರು

ಮಾನುಷ ಪ್ರವೇಶಾಸಾಧ್ಯವಾದ ಉತ್ತಮಭೂಮಿಯಲ್ಲಿ ಅಕೃತ್ರಿಮಚೈತ್ಯಾಲಯಗಳಲ್ಲಿ ತೀರ್ಥಂಕರರ ದರ್ಶನಮಾಡಿ ಹಿಂತಿರುಗಿಬಂದ ಮಹಾದಿಗಂಬರಚಾರ್ಯ ಶ್ರೀ ಕುಂದಕುಂದಸ್ವಾಮಿವರ್ಯರು ತಮ್ಮ ಸಮಯಸಾರದಲ್ಲಿ ಆತ್ಮಸ್ವರೂಪವನ್ನೂ ಅದರ ಗುಣಗಳನ್ನೂ ಸಿದ್ಧತ್ವಪ್ರಾಪ್ತಿಗಾಗಿ ಮಾಡಬೇಕಾದ ಧ್ಯಾನಾದಿಗಳನ್ನೂ ಇಂತು ವರ್ಣಿಸಿದ್ದಾರೆ—

ಆತ್ಮ ಸ್ವಯಂ ಪ್ರಕಾಶಿ. ಆ ಆತ್ಮನು ಸಿದ್ಧತ್ವಬುದ್ಧತ್ವ-ನಿರಂಜನತ್ವ-ನಿತ್ಯತ್ವ-ಗುಣಗಳಿಂದ ಕೂಡಿದ್ದಾನೆ. ಈ ಆತ್ಮ ಅವಿನಾಶಿ. ಈ ಆತ್ಮನ ನಿಜವಾದ ಗುಣಗಳು ಅನಂತಜ್ಞಾನ-ದರ್ಶನ-ಸುಖ-ವೀರ್ಯಗಳು. ಇವಲ್ಲದೆ ಆ ಆತ್ಮ ಅಗುರುಲಘುಗಳೇ ಮೊದಲಾದ ಎಂಭತ್ತು ಗುಣಗಳಿಂದ ಕೂಡಿದೆ. ಇವರೇ ಸಿದ್ಧರು, ಜಿನರು,

ಇಂತಹ ನಿತ್ಯಶುದ್ಧ-ಸಿದ್ಧಪರಮಾತ್ಮನನ್ನು ಸ್ವಾತ್ಮನಲ್ಲಿ ಆರಾಧಿಸಿ ಧ್ಯಾನ, ನಿದಿಧ್ಯಾಸನಾದಿಗಳಿಂದ ಕಾಯಕ್ಲೇಶ-ಮನಃಕ್ಲೇಶಗಳನ್ನು ಸಹಿಸಿ ತಪವನ್ನು ಆಚರಿಸಬೇಕು. ಈರೀತಿಯಾಗಿ ಸ್ವಾತ್ಮನಲ್ಲಿ ಪರಮಾತ್ಮಾರಾಧನೆಯಿಂದ ಆಯಾ ಆತ್ಮಗಳ ಕರ್ಮಬಂಧ ನಷ್ಟವಾಗಿ ಆ ಆತ್ಮಗಳು ಸಿದ್ಧಿಪದವಿಯನ್ನು ಪಡೆಯಲು ಅರ್ಹವಾಗುತ್ತವೆ.

ಆದ್ದರಿಂದ ಪ್ರತಿಯೊಬ್ಬಜೀವಿಯೂ ಪಾರಿಣಾಮಿಕಸ್ವಸ್ವಭಾವದಲ್ಲಿ ನಿರಂತರವಾಗಿ ಸ್ವಾತ್ಮನನ್ನು ನೆನೆದು ಮನನಮಾಡಿ ಸಿದ್ಧಿಯನ್ನು ಪಡೆಯಬೇಕೆಂದು ಜೈನಸಿದ್ಧಾಂತ ರಹಸ್ಯವಾಗಿದೆ, ಸ್ವಸ್ವಭಾವಾನು ತಿಳಿಸುವ ಸಂಧಾನವೇ ಆತ್ಮಸಿದ್ಧಿಕಾರಕ. ಉಳಿದ ಕ್ರಿಯೆಗಳೆಲ್ಲವುಗಳು ಆತ್ಮಸಂಬಂಧವಿಲ್ಲದ ಗೌಣಕ್ರಿಯೆಗಳು.

ಆದ್ದರಿಂದ ಪ್ರತಿಯೊಬ್ಬನೂ ಸ್ವಾತ್ಮನಲ್ಲಿ ಪರಮಾತ್ಮಧ್ಯಾನದಲ್ಲಿ ನಿರತನಾಗಬೇಕೆಂಬುದು ಆಚಾರ್ಯರ ಅಂತರ್ಯವಾದ ಭಾವವಾಗಿದೆ. 'ಜಯ ಜಿನೇಂದ್ರ ಶ್ರೀವಾಣಿ,

# ಅಖಿಲಕರ್ನಾಟಕ ಜೈನಸಾಹಿತ್ಯ ಸಮ್ಮೇಳನದಲ್ಲಿ

## ಸಮ್ಮೇಳನಾಧ್ಯಕ್ಷರ

## ಅ ಧ್ಯ ಕ್ಷ ಭಾ ಷ ಣ

(ಕಳೆದ ಸಂಚಿಕೆಯಿಂದ ಮುಂದುವರೆದುದು)

ಆದರೆ ಈ ಬೆಳೆಯುತ್ತಿರುವ ಸಾಹಿತಿಗಳು, ಕೇವಲ ಇಂದಿನ ಜಾಡಿಗೆ ಬೆನ್ನುಹತ್ತಿ ಅವಕ್ಕೇ ಅಂಟಿಕೊಂಡಿರದೆ, ಅವರಿಗೆ ದೈವದತ್ತವಾಗಿ ಬಂದ ಬರೆಯುವ ಕಲೆಯನ್ನು ನಮ್ಮ ಸಾಮಾನ್ಯ ಬಾಂಧವರಿಗಾಗಿ ಕೃತಿಗಳನ್ನು ರಚಿಸುವಲ್ಲಿ ಸ್ವಲ್ಪ ಬಳಸಿಕೊಂಡರೆ ಆಮೂಲ ಸಮಾಜಕ್ಕೆ ಉಪಕಾರವೇ ಆಗುತ್ತದೆ. ಧರ್ಮಕ್ಕೆ, ತತ್ವಕ್ಕೆ ಸಂಬಂಧಪಟ್ಟ ಗ್ರಂಥಗಳ ಹೆಸರನ್ನು ಕೇಳಿದೊಡನೆಯೇ ಅವಕ್ಕೂ ನಮಗೂ ಎಲ್ಲಿಯ ಸಂಬಂಧ ? ಎಂದು ಕೊಳ್ಳುವವರೂ ಇಲ್ಲದಿಲ್ಲ. ಆದರೆ "ವಸ್ತುವಿನ ಸ್ವಭಾವವೇ ಧರ್ಮ"ವಲ್ಲವೇ? ಚೇತನ ಹೇಗೆ ಆತ್ಮನ ಸ್ವಭಾವವೋ ಪರರಿಗೆ ಉಪಯೋಗ ಬೀಳುವುದೂ ಹಾಗೆಯೇ ಆತ್ಮನ ಸ್ವಭಾವ "ಪರಸ್ಪರೋಪಗ್ರಹೋ ಜೀವಾನಾಂ" ! ಈ ಹಿನ್ನೆಲೆಯಲ್ಲಾದರೂ ನಮ್ಮ ಇಂದಿನ ಸಾಹಿತಿಗಳು, ಎಲ್ಲಕ್ಕೂ ಮೊದಲು ಎಂತಹ ಸಾಮಾನ್ಯನೂ ಓದಿಕೊಳ್ಳಲು ಅನುಕೂಲವಾಗುವಂತೆ ಸಣ್ಣ ಸಣ್ಣ ಪುಸ್ತಕಗಳನ್ನು ಬರೆಯಲು ಪ್ರಯತ್ನಿಸಬೇಕು. ಇಂತಹ ಪುಸ್ತಕಗಳಲ್ಲಿ ಸಾಮಾನ್ಯ 'ಪೂಜಾವಿಧಿ'ಯನ್ನು ಹೊಂದಿದ ಪುಸ್ತಕಗಳು ಎಲ್ಲಕ್ಕೂ ಮೊದಲು ಪ್ರಕಟವಾಗಬೇಕು; ಮತ್ತು ಪಟ್ಟಣ ಹಳ್ಳಿಎನ್ನದೆ ಎಲ್ಲ ಶ್ರಾವಕರ ಮನೆಯಲ್ಲೂ ಅವು ಇರಬೇಕು. ಅವುಗಳನ್ನು ಓದಿಕೊಂಡು ಅಥವಾ ಓದಿಸಿಕೊಂಡು ಪೂಜಾವಿಧಾನವನ್ನು ಎಲ್ಲರೂ ಅರಿಯುವಂತಾಗಬೇಕು. ಇದರಿಂದ, ಬಸದಿಗಳಲ್ಲಿ ನಿತ್ಯಪೂಜೆ ಮಾಡಲು ಜನ ಸಿಕ್ಕದಿರುವ ಈ ಕಠಿಣ ಕಾಲದಲ್ಲಿ, ಶ್ರಾವಕರೇ, ಪ್ರತಿದಿನ ಒಬ್ಬೊಬ್ಬರು ಬಸದಿಯಲ್ಲಿ ಪೂಜೆ ಮಾಡಿ, ಜಲ, ಹಾಲು, ಗಂಧದ ಪೂಜೆ ಮಾಡಲು ಅನುಕೂಲವಾದೀತು! ಇದು ಆಗಬೇಕು. ಈ ಮಾತನ್ನು ನಾನು ಯಾವ ದುರುದ್ದೇಶದಿಂದಲೂ ಹೇಳುತ್ತಿಲ್ಲ. ಬದಲಾದ ಹಿನ್ನೆಲೆಯಲ್ಲಿ ಇಂದು ಪೂಜೆ ಮಾಡುವವರು ಸಿಕ್ಕುವುದು ದುರ್ಲಭವಾಗಿದೆ. ಇದೂ ಅಲ್ಲದೆ ಪೂಜೆ ಮಾಡುವವರೂ ಸಹ ಶ್ರಾವಕರೇ ಆಗಿದ್ದರೂ, ಅವರು ಮಾಡಿಕೊಂಡು ಬರುವ ಕಾಯಕದ ಹಿನ್ನೆಲೆಯಲ್ಲಿ "ಅವರು ಕಡಿಮೆ, ನಾವು ಹೆಚ್ಚು" "ನಾವು ಹೆಚ್ಚು, ಅವರು ಕಡಿಮೆ" ಎಂಬ ಕಹಿ ಭಾವನೆಯೂ ಮೂಡಿಕೊಂಡು ಬರುತ್ತಿದ್ದುದೂ ಉಂಟು. ಅಲ್ಲದೆ ಈಗಿನ ಕಠಿಣ ಕಾಲದಲ್ಲಿ, ಒಂದು ಕುಟುಂಬಕ್ಕೆ ಬೇಕಾಗುವಷ್ಟು ಆರ್ಥಿಕ ಬೆಂಬಲ ನೀಡುವ ಸ್ಥಿತಿಯಲ್ಲಿ ಸಮಾಜವೂ ಇಲ್ಲ. ಕಾರಣಃ ಮೊದಲಿನಂತೆ ಕೇವಲ ಪೂಜೆಯನ್ನೇ ನಂಬಿಕೊಂಡು ಇರಲು ಹೇಳುವುದು ಸರಿ ಅನ್ನಿಸಲಾರದು. ಕಾರಣ; ಪೂಜೆ ಮಾಡುವ

ಮನೆತನದವರೂ ಚೆನ್ನಾಗಿ ಓದಿ, ಬೇರೆಬೇರೆ ಉದ್ಯೋಗಗಳಲ್ಲಿ ತೊಡಗಿಕೊಂಡದ್ದಲ್ಲಿ ತೊಡಗುತ್ತಿರುವಲ್ಲಿ ಯಾವ ದೋಷವೂ ಇಲ್ಲ. ಪರಿಸ್ಥಿತಿ ಹೀಗಿದ್ದಾಗ ದೇವರಪೂಜೆ ಮಾಡುವುದು ಯಾವುದೋ ಒಂದು ಗುಂಪಿನ ಮೀಸಲು ಕೆಲಸ ಆಗಬೇಕಾಗಿಲ್ಲ! ಕವಿ ರತ್ನಾಕರವರ್ಣಿಯು, ನಿಂತ ಕ್ಷಣಕ್ಕೆ ಸಿದ್ಧಶಿಲೆಗೆ ಹೋಗುವ ಸ್ಥಿತಿಯಲ್ಲಿದ್ದ ಭರತ ಚಕ್ರಿ ನಿತ್ಯ ತನ್ನ ಮನೆಯಲ್ಲಿ, ತನ್ನ ಕೈಯಿಂದಲೇ ಪೂಜೆ ಮಾಡುತ್ತಿದ್ದನೆಂಬುದನ್ನು ಓದಿ ತಿಳಿದ ತಮಗೆ ಪ್ರತ್ಯೇಕವಾಗಿ ನಾನು ಹೇಳಬೇಕಾಗಿಲ್ಲ. ಇದು ವ್ಯವಹಾರದ ದೃಷ್ಟಿಯಿಂದ ಅಂತಹ ಮಹಾನ್ ಆತ್ಮಕೂಡ ಮಾಡಬೇಕಾಗುತ್ತಿತ್ತು; ಎಂದು ಕವಿ ಹೇಳಿದ ಮಾತು ಇಂದಿಗೂ ಸತ್ಯ! ಆತ್ಮಧ್ಯಾನದಲ್ಲಿ ನಿರತರಾದವರಿಗೆ ವ್ಯವಹಾರಿಕ ಪೂಜೆ ಅವಶ್ಯವಿಲ್ಲದಿರಬಹುದು. ಆದರೆ ಸಾಮಾನ್ಯ ಶ್ರಾವಕನಿಗೆ, ಅವನಲ್ಲಿ ಸದ್ಭಾವನೆಯನ್ನು ಸದಾಚಾರವನ್ನು ಮೂಡಿಸಲು ಇಂತಹ ವ್ಯವಹಾರಿಕ ಪೂಜೆ ಅವಶ್ಯವೇ ಆಗಿದೆ. ಈದೃಷ್ಟಿಯಿಂದ ವ್ಯವಹಾರ ಸಾಹಿತ್ಯದ ನಿರ್ಮಾಣ ಅಗತ್ಯವೇ ಆಗಿದೆ. ಆದರೆ ಇದು ಆರಂಭವೇ ಹೊರತು ಅಂತ್ಯವಲ್ಲ. ಸಾಮಾನ್ಯರಿಗೆ ತಿಳಿಯುಂತೆ, ಸರಳ ಭಾಷೆಯಲ್ಲಿ ಸಣ್ಣ ಸಣ್ಣ ಪುಸ್ತಕಗಳನ್ನು ಪ್ರಕಟಿಸಿ, ಅವುಗಳನ್ನು ಪ್ರತಿ ಊರಿಗೂ ಮುಟ್ಟುವ ವ್ಯವಸ್ಥೆ ಆಗುವುದು ಅನಿವಾರ್ಯವೇ ಆಗಿದೆಯೆಂದು ಹೇಳಬೇಕಾಗಿದೆ. ಈ ಬಹು ಮಹತ್ವದ ಕಾರ್ಯದಲ್ಲಿ ಸಮಾಜದವರೊಂದಿಗೆ, ಜೈನಮಠಾಧೀಶರೂ ಸಕ್ರಿಯ ಸಹಾಯ, ಸಹಕಾರ ಕೊಟ್ಟರೆ, ಬಹು ಉಪಯುಕ್ತ ಫಲ ದೊರಕೀತು! ಅಲ್ಲದೆ ಇದರಿಂದ ಸಾಹಿತಿಗಳ ಹಾಗೂ ಓದುವವರ ಉದ್ಧಾರ ಆಗಬಹುದು. ಇಂತಹ ಸದುದ್ದೇಶದಿಂದಲೇ ನಮ್ಮ ಪೂರ್ವಜರ ಅನೇಕ ಆಚಾರ, ವಿಚಾರ, ಪೂಜೆ, ಹಬ್ಬ, ಹುಣ್ಣಿಮೆ ಮೊದಲಾದವುಗಳನ್ನು ರೂಢಿಯಲ್ಲಿ ತಂದಿದ್ದರು. ಶ್ರದ್ಧೆಯಿಂದ ಮಾಡಲೆಂದು ಇವುಗಳಿಗೆ ಧರ್ಮದ ಲೇಪನ ಮಾಡಿದ್ದರು. ಆದರೆ ಇಂದು ನಮ್ಮ ಪೂರ್ವಜರು ಇರಿಸಿದ ಸದಿಚ್ಛೆಯನ್ನು ಮರೆತು ನಾವು ಇವುಗಳನ್ನು ಯಾಂತ್ರಿಕವಾಗಿ ಮಾಡುತ್ತಲಿದ್ದೇವೆ. ಅರ್ಥಾತ್ ಯಾವ ಉದ್ದೇಶದಿಂದ ಅಥವಾ ಯಾವ ಉದ್ದೇಶಕ್ಕಾಗಿ ಅವು ಹುಟ್ಟಿದ್ದವೋ ಅದನ್ನು ಸಾಧಿಸಲು ಇವುಗಳನ್ನು ಬಳಸದೆ, ಸಾಮಾನ್ಯನ ಅಜ್ಞಾನದ ಲಾಭವನ್ನು ದುರುಪಯೋಗ ಮಾಡಿಕೊಂಡು ಅವುಗಳನ್ನು ಪಾಲಿಸಲು ಬೋಧಿಸಲಾಗುತ್ತದೆ. ಹೀಗಾಗಿ ಬಾಹ್ಯಾಚಾರವೇ ಧರ್ಮ. ಅದೇ ಆತ್ಮಕಲ್ಯಾಣಕ್ಕೆ ದಾರಿ ಎನ್ನುವಂತೆ ಶ್ರಾವಕರ ನಂಬುವಂತಾಗುತ್ತಿದೆ. ನಿಜವಾದ ಅರ್ಥವನ್ನು ಕಳೆದುಕೊಂಡು ರೂಢಿಯಲ್ಲಿದ್ದ ಆಚಾರವಿಚಾರಗಳನ್ನು ಅನುಸರಿಸುವುದೆಂದರೆ, ಆತ್ಮವಿಲ್ಲದ ಶರೀರವನ್ನು ಅರ್ಥಾತ್ ಮೃತದೇಹವನ್ನು ಪೂಜಿಸಿದಂತೆಯೇ ಸರಿ! ಆದ್ದರಿಂದ ವ್ಯವಹಾರಿಕವಾಗಿ ಪೂಜೆ ಅವಶ್ಯವಿದ್ದರೂ, ಧರ್ಮದ, ದೇವರ ಹೆಸರಿನಲ್ಲಿ ನಡೆಯುವ ಹೊರಗಿನ ಪೂಜೆ ಅರ್ಥವಿಲ್ಲದ್ದು ಎಂಬುದನ್ನೂ ಜನರಲ್ಲಿ ಬಿಂಬಿಸುವುದು ಅಗತ್ಯ! ಹೀಗಾಗದಿದ್ದರೆ– ನಿಜವಾದ ಅರ್ಥ ತಿಳಿದಾತನು ನಾಸ್ತಿಕನಾದಾನು! ಇಲ್ಲವೇ ರಾಕ್ಷಸನಾದಾನು!! ಕಾರಣ ಈ

ದಿಸೆಯಲ್ಲೂ ಸಾಹಿತ್ಯ ನಿರ್ಮಾಣ ಆಗುವುದು ಅವಶ್ಯವಾಗಿದೆ. ಅಂದರೆ "ನಿಶ್ಚಯ"
ಮಾರ್ಗ ತಿಳಿಸಿ, ಆತ್ಮಕಲಾಣಕ್ಕಾಗಿ ಅನುಕೂಲವಾಗುವಂತಹ ಸಾಹಿತ್ಯವೂ ಹೊರ
ಬರುವುದೂ ಅಗತ್ಯವಾಗಿದೆ. ಅನುಭವಿಕರಿಂದ, ಸರಳವಾದ ರೀತಿಯಲ್ಲಿ ಇಂತಹ
"ನಿಶ್ಚಯ" ಸಾಹಿತ್ಯ ನಿರ್ಮಾಣವಾಗಬೇಕೆಂದು ಹಾರೈಸಬಹುದು. ಜೈನಧರ್ಮದಲ್ಲಿ
"ವ್ಯವಹಾರ" ಹಾಗೂ "ನಿಶ್ಚಯ" ಎರಡೂ ರೀತಿಗಳಿರುವ ಬಗೆಗೆ ವಿವರಣೆ ಅನಗತ್ಯ,
ಈ ಹಿನ್ನೆಲೆಯಲ್ಲಿ, ಮೇಲೆ ಸೂಚಿಸಿದಂತೆ, ಸಾಮಾನ್ಯರಿಗಾಗಿ, ಸರಳ ರೀತಿಯ, ಈ
ಎರಡೂ ರೀತಿಗಳನ್ನು ಬೋಧಿಸಲು, ಚಿಕ್ಕ ಪುಸ್ತಕಗಳು ಬರುವುದು ಅಗತ್ಯವೆಂದು
ಪುನಃ ತಮ್ಮ ಗಮನಕ್ಕೆ ತರಬಯಸುತ್ತೇನೆ.

ಸಾಹಿತ್ಯ ಸಮ್ಮೇಲನ ಅನ್ನುವಲ್ಲಿ ಸಮಾಜಕ್ಕೆ ಸಂಬಂಧಪಟ್ಟ ಮಾತುಗಳು
ಬರುವುದವಶ್ಯವಿಲ್ಲ; ಎಂದು ಹೇಳಬಹುದು. ಆದರೆ ಸಾಹಿತ್ಯ ಯಾರಿಗಾಗಿ ? ಸಮಾಜ
ದವರಿಗೇ ಅಲ್ಲವೇ ? ಆದ್ದರಿಂದ ನಮ್ಮ ಸಮಾಜದಲ್ಲಿ ಇಂದು ಇಣುಕುತ್ತಿರುವ, ಇಣಕಿ
ಗೊಂದಲವನ್ನುಂಟುಮಾಡುತ್ತಿರುವ ಕೆಲವು ಆತಂಕಗಳನ್ನು ನಾವು ದೂರೀಕರಿಸಲು
ಪ್ರಯತ್ನಿಸಬೇಕು ಒಬ್ಬನೇ ಭಗವಂತನ ಭಕ್ತರಾದವರಲ್ಲಿ ಭಿನ್ನಭೇದವೇಕೆ? ಒಳ
ಪಂಗಡಗಳೇಕೆ? ನಮ್ಮ ನಮ್ಮ ಮನೆಯಲ್ಲಿ, ನಮ್ಮ ನಮ್ಮ ಕರ್ಮಾನುಸಾರಿಯಾಗಿ
ಬಂದುದನ್ನು ಊಟಮಾಡೋಣ! ಆದರೆ ಸಮಾಜಕ್ಕಾಗಿ, ಧರ್ಮಕ್ಕಾಗಿ, ಸಾಮೂಹಿಕ
ವಾಗಿ ಕೂಡಿದಾಗ ಮೇಲು, ಕೀಳು ಎಂಬ ಭಿನ್ನಭೇದಗಳನ್ನು ಅಳಿಯೋಣ! ಅದರಂತೆ
ಶ್ರಮಣಸಂಸ್ಕೃತಿಗೆ ಒಳಪಟ್ಟ ನಾವೆಲ್ಲರೂ ಬೇರೆ ಬೇರೆ ಕಾಯಕಗಳಲ್ಲಿ ನಿರತರಾ
ಗಿದ್ದರೂ, ಅವುಗಳನ್ನು ಒಳಪಂಗಡಗಳನ್ನಾಗಿ ಮಾರ್ಪಡಿಸಲು ಪ್ರಯತ್ನಿಸಿ ಹಾಳಾಗು
ವುದುಬೇಡ, ಕೂಡಿ ನಡೆದರೆ ಬಾಳೇವು; ಇಲ್ಲವಾದರೆ ಹಾಳಾದೇವು!! ಅದರಂತೆ
ವರದಕ್ಷಿಣೆ ಎಂಬ ಭಸ್ಮಾಸುರ ನಮ್ಮಲ್ಲಿ ತಾಂಡವವಾಡುತ್ತಿದ್ದಾನೆ. ಈ ಅಸುರನನ್ನು
ಅಳಿಸಲು ನಮ್ಮ ತರುಣ-ತರುಣಿಯರು ಕಂಕಣಬದ್ಧರಾಗದಿದ್ದಲ್ಲಿ ಮುಂದಿನ ಪೀಳಿಗೆಗೆ
ಆಸ್ಪದವೇ ಇಲ್ಲನಂತಾದೀತು. ಕಾರಣ; ಇಂತಹ ಅಸುರಶಕ್ತಿಗಳನ್ನು ನಾಶಮಾಡಿ.
ಸಮಾಜದಲ್ಲಿ ಮೇಲಿನ ಹಂತದಲ್ಲಿದ್ದವರು, ಸಮಾಜದಲ್ಲಿ ಕೆಳಗಿದ್ದವರನ್ನು ಮೇಲೆತ್ತಲು
ಸಮಾನತೆ, ಸಹಕಾರಗಳನ್ನು ತೋರಿ, ಬ್ಯಾಂಕು ಮುಂತಾದವುಗಳನ್ನು ತೆರೆದು, ಆರ್ಥಿಕ
ಸಹಾಯ ಒದಗಿಸಲು ಪ್ರಯತ್ನಿಸಿದರೆ ಲೇಸು! ಅದರಂತೆ ನಮ್ಮವೇ ಆದ ವಾರ್ತಾ
ಪತ್ರಿಕೆಗಳನ್ನು ತೆರೆದು ಉಪಯುಕ್ತ ಲೇಖನಗಳನ್ನು ಬರೆದು ನಮ್ಮ ಬಾಂಧವರನ್ನು
ಬೌದ್ಧಿಕವಾಗಿ ಮೇಲೆ ತರಲು ಪ್ರಯತ್ನಿಸಬೇಕು. ಈಗಾಗಲೇ ನಮ್ಮ ಜೈನಮಠಗಳಿಂದ
ನಡೆಯುತ್ತಿರುವ ಪತ್ರಿಕೆಗಳು ಈ ಹಿನ್ನೆಲೆಯಲ್ಲಿ ಇನ್ನೂ ಒಳ್ಳೇ ಕಾರ್ಯ ಮಾಡು
ವಂತಾದರೆ ಲೇಸು!!

ಭಾಷಣ ಮಾಡಲಿಕ್ಕೆ ಎಲ್ಲರಿಗೂ ಬರುತ್ತದೆ. ಆದರೆ ಅದನ್ನು ಕಾರ್ಯಗತ
ಮಾಡುವುದು ಕಷ್ಟ—ಎಂದು ಹೇಳಬಹುದಾಗಿದೆ ಆದರೆ ಇದು ಕಷ್ಟಕಾರ್ಯವೇನಲ್ಲ.

ಇದಕ್ಕೆ ಬೇಕಾದುದು ಸ್ವಲ್ಪ ವಿಶಾಲ ದೃಷ್ಟಿ! ಸಮಾಜಕ್ಕಾಗಿ "ನನ್ನತನವನ್ನು" ಸ್ವಲ್ಪ ವೇಳೆ ಮನೆಯಲ್ಲಿಟ್ಟು ಬಂದು ಸಮಾಜಕ್ಕೆ ಕಾರ್ಯಮಾಡುವ ಪ್ರವೃತ್ತಿ!! ನಮ್ಮ ಪರಂಪರೆಯ ನಿಜವಾದ ಸ್ವರೂಪವನ್ನು ತಿಳಿಸಿ, ಈಗ ಅದರಲ್ಲಿ ಅಡಗಿ ತಾಂಡವವಾಡು ತ್ತಿರುವ ಭಂಡತನವನ್ನು ಎತ್ತಿತೋರಿಸುವ ಧೈರ್ಯ!! ನುಡಿದಂತೆ ನಡೆಯುವ ಸದ್ಗುಣ!!! ಪರಹಿತಕ್ಕಾಗಿ ಸ್ವಲ್ಪ ಚಿಂತಿಸುವ ವಿವೇಕ!!! ಇವುಗಳೆಲ್ಲ ನಮ್ಮ ಬಾಂಧವರಲ್ಲಿ ಜಾಗೃತವಾಗಲು ಸಾಹಿತ್ಯ ನಿರ್ಮಾಣ ಆಗಬೇಕು. ಅದನ್ನು ಕಾರ್ಯ ಗತಮಾಡುವ ಶಕ್ತಿ ಅವರಲ್ಲಿ ಹಾಗೂ "ಸತ್ವೇಷು ಮೈತ್ರೀಂ, ಗುಣಿಷು ಪ್ರಮೋದಂ ಕ್ಲಿಷ್ಟೇಷು ಜೀವೇಷು ಕೃಪಾಪರತ್ವಂ। ಮಾಧ್ಯಸ್ಥಭಾವಂ ವಿಪರೀತವೃತ್ತೌ ಸದಾ

(೨೦ ನೇ ಪುಟದಿಂದ ಮುಂದುವರಿದುದು)

# ತ್ರಿಲೋಕ ದರ್ಶನ

( ಕಳೆದ ಸಂಚಿಕೆಯಿಂದ ಮುಂದುವರೆದುದು )

ಲೇಖಕರು: **ಡಿ. ಶ್ರೀಪತಿಜೋಯಿಸ್, ಭುವನಹಳ್ಳಿ.**

**ಇಲ್ಲಿಯವರೆವಿಗೆ**- ಅಹಿಂಸೆಯ ಅಡಿಗಲ್ಲಮೇಲೆ ಅನೇಕಾಂತವಾದದ ನುಡಿಗಳಲ್ಲಿ ನಿರ್ಧೃತವಾದ ಜೈನಸಿದ್ಧಾಂತವು ತನ್ನ ನಿರೂಪಣಾನುಗುಣವಾದ ಕರ್ಮ ಸಿದ್ಧಾಂತವನ್ನು ಮುಂದಿಟ್ಟು ಲೋಕಾಲೋಕವಿಚಾರ ಮಂಥನ ಮಾಡಿದೆ. ಇದೆಲ್ಲವೂ ತೀರ್ಥಂಕರಪರಮದೇವನ ಮುಖೋದ್ಭೂತವಾಗಿ ಜಿನವಾಣಿ ಯಾಗಿದೆ. ಇದರ ಅನುಸಾರವಾಗಿ ಪ್ರಥಮಾನುಯೋಗಾದಿಗಳಲ್ಲಿ ಲೋಕ ಸ್ವರೂಪವಿವರಣೆ, ತ್ರಿಲೋಕದ ಔನ್ನತ್ಯ, ಅದರ ವಿಸ್ತಾರ, ತ್ರಸನಾಳ ವಿಚಾರ, ರಜ್ಜು ವಿಚಾರ, ಅಧೋಲೋಕ ಮಧ್ಯಲೋಕ-ಊರ್ಧ್ವಲೋಕ ವಿಸ್ತಾರಾಯತಾದಿವರ್ಣನೆ, ಪ್ರಥಮಸ್ವರ್ಗದಿಂದ ಸಿದ್ಧಶಿಲೆಯವರೆಗೆ ಲೋಕ ಗಳ ವಿಸ್ತಾರ, ವಾಯುವಲಯವರ್ಣನೆ, ಲೋಕದ ಮತ್ತು ಅಧೋಲೋಕದ ಘನಫಲ, ಆತ್ಮಾಂಗುಲದ ಉಪಯೋಗ, ಪಲ್ಯಪ್ರಮಾಣ, ಸಾಗರ ಪ್ರಮಾಣ, ಅಧೋಲೋಕದ ವರ್ಣನೆ, ಪೃಥ್ವಿಗಳ ವರ್ಣನೆ, ಖರಭಾಗಾದಿ ಪೃಥ್ವೀಭಾಗಾಂಗವಿವರಣೆ, ರತ್ನಗರ್ಭಾ ಎಂಬ ಭೂನಾಮದ ಸಾರ್ಥಕತೆ, ಅದರ ವಿಸ್ತೀರ್ಣ, ಬಿಲ, ಅದರ ಸಂಖ್ಯಾವಿವರಣ ನರಕದುಃಖಃಸ್ವರೂಪ ನಾರಕಿಗಳ ವೃದಾಹಾರ, ಶ್ರೀ ತೀರ್ಥಂಕರ ಪ್ರಕೃತಿಬದ್ಧನಾರಕಿಗಳ ಸ್ಥಿತಿ, ನರಕದುಃಖಭೇದ, ಅಸುರಕುಮಾರ ಕೃತದುಃಖ, ನರಕದಲ್ಲಿ ಅವಧಿಜ್ಞಾನ, ತತ್‌-ಕ್ಷೇತ್ರಪ್ರಮಾಣ, ಅಲ್ಲಿ ಸಮ್ಯಕ್ತ್ವದಕರಣ, ನಾರಕಿಗಳ ಅವಸ್ಥೆ- ಇಷ್ಟು ಅಂಶ ತಿಳಿದಾಯಿತ್ತು.

[ಇನ್ನು ಮುಂದೆ ಓದಿರಿ]

## ನಾರಕಿಗಳ ಆಯುಷ್ಯ

ದುಃಖದಿಂದ ಗಾಬರಿಗೊಂಡ ನಾರಕೀಜೀವಗಳು ಸಾಯಲು ಬಯಸುತ್ತವೆ. ಆದರೆ ಆಯುಷ್ಯ ಮುಗಿಯದೇ ಸಾಯಲಾರರು. ಅವರ ಶರೀರವು ಎಳ್ಳಿನಕಾಳಿನಷ್ಟು ಛಿನ್ನಭಿನ್ನಮಾಡಿದರೂ ಸಹ ಸೀಳಿದ ನೀರು ಒಂದಾಗುವಂತೆ ಪುನಃಪುನಃ ಒಂದಾಗಿ ಸೇರುತ್ತದೆ. ಈ ನಾರಕಿಗಳ ಇಷ್ಟು ಕಷ್ಟಕರವಾದ ಆಯುಷ್ಯ ಪ್ರಮಾಣ ಕನಿಷ್ಠ ೧೦ ಸಹಸ್ರವರ್ಷಗಳು ಮತ್ತು ಗರಿಷ್ಠ (ಉತ್ಕೃಷ್ಟ) ೩೩ ಸಾಗರ ವರ್ಷಗಳು. ಹತ್ತು ಸಾವಿರ ಕ್ಕಿಂತ ಹೆಚ್ಚಿನ ಮತ್ತು ಮೂವತ್ತುಮೂರು ಸಾಗರಕ್ಕಿಂತ ಕಡಿಮೆಯುಳ್ಳ ಆಯುಷ್ಯ ವನ್ನು ಮಧ್ಯಮಾಯುಷ್ಯ ಎಂದು ಹೇಳಲಾಗಿದೆ.

ಪ್ರಥಮ ನರಕದಲ್ಲಿ ಹದಿಮೂರು ಆವರಣ (ಪಟಲ)ಗಳಿವೆ. ಪ್ರಥಮ ಆವರಣ ದಲ್ಲಿ. ಗರಿಷ್ಠ ಆಯುಷ್ಯ ೯೦,೦೦೦೦ ವರ್ಷಗಳು. ಎರಡನೇ ಆವರಣದಲ್ಲಿನ ಅತಿ ಹೆಚ್ಚಿನ ಆಯುಷ್ಯ ೯೦,೦೦೦೦೦ ವರ್ಷಗಳು. ಹೀಗೆ ಮುಂದೆಮುಂದೆ ಇರುವ ಆವರಣ ಗಳ ಜಘನ್ಯ (ಕಷ್ಟಕರ) ಆಯುಷ್ಯಪ್ರಮಾಣ ಹಿಂದಿನ ಆವರಣದ ಗರಿಷ್ಟ ಆಯುಷ್ಯ ದಷ್ಟಿರುತ್ತದೆ. ಹೀಗೆಯೇ ಮೊದಲ ನರಕದ ಗರಿಷ್ಠ ಆಯುಷ್ಯ ಎರಡನೇ ನರಕದ ಜಘನ್ಯ ಎನ್ನಲಾಗುವುದು. ಇಂಥ ಮೊದಲ ನರಕದ ಗರಿಷ್ಠ ಆಯು ಒಂದು ಸಾಗರ ವಾಗಿದೆ ಅದೇ ಎರಡನೇ ನರಕದ ಜಘನ್ಯ ಆಯುವಾಗಿದೆ. ಏಳೂ ನರಕಗಳ ಜಘನ ಮತ್ತು ಗರಿಷ್ಟ (ಉತ್ಕೃಷ್ಟ) ಆಯುಃಪ್ರಮಾಣ ಕೆಳಗೆಕಂಡಂತಿದೆ :

| ನರಕ | | ಜಘನ್ಯ ಆಯು | | ಉತ್ಕೃಷ್ಟ ಆಯು |
|---|---|---|---|---|
| ಮೊದಲ ನರಕ | – | ೧೦,೦೦೦ ವರ್ಷ | – | ೧ ಸಾಗರ |
| ಎರಡನೆ ನರಕ | – | ೩ ಸಾಗರ | – | ೩ ,, |
| ಮೂರನೆ ನರಕ | – | ೩ ,, | – | ೭ ,, |
| ನಾಲ್ಕನೇ ನರಕ | – | ೭ ,, | – | ೧೦ ,, |
| ಐದನೇ ನರಕ | – | ೧೦ ,, | – | ೧೭ ,, |
| ಆರನೇ ನರಕ | – | ೧೭ ,, | – | ೨೨ ,, |
| ಏಳನೇ ನರಕ | – | ೨೨ ,, | – | ೩೩ ,, |

ಈ ಪ್ರಕಾರದ ಆಯುಷ್ಯಪ್ರಮಾಣದಲ್ಲಿ ನಾರಕಿಗಳಿಗೆ ಕ್ಷಣಮಾತ್ರವೂ ಸುಖ ವಿರುವುದಿಲ್ಲ ಪ್ರತಿಕ್ಷಣವೂ ದಾರುಣದುಃಖದ ಅನುಭವವೇ ಅವರಿಗೆ. ಆಯುಷ್ಯ ತೀರಿದನಂತರ ಈ ನಾರಕಿಗಳ ಶರೀರವು ವಾಯುವಿನಿಂದ ದೂಡಲ್ಪಡುವ ಮೇಘದಂತೆ ನಿಶ್ಶೇಷವಾಗಿ ಪ್ರಕೃತಿಯಲ್ಲಿ ವಿಲೀನವಾಗುತ್ತದೆ. ಆಯುಷ್ಯವಿದ್ದಷ್ಟೂ ದಿನ ಪೂರ್ವ

ಕೃತದೋಷಗಳಿಂದ ಜೀವವು ನರಕಗಳಲ್ಲಿ ನಾನಾಪ್ರಕಾರದ ದುಃಖಗಳನ್ನೂ ಭರಿಸ ಬೇಕಾಗುವುದು. ಆ ದುಃಖಗಳ ವರ್ಣನೆಯನ್ನು ಪೂರ್ಣವಾಗಿ ಮಾಡಲು ಸಮರ್ಥರು ಯಾರು ? ಇಹದಲ್ಲಿ ಯಾವ ಜೀವವು ಪಾಪಪ್ರವೃತ್ತವಾಗಿ ಆನಂದಪಡುತ್ತದೋ ಆ ಜೀವವೇ ಚಿರಕಾಲ ನರಕವಾಸದಲ್ಲಿದ್ದು ಅಲ್ಲಿನ ಕೊನೆಗಾಣದ ದುಃಖಗಳ ವರ್ಣನೆ ಯನ್ನು ಮಾಡಬಲ್ಲದೆನ್ನುವುದೇ ಆಚಾರ್ಯರ ಅಭಿಪ್ರಾಯ!

ಈ ನಾರಕಿಗಳಲ್ಲಿ ಒಂದುವೇಳೆ ಯಾವುದೇ ನಾರಕೀಜೀವವು ಜನ್ಮತಾಳದೇ ಹೋದರೆ ಅಥವಾ ಅಲ್ಲಿ ಜನಿಸುವುದು ವಿಳಂಬವಾದರೆ ಆಗ ಅಂತರಕಾಲ ಉಂಟಾಗುತ್ತೆ. ಈ ಅಂತರಕಾಲವು ಮೊದಲ ನರಕದಲ್ಲಿ ಕನಿಷ್ಠ ೨೪ ಮುಹೂರ್ತಗಳು, ಹೀಗೆಯೇ ಇತರ ನರಕಗಳ ಅಂತರಕಾಲಗಳೂ ಈ ಪ್ರಮಾಣದಲ್ಲಿವೆ :

| | | |
|---|---|---|
| ಮೊದಲ ನರಕ | – | ೨೪ ಮುಹೂರ್ತ |
| ಎರಡನೆ ನರಕ | – | ೭ ದಿನ |
| ಮೂರನೆ ನರಕ | – | ೧೫ ,, |
| ನಾಲ್ಕನೆ ನರಕ | – | ೧ ತಿಂಗಳು |
| ಐದನೇ ನರಕ | – | ೨ ,, |
| ಆರನೇ ನರಕ | – | ೪ ,, |
| ಏಳನೇ ನರಕ | – | ೬ ,, |

## ಯಾವಯಾವ ಜೀವಿಗಳು ಯಾವಯಾವ ನರಕಕ್ಕೆ ?

ಕರ್ಮಭೂಮಿಯ ಮನುಷ್ಯ ಮತ್ತು ಪಂಚೇಂದ್ರಿಯದ ಇತರ ಜೀವಿಗಳು ನರಕ ದಲ್ಲಿ ಹುಟ್ಟುತ್ತವೆ. ನರಕದಿಂದ ಆಯುಷ್ಯಮುಗಿಸಿ ಹೊರಟ ನಾರಕೀಜೀವಗಳೂ ಕರ್ಮಭೂಮಿಯ ಮನುಷ್ಯ ಮತ್ತು ಪಕ್ಷಿಗಳಾಗುತ್ತವೆ ಪಕ್ಷಿಗಳಲ್ಲದ ಪಂಚೇಂದ್ರಿಯ ಜೀವಿಗಳು ಮಾತ್ರ ಶಾಖಪೃಥ್ವಿಗಳಲ್ಲಿ ಹೋಗಲು ಯೋಗ್ಯತೆ ಪಡೆದಿರುತ್ತವೆ ಸರೀ ಸೃಪಗಳು ಮೊದಲ ಮತ್ತು ಎರಡನೇ ನರಕಕ್ಕೆ ಸಾಗುವ ಯೋಗ್ಯತೆ ಹೊಂದಿರುತ್ತವೆ. ಪಕ್ಷಿಗಳು ಮೂರನೇ ನರಕಕ್ಕೆ ಸಾಗುವ ಯೋಗ್ಯತೆ ಹೊಂದಿರುತ್ತವೆ. ಪಕ್ಷಿಗಳು ಮೂರನೆ ಪೃಥ್ವಿಯತನಕ, ಹಾವು ಮೊದಲಾದುವು ನಾಲ್ಕನೇ ಪೃಥ್ವಿಯತನಕ, ಸಿಂಹ ಮುಂತಾದುವು ಐದನೇ ಪೃಥ್ವಿಯತನಕ, ಸ್ತ್ರೀಯರು ಆರನೆಯ ಪೃಥ್ವಿಯತನಕ ಮತ್ತು ಮತ್ಸ್ಯ, ಪುರುಷ ಏಳನೆಯ ಪೃಥ್ವಿಯತನಕ ಹೋಗಬಲ್ಲವು.

## ನರಕದಿಂದ ಹೊರಟ ನಾರಕಿಗಳ ಬದಲಾವಣೆ

ನರಕದಿಂದ ಹೊರಡುವ ಯಾವ ಜೀವಿಗಳೂ ಅನಂತರದಲ್ಲಿ ಚಕ್ರವರ್ತಿ, ಬಲ ಭದ್ರ, ನಾರಾಯಣ ಮತ್ತು ಪ್ರತಿನಾರಾಯಣರಾಗಲಾರವು. ಮೊದಲ ಮೂರು

ಪೃಥ್ವಿಗಳಿಂದ ಹೊರಟ ಯಾವುದೇ ಜೀವವಾದರೂ ತೀರ್ಥಂಕರತ್ವವನ್ನು ಪಡೆಯ ಬಲ್ಲದು. ನಾಲ್ಕನೇ ಪೃಥ್ವಿಯಿಂದ ಹೊರಡುವ ನಾರಕೀಜೀವಿಗಳು ಚರಮಶರೀರ ವನ್ನು ಹೊಂದಿ ಅದೇಭವದಲ್ಲಿ ಮೋಕ್ಷವನ್ನು ಕೂಡ ಪಡೆದುಕೊಳ್ಳಬಹುದು-ಐದನೇ ಪೃಥ್ವಿಯಿಂದ ಹೊರಡುವ ನಾರಕೀಜೀವ ಸಂಯಮಿ ಮುನಿಯಾಗಬಲ್ಲದು. ಆರನೇ ಪೃಥ್ವಿಯಿಂದ ಹೊರಟ ಜೀವ ದೇಶವ್ರತಿಯಾಗಬಹುದು. ಏಳನೇ ಪೃಥ್ವಿಯಿಂದ ಹೊರಟ ಜೀವಗಳು ಖಂಡಿತವಾಗಿಯೂ ಸಮ್ಯಕ್ತ್ವವನ್ನು ಪಡೆಯುತ್ತವೆ. ಆದರೇ ಏಳನೇ ಪೃಥ್ವಿಯಿಂದ ಹೊರಟ ನಾರಕೀಜೀವಗಳು ಪಂಚೇಂದ್ರಿಯ ಪರ್ಯಾಪ್ತಿಕ ಪಕ್ಷಿ, ಕೀಟಗಳೇ ಆಗುತ್ತವೆಯೇ ಹೊರತು ಮನುಷ್ಯರಾಗಲು ಸಾಧ್ಯವಿಲ್ಲ ಎಂದು ಹೇಳ ಲಾಗಿದ

ಅತಿ ಸಂಕ್ಷೇಪವಾಗಿ ನರಕವಾಸಿಗಳ ವರ್ಣನೆಯನ್ನು ಮಾಡಲಾಗಿದೆ. ಬಹುಶಃ ಭವ್ಯಜೀವಿಗಳಿಗೆ ನರಕದುಃಖದಕಾರಣ ಭಯ ಉಂಟುಮಾಡುವುದೂ ಮತ್ತು ಸುಖದ ಆಧಾರ ಧರ್ಮವೊಂದೇ ಎಂಬುದನ್ನು ಮನದಟ್ಟುಮಾಡಿಕೊಡುವುದೇ ಇದರ ಉದ್ದೇಶ ವಾಗಿರಬಹುದು.

## ಭವನವಾಸೀ ದೇವತೆಗಳ ಸ್ಥಾನ

ಮೊದಲ ರತ್ನಪ್ರಭಾಪೃಥ್ವಿಯ ಮೂರು ಭಾಗಗಳ ಪೈಕಿ ಖರಭಾಗ ಮತ್ತು ಪಂಕಭಾಗಗಳಲ್ಲಿ ಉತ್ಕೃಷ್ಟ ರತ್ನಗಳಿಂದ ಶೋಭಾಯಮಾನವಾದ ಭವನವಾಸಿ ಮತ್ತು ವ್ಯಂತರವಾಸಿಗಳ ನಿವಾಸಸ್ಥಾನಗಳಿವೆ. ಈ ಎರಡು ಭಾಗಗಳಲ್ಲಿ ಖರಭಾಗದ ಗಾತ್ರ ೧೬ ಸಾವಿರ ಯೋಜನ ಮತ್ತು ಪಂಕಭಾಗದ ಗಾತ್ರ ೮೪ ಸಾವಿರ ಯೋಜನ ಪ್ರಮಾಣವಿದೆ.

## ಭವನವಾಸೀದೇವತೆಗಳ ಭೇದ

ಅಸುರ, ನಾಗಕುಮಾರ, ಸುವರ್ಣಕುಮಾರ, ದ್ವೀಪಕುಮಾರ, ಉದಾಧಿ ಕುಮಾರ, ಸ್ತನಿತಕುಮಾರ, ವಿದ್ಯುತ್‌ಕುಮಾರ, ದಿಕ್ಕುಮಾರ, ಅಗ್ನಿಕುಮಾರ ಮತ್ತು ವಾಯುಕುಮಾರ ಎಂದ ಭವನವಾಸೀ ದೇವತೆಗಳಲ್ಲಿ ಹತ್ತುಭೇದಗಳು.

## ವ್ಯಂತರವಾಸೀ ದೇವತೆಗಳ ಭೇದ

ವ್ಯಂತರ ವಾಸಿದೇವತೆಗಳಲ್ಲಿ ಎಂಟು ಭೇದಗಳು ಅವುಗಳು, ಕಿನ್ನರ್, ಕಿಂಪುರುಷ, ಗರುಡ, ಗಾಂಧರ್ವ, ಯಕ್ಷ, ರಾಕ್ಷಸ, ಭೂತ ಮತ್ತು ಪಿಶಾಚ.

ಚಿತ್ರಭೂಮಿಯ ಕೆಳಗೆ ಒಂದುಸಾವಿರ ಯೋಜನದನಂತರ ರಾಕ್ಷಸಜಾತಿಯ ವ್ಯಂತರದೇವತೆಗಳನ್ನು ಬಿಟ್ಟು ಉಳಿದ ಏಳು ವಿಧದ ವ್ಯಂತರದೇವತೆಗಳ ನಿವಾಸಸ್ಥಾನ

ಗಳಿವೆ. ಚಿತ್ರಾ ಪೃಥ್ವಿಯಿಂದ ಮೂರುಸಾವಿರ ಯೋಜನ ಕೆಳಗೆ ಅಸುರಕುಮಾರ ಜಾತಿಯ ಭವನವಾಸೀದೇವತೆಗಳನ್ನು ಬಿಟ್ಟು ಉಳಿದ ಒಂಭತ್ತು ವಿಧದ ಭವನವಾಸಿ ದೇವತೆಗಳ ನಿವಾಸಸ್ಥಾನಗಳಿವೆ. ಅವು ಅಲ್ಪ ಋದ್ಧಿಧಾರಿಗಳದ್ದಾಗಿವೆ. ೪೨ ಸಾವಿರ ಯೋಜನ ಕೆಳಗೆ ಮಹಾಋದ್ಧಿಧಾರಕ ಭವನವಾಸೀ ದೇವತೆಗಳ ಸ್ಥಾನವಿದೆ. ಒಂದು ಲಕ್ಷ ಯೋಜನದಷ್ಟು ಕೆಳಗೆಹೋದರೆ ಮಧ್ಯಮ ಋದ್ಧಿಧಾರಕ ಭವನವಾಸಿಗಳ ನಿವಾಸಸ್ಥಾನವಿದೆ.

## ಭವನವಾಸೀದೇವತೆಗಳ ಚಿಹ್ನೆಗಳು

ಭವನವಾಸೀ ದೇವತೆಗಳ ಮುಕುಟದಲ್ಲಿ ಕ್ರಮವಾಗಿ ಚೂಡಾಮಣಿ, ಸರ್ಪ, ಗರುಡ, ಆನೆ ಮುಂತಾದ ಚಿಹ್ನೆಗಳಿವೆ.

| | | |
|---|---|---|
| ಅಸುರಕುಮಾರ | – | ಚೂಡಾಮಣಿ |
| ನಾಗ | – | ಸರ್ಪ |
| ಸುಪರ್ಣ | – | ಗರುಡ |
| ದ್ವೀಪ | – | ಆನೆ |
| ಉದ್ಧಿ | – | ಮೊಸಳೆ |
| ಸ್ತನಿತ | – | ವರ್ಧಮಾನ |
| ವಿದ್ಯುತ್ | – | ವಜ್ರ |
| ದಿಕ್ | – | ಸಿಂಹ |
| ಅಗ್ನಿ | – | ಕಲಶ |
| ವಾಯು | – | ಕುದುರೆ |

## ಭವನವಾಸಿದೇವತೆಗಳ ನಿವಾಸಪ್ರಮಾಣ

| | | |
|---|---|---|
| ಅಸುರಕುಮಾರ | – | ೬೪ ಲಕ್ಷ |
| ನಾಗ | – | ೮೪ |
| ಸುಪರ್ಣ | – | ೭೨ |
| ದ್ವೀಪ | – | ೭೬ |
| ಉದಧಿ | – | ೭೬ |
| ಸ್ತನಿತ | – | ೭೬ |
| ವಿದ್ಯುತ್ | – | ೭೬ |
| ದಿಕ್ | – | ೭೬ |
| ಅಗ್ನಿ | – | ೭೬ |

| | | |
|---|---|---|
| | | ೯೬ ಲಕ್ಷ |
| ವಾಯು | | |
| | ಮೊತ್ತ | ೭,೭೨,೦೦೦.೦೦ |

ಎಲ್ಲಾ ಒಟ್ಟುಸೇರಿ ಭವನವಾಸೀ ದೇವತೆಗಳ ನಿವಾಸಪ್ರಮಾಣ ೭ ಕೋಟಿ, ೭೨ ಲಕ್ಷ ಆಗುತ್ತದೆ ಈ ಒಂದೊಂದು ನಿವಾಸದಲ್ಲೂ ಒಂದೊಂದು ಜಿನದೇವಾಲಯ ವಿರುವುದರಿಂದ, ಇಲ್ಲಿ ನಿವಾಸಪ್ರಮಾಣದಷ್ಟೇ ಜಿನದೇವಾಲಯಗಳೂ ಇವೆ. ಇಲ್ಲಿರುವ ಚೈತ್ಯಗಳಿಗೆ ತ್ರಿಕರಣಪೂರ್ವಕ ನಮಸ್ಕಾರಮಾಡೋಣ

## ಇಂದ್ರರು

ಭವನವಾಸೀ ದೇವತೆಗಳ ಹತ್ತು ಕುಲಗಳಲ್ಲಿಯೂ ತಲಾ ಇಬ್ಬಿಬ್ಬರು ಇಂದ್ರರಿರುತ್ತಾರೆ ಒಟ್ಟು ೨೦ ಇಂದ್ರರು ತಮ ತಮ್ಮದೇ ಆದ ವಿಶಿಷ್ಟಶ್ರೇಷ್ಠತೆಯಿಂದ ಶೋಭಿಸುತ್ತಾರೆ.

| ಕುಲ | ಇದ್ರರು |
|---|---|
| ಅಸುರ | ಚಮರೇಂದ್ರ, ವೈರೋಚನೇಂದ್ರ |
| ನಾಗ | ಭೂತಾನಂದ, ಧರಣಾನಂದ |
| ಸುಪರ್ಣ | ವೇಣು, ವೇಣುಧಾರಿ |
| ದ್ವೀಪ | ಪೂರ್ಣ, ವಶಿಷ್ಠ |
| ಉದಧಿ | ಜಲಪ್ರಭ, ಜಲಕಾಂತ |
| ಸ್ತನಿತ | ಘೋಷ, ಮಹಾಘೋಷ |
| ವಿದ್ಯುತ್ | ಹರಿಷೇಣ, ಹರಿಕಾಂತ |
| ದಿಕ್ | ಅಮಿತಗತಿ, ಅಮಿತವಾಹನ |
| ಅಗ್ನಿ | ಅಗ್ನಿ ಶಿಖೀ, ಅಗ್ನಿ ವಾಹನ |
| ವಾಯು | ಬೇಲಂಬ, ಪ್ರಭಂಜನ |

ಇವರಲ್ಲಿ ಪ್ರತಿಕುಲದ ಮೊದಲ ಹತ್ತು ಇಂದ್ರರು ದಕ್ಷಿಣ ಇಂದ್ರರೆಂದೂ, ಎರಡನೆಯ ಹತ್ತು ಇಂದ್ರರು ಉತ್ತರ ಇಂದ್ರರೆಂದೂ ಕರೆಯಲ್ಪಡುತ್ತಾರೆ. ಈ ಎಲ್ಲಾ ಇಂದ್ರರೂ ಅಣಿಮಾ ಮಹಿಮಾ ಮೊದಲಾದ ಋದ್ಧಿಗಳಿಂದ ಯುಕ್ತರಾಗಿಯೂ ಮಣಿಮಯ ಭೂಷಣಗಳಿಂದ ಅಲಂಕೃತರಾಗಿಯೂ ಇರುತ್ತಾರೆ

## ಇಂದ್ರರ ಭವನಗಳ ಸಂಖ್ಯೆ

| ಕುಲ | | ಉ. ಇಂದ್ರರದು | | ದ. ಇಂದ್ರರದು |
|---|---|---|---|---|
| ಅಸುರ | .... | ೩೦ ಲಕ್ಷ | .... | ೩೪ ಲಕ್ಷ |
| ನಾಗ | .... | ೪೦ ,, | .... | ೩೪ ,, |
| ಸುಪರ್ಣ | .... | ೩೪ ,, | .... | ೪೦ ,, |
| ದ್ವೀಪ | .... | ೩೬ ,, | .... | ೪೦ ,, |
| ಉದಧಿ | .... | ೩೬ ,, | .... | ೪೦ ,, |
| ಸ್ತನಿತ | .... | ೩೬ ,, | .... | ೪೦ ,, |
| ವಿದ್ಯುತ್ | .... | ೩೬ ,, | .... | ೪೦ ,, |
| ದಿಕ್ | .... | ೩೬ ,, | .... | ೪೦ ,, |
| ಅಗ್ನಿ | ... | ೩೬ ,, | .... | ೪೦ ,, |
| ವಾಯು | .... | ೪೬ ,, | .... | ೫೦ ,, |

ಒಟ್ಟು ದಕ್ಷಿಣ ಇಂದ್ರರ ಭವನಗಳ ಸಂಖ್ಯೆ ೪ ಕೋಟಿ ೬ ಲಕ್ಷ. ಉತ್ತರ ಇಂದ್ರರ ಭವನಗಳ ಸಂಖ್ಯೆ ೩ ಕೋಟಿ ೬೬ ಲಕ್ಷ.

ಒಟ್ಟು ಭವನಗಳ ಸಂಖ್ಯೆ ೭ ಕೋಟಿ ೭೨ ಲಕ್ಷ.

## ನಿವಾಸಸ್ಥಾನಗಳ ಭೇದ

ಭವನವಾಸೀ ದೇವತೆಗಳ ನಿವಾಸಸ್ಥಾನಗಳಲ್ಲಿ ಮೂರು ಭೇಧಗಳಿವೆ. ಒಂದು ಭವನ, ಎರಡು ಭವನ ಪುರ, ಮೂರನೆಯದು ಆವಾಸಸ್ಥಾನ.

ರತ್ನಪ್ರಭಾಪೃಥ್ವಿಯಲ್ಲಿರುವ ನಿವಾಸಸ್ಥಾನ ಭವನ. ದ್ವೀಪ, ಸಮುದ್ರದ ಮೇಲಿರುವ ನಿವಾಸಸ್ಥಾನಭವನಪುರ. ರಮಣೀಯ ಕೆರೆಗಳು, ಪರ್ವತ ಮತ್ತು ವೃಕ್ಷಾದಿಕದ ಮೇಲಿರುವ ನಿವಾಸಸ್ಥಾನ ಆವಾಸಸ್ಥಾನ ಅಸುರಕುಮಾರರಿಗೆ 'ಭವನ'ರೂಪದ ನಿವಾಸಸ್ಥಾನ ಮಾತ್ರ ಇದ್ದರೆ ನಾಗಕುಮಾರ ಮುಂತಾದವರಿಗೆ ಕೆಲವರಿಗೆ ಭವನ, ಕೆಲವರಿಗೆ ಭವನಪುರ, ಮತ್ತೆ ಕೆಲವರಿಗೆ ಆವಾಸಸ್ಥಾನ–ಈರೀತಿ ಮೂರೂ ತರಹದ ನಿವಾಸಸ್ಥಾನಗಳಿವೆ.

ಇವುಗಳಲ್ಲಿ ಅಲ್ಪ ಋದ್ಧಿಭವನವಾಸಿಗಳ ಭವನವು ಚಿತ್ರಾಪೃಥ್ವಿಯ ಕೆಳಗೆ ಎರಡು ಸಾವಿರ ಯೋಜನದವರೆಗೂ ಮಹಾ ಋದ್ಧಿಭವನವಾಸಿಗಳ ಭವನವು ೪೨ ಸಾವಿರ ಯೋಜನದವರೆಗೂ, ಮಧ್ಯಋದ್ಧಿಭವನವಾಸಿಗಳ ಭವನವು ಒಂದುಲಕ್ಷ ಯೋಜನದ ವರೆಗೂ ಇದೆ.

## ಭವನಗಳ ವರ್ಣನೆ

ಈ ಎಲ್ಲಾ ಭವನಗಳೂ ಸಮಚತುಷ್ಕೋಣ ಮತ್ತು ವಜ್ರಮಯದ್ವಾರಗಳಿಂದ ಶೋಭಾಯಮಾನವಾಗಿವೆ. ಭವನಗಳು ಎತ್ತರದಲ್ಲಿ ಮುನ್ನೂರುಯೋಜನವಿವೆ. ವಿಸ್ತಾರದಲ್ಲಿ ಸಂಖ್ಯಾತ ಮತ್ತು ಅಸಂಖ್ಯಾತಯೋಜನಪ್ರಮಾಣದಲ್ಲಿವೆ ಸಂಖ್ಯಾತ ಭವನವಾಸಿದೇವತೆಗಳೂ ಮತ್ತು ಅಸಂಖ್ಯಾತ ಯೋಜನವಿಸ್ತಾರದ ಭವನದಲ್ಲಿ ಅಸಂಖ್ಯಾತ ಭವನವಾಸೀ ದೇವತೆಗಳೂ ಇದ್ದಾರೆ–ಈ ಭವನಗಳ ಎತ್ತರ ೩೦೦ ಯೋಜನ ಮಾತ್ರ ಇದೆ.

## ಜಿನಮಂದಿರ ವರ್ಣನೆ

ಮೇಲೆ ಹೇಳಿದ ಭವನಗಳ ಮಧ್ಯಭಾಗದಲ್ಲಿ ಒಂದುನೂರು ಯೋಜನ ಎತ್ತರ ಒಂದೊಂದು ಕೂಟವಿದೆ. ಈ ಕೂಟಗಳ ಮೇಲೆ ಪದ್ಮರಾಗ ಮಣಿಮಯ ಕಲಶದಿಂದ ಶೋಭಿಸಲ್ಪಡುವ ನಾಲ್ಕು ಗೋಪುರಗಳೂ, ಮೂರು ಮಣಿಮಯ ಪ್ರಾಕಾರಗಳೂ, ರಮ್ಯಧ್ವಜಗಳೂ ಮತ್ತು ಮಣಿಮಾಲೆಗಳಿಂದ ಕೂಡಿದ ಜಿನಗೃಹಗಳು ವಿರಾಜಮಾನ ವಾಗಿವೆ. ಈ ಜಿನಮಂದಿರದ ನಾಲ್ಕುಕಡೆಯೂ ಚೈತ್ಯವೃಕ್ಷವೇ ಮೊದಲಾದ ನಾನಾ ವೃಕ್ಷಗಳಿಂದ ಕೂಡಿದ ಪವಿತ್ರ ಅಶೋಕವನ, ಚಂಪಕವನ ಮತ್ತು ಆಮ್ರವನಗಳಿವೆ. ಚೈತ್ಯವೃಕ್ಷದ ವಿಸ್ತಾರಬುಡದಲ್ಲಿ ಒಂದು ಕ್ರೋಶ, ಮತ್ತು ರೆಂಬೆಗಳ ಉದ್ದ ನಾಲ್ಕು ಯೋಜನಕಾಂಡದ ಎತ್ತರ ಒಂದು ಯೋಜನ ಪ್ರಮಾಣವಿದೆಯೆಂದು ಹೇಳಲಾಗಿದೆ. ಈ ದಿವ್ಯವೃಕ್ಷವು ವಿವಿಧಪ್ರಕಾರದ ಉತ್ತಮ ರತ್ನಗಳ ಶಾಖೆಗಳಿಂದ ಕೂಡಿ, ಚಿತ್ರ ವಿಚಿತ್ರ ಪುಷ್ಪಗಳಿಂದ ಅಲಂಕೃತಗೊಂಡು, ಉತ್ಕೃಷ್ಟ ಮರಕತಮಣಿಮಯ ಉತ್ತಮ ಪತ್ರಗಳಿಂದ ವ್ಯಾಪ್ತವಾಗಿದೆ; ಅತಿಶಯ ಶೋಭೆಯನ್ನೂ ಪಡೆದಿದೆ. ವಿವಿಧಪ್ರಕಾರದ ಮೊಳಕೆಗಳಿಂದ ಕೂಡಿದ ಹಣ್ಣುಗಳಿಂದ ಕೂಡಿ ನಾನಾವಿಧದ ರತ್ನಗಳಿಂದ ನಿರ್ಮಿತ ವಾದ ಘಂಟೆ-ಧ್ವಜ ಮುಂತಾದವುಗಳಿಂದ ರಮಣೀಯವಾದ ಛತ್ರವಿದೆ. ಬುಡದಿಂದ ತುದಿಯತನಕ ಹೀಗೆ ಶೋಭಿಸಿರುವ ಈ ಚೈತ್ಯವೃಕ್ಷವು ಪೃಥ್ವೀಕಾಯಿಕ ಸ್ವರೂಪ ವಾಗಿದೆ. ಈ ಚೈತ್ಯವೃಕ್ಷಗಳ ಮೂಲದಲ್ಲಿ ನಾಲ್ಕುದಿಕ್ಕುಗಳಲ್ಲಿಯೂ ದೇವತೆಗಳಿಂದ ಪೂಜಿಸಲ್ಪಡುವ ಪದ್ಮಾಸನದ ಐದೈದು ಜಿನಪ್ರತಿಮೆಗಳು ಇವೆ. ಈ ಪ್ರತಿಮೆಗಳು ನಾಲ್ಕು ತೋರಣಗಳು, ಎಂಟು ಮಹಾ ಮಂಗಲದ್ರವ್ಯಗಳಿಂದ ಕೂಡಿ ಉತ್ತ ಮೋತ್ತಮ ರತ್ನಗಳಿಂದ ನಿರ್ಮಿತವಾಗಿ ಅತಿಶಯ ಶೋಭಾಯಮಾನದಿಂದಿವೆ. ಈ ಜಿನಮಂದಿರಗಳಲ್ಲಿ ನಾಲ್ಕು ನಾಲ್ಕು ಗೋಪುರಗಳಿಂದ ಕೂಡಿದ ಮೂರು ಪ್ರಾಕಾರ ಕೋಟೆಗಳೂ, ಒಂದೊಂದು ಪ್ರಾಕಾರದಲ್ಲೂ ಒಂದೊಂದು ಮಾನಸ್ತಂಭವೂ ಇದೆ. ವನ, ಸ್ತೂಪ ಮತ್ತು ಕೋಟೆಗಳ ಒಳಗೆ ಕ್ರಮವಾಗಿ ವನಭೂಮಿ, ಧ್ವಜಭೂಮಿ ಮತ್ತು ಚೈತ್ಯಭೂಮಿಗಳಿವೆ. ಮೇಲೆ ಹೇಳಿದ ವನಗಳ ಮಧ್ಯದಲ್ಲಿರುವ ಮೂರು ಸ್ತೂ

ಪರ್ವತಗಳಿಂದ ಕೂಡಿದ ನಂದಾದಿಕ ಜಲಾಶಯಗಳಿವೆ. ಈ ಜಲಾಶಯಗಳು ಧರ್ಮ, ಮೋಕ್ಷ, ಚೈತ್ಯವೆಂಬ ಮೂರು ಉತ್ಕೃಷ್ಟ ಪೀಠಗಳಿಂದ ಕೂಡಿವೆ. ಧ್ವಜಭೂಮಿಯಲ್ಲಿ ಸಿಂಹ, ಆನೆ, ವೃಷಭ, ಗರುಡ, ಮಯೂರ, ಚಂದ್ರ, ಸೂರ್ಯ, ಹಂಸ, ಪದ್ಮ ಮತ್ತು ಚಕ್ರ ಚಿಹ್ನೆಗಳಿಂದ ಅಂಕಿತವಾದ ೧೦೮ ಮಹಾ ಧ್ವಜಗಳೂ, ಈ ಒಂದೊಂದು ಮಹಾಧ್ವಜದ ಸುತ್ತಲೂ ೧೦೮ ಆಶ್ರಿತ ಉಪಧ್ವಜಗಳೂ ಇರುತ್ತವೆ ಈ ಜಿನಾಲಯವು ವಂದನಮಂಟಪ, ಅಭಿಷೇಕಮಂಟಪ, ನರ್ತನಮಂಟ ಸಂಗೀತಮಂಟಪ, ಪ್ರೇಕ್ಷಣಮಂಟಪ, ಕ್ರೀಡಾಗೃಹ, ಸ್ವಾಧ್ಯಾಯ ಶಾಲೆ ಮತ್ತು ವಿಶಾಲವಾದ ಚಿತ್ರಶಾಲೆಗಳಿಂದ ಕೂಡಿದೆ. ಈ ಮಂದಿರಗಲ್ಲಿ ಶ್ರೀದೇವಿ ಶ್ರುತದೇವಿ ಸರ್ವಾಹ್ಣಯಕ್ಷ ಮತ್ತು ಸನತ್ಕುಮಾರಯಕ್ಷನ ಮೂರ್ತಿಗಳಿವೆ. ಝುಂ, ಕಲಶ, ಕನ್ನಡಿ, ಧ್ವಜ, ಚಾಮರ, ಛತ್ರ, ವ್ಯಂಜನ ಮತ್ತು ಸುಪ್ರತಿಷ್ಟ ಮಂಗಲದ್ರವ್ಯಗಳು ೧೦೮ ವಿಧದಲ್ಲಿ ಶೋಭಿಸುತ್ತವೆ. ಐದು ವರ್ಣದ ರತ್ನಗಳಿಂದ ನಿರ್ಮಿತಗೊಂಡ ರತ್ನ ದೀಪಕವಿದೆ. ಗೋಶೀರ್ಷ, ಮಲಯಚಂದನ ಕಾಲಾಗರು ಮತ್ತು ಧೂಪದ ಸುಗಂಧ ಸೂಸಿದೆ. ಭಂಭಾ, ಮೃದಂಗ, ಮದ್ದಳೆ ಜಯಘಂಟಾ, ಕಾಂಸ್ಯತಾಲ, ತಿವಲಿ, ದುಂದುಭಿ ಮತ್ತು ಭೇರೀಪಟಲ ಶಬ್ಧಗಳಿಂದ ಮಂದಿರವು ಗುಂಜಾಯಮಾನವಾಗಿದೆ. ಉತ್ತಮೋತ್ತಮ ರತ್ನಗಳಿಂದ ನಿರ್ಮಿಸಲ್ಪಟ್ಟ ಚಾಮರಗಳನ್ನು ನಾಗಕುಮಾರ ದೇವತೆಗಳು ಬೀಸುತ್ತಿರಲು ಭವನವಾಸೀದೇವತೆಗಳಿಂದ ವಂದಿಸಲ್ಪಡುವ ಜಿನಪ್ರತಿಮೆಗಳ ಸಿಂಹಾಸನದ ಮೇಲೆ ವಿರಾಜಮಾನವಾಗಿವೆ. ಒಂದೊಂದು ಮಂದಿರದಲ್ಲೂ ಜಿನಪ್ರತಿಗಳು ೧೦೮ರ ಪ್ರಮಾಣದಲ್ಲಿವೆ. ಇಂಥ ಅನಾದಿನಿಧನ ಜಿನಭವನಗಳು ಭವನವಾಸೀ ದೇವತೆಗಳ ಭವನಗಳ ಸಂಖ್ಯೆಯ ಪ್ರಮಾಣವಾದ ೭ ಕೋಟಿ ೭೨ ಲಕ್ಷದಷ್ಟೇ ಇವೆ.

ಸಮ್ಯಗ್ದರ್ಶನದಿಂದ ಕೂಡಿದ ಆ ಧರ್ಮಯಕ್ಷರ ಸಹಿತ ಜಿನಭಗವಾನರನು ಭವನವಾಸೀದೇವತೆಗಳು ನಿತ್ಯವೂ ಭಕ್ತಿಯಿಂದ ಪೂಜಿಸುತ್ತಾರೆ. ಸಮ್ಯಗ್ದೃಷ್ಟೀ ದೇವತೆಗಳಿಂದ ಪ್ರಭಾವಿತರಾದ ಮಿಥ್ಯಾದೃಷ್ಟಿ ದೇವತೆಗಳೂ ಸಹ ಆ ಜಿನೇಂದ್ರ ಪ್ರತಿಮೆಗಳನ್ನು ನಿತ್ಯವೂ ಬಹುವಿಧದಿಂದ ಪೂಜಿಸುತ್ತಾರೆ.

(೯ ನೇ ಪುಟದಿಂದ ಮುಂದುವರಿದಿದೆ)

ಅಖಿಲಕರ್ಣಾಟಕ ಜೈನಸಾಹಿತ್ಯ ಸಮ್ಮೇಳನದಲ್ಲಿನ ಸಮೇಳನಾಧ್ಯಕ್ಷರ ಭಾಷಣ

ಮನಾತ್ಮಾ ವಿಧಾದತುರ್ದೇವಃ॥ ಎಂಬ ಮನೋಧರ್ಮ ನಮ್ಮೆಲ್ಲರಲ್ಲಿ ನೆಲೆನಿಲ್ಲಲಿ ಎಂದು ಆ ಭಂಗವಂತನನ್ನು "ನಮಃ ಶ್ರೀವರ್ಧಮಾನಾಯನಿರ್ಧೂತ ಕಲಿಲಾತ್ಮನೆ! ಸಾಲೋಕಾನಾಂ ತ್ರಿಲೋಕಾನಾಂ ಯದ್ವಿದ್ಯಾ ದರ್ಪಣಾಯತೇ"॥ ಎಂದು ವಂದಿಸಿ, ನನ್ನ ಮಾತುಗಳನ್ನು ಮುಗಿಸುತ್ತೇನೆ.

ಸುಭಾಷಿತ

"ಉತ್ಸಾಹೋ ಬಲವಾನಾರ್ಯ ನಾಸ್ತ್ಯುತ್ಸಾಹಾತ್ಪರಂ ಬಲಮ್ ।
ಸೋತ್ಸಾಹಸ್ಯಾಸ್ತಿ ಲೋಕೇsಸ್ಮಿನ್ ನ ಕಿಂಚಿದಪಿ ದುರ್ಲಭಮ್"

ಉತ್ಸಾಹವೇ ಕಾರ್ಯಸಾಧನೆಗೆ ಮಹಾಬಲ. ಉತ್ಸಾಹಕ್ಕಿಂತ ಮಿಗಿಲಾದ ಬಲ ಮತ್ತೊಂದಿಲ್ಲ. ಆಸನ್ನಮರಣವುಳ್ಳ ಸಿಂಹವೂ ಕೂಡ ಆನೆಯ ಕುಂಭಸ್ಥಳವನ್ನು ಉತ್ಸಾಹದಿಂದಲೇ ಅಲ್ಲನೇ ಭೇದಿಸುತ್ತದೆ. ಆದ್ದರಿಂದ ಉತ್ಸಾಹವಂತನಿಗೆ ಈ ಲೋಕದಲ್ಲಿ ದುರ್ಲಭವಾದುದೇ ಇಲ್ಲ.

ಸಂಗ್ರಹ–'ಸಿಂಹವಾಣಿ'

ಶ್ರೀಃ

ಶ್ರೀಶುಭಚಂದ್ರಾಚಾರ್ಯವಿರಚಿತಃ

# ಜ್ಞಾನಾರ್ಣವಃ

(ಭಾವತಲಸ್ಪರ್ಶಿವ್ಯಾಖ್ಯಕರ್ಣಾಟಕಾನುವಾದಯುತಃ)

ಕಳೆದ ಸಂಚಿಕೆಯಿಂದ ಮುಂದುವರೆದುದು

ಇಲ್ಲಿಯವರೆವಿಗೆ—ಮನಶ್ಶಕ್ತಿಯ ಹಿರಿಮೆ, ಅದನ್ನು ಸಾರ್ಥಕಗೊಳಿಸುವ ಹಂತದಲ್ಲಿ ಮಾನವಕರ್ತವ್ಯ, ಅಲ್ಲಿ ಯೋಗದರ್ಶನದ ವೈವಿಧ್ಯತೆ, ಜೈನ-ವೈದಿಕ-ಯೋಗಗಳ ಸಾಮರಸ್ಯ, ಯೋಗಮಾರ್ಗದಲ್ಲಿ ಜೈನ-ಜೈನೇತರರ ಸಾಮ್ಯ-ವೈಷಮ್ಯಗಳು, ಜೈನರ ಅಸಂದೃಷ್ಟಿ, ವೈದಿಕರ ಅಷ್ಟಾಂಗಯೋಗ, ಜೈನ-ಯೋಗಪ್ರತಿಪಾದನೆಯಲ್ಲಿ ಜ್ಞಾನಾರ್ಣವದ ಸ್ಥಾನ, ಶ್ರುತಸಮನ್ವಯದ ದಾರಿಯಲ್ಲಿ ವ್ಯಾಖ್ಯೆಯ ರಚನೆಯ ಕೌತುಕ, ಯೋಗಶಬ್ದಾರ್ಥ, ಅಲ್ಲಿ ಮನಸ್ಸಿನ ಸ್ಥಾನ, ವೈದಿಕದರ್ಶನದಲ್ಲಿ ಯೋಗಶಬ್ದಾರ್ಥ- ಪಾತಂಜಲ-ಯೋಗಸ್ಥಾನಗಳಾದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಇವುಗಳ ಸ್ವರೂಪ ವಿವೇಚನಂ, ಮಂತಾಂತರದಲ್ಲಿ ಯಮನಿಯಮಗಳಂ ಬಿಟ್ಟು ಷಟ್-ಯೋಗಸ್ಥಾನಗಳ ವಿವೇಚನೆ, ಇದಲ್ಲದೆ ಉತ್ಸಾಹ, ನಿಶ್ಚಯ, ಧೈರ್ಯ, ಸಂತೋಷ, ತತ್ತ್ವದರ್ಶನ ಜನಪದತ್ಯಾಗ ಇವುಗಳಿಂದ ಯೋಗಸಿದ್ಧಿಯ ದಾರಿಯ ವಿವೇಚನೆಯಲ್ಲಿ ಉತ್ಸಾಹ-ನಿಶ್ಚಯಾದಿಗಳ ಪಾತ್ರ, ಯಮ-ನಿಯಮಾದ್ಯಭ್ಯಾಸದಿದಂ ಆಗುವ ಮನಸ್ಸಿನ ವಶತೆ, ಅಷ್ಟಾಂಗಾಂಗಗಳಮುಕ್ತಿ ಬೀಜತಾನಿರ್ಣಯ, ಉಕ್ತಾರ್ಥೇಪ್ರಮಾಣ, ಚಿತ್ತರೋಧವಿಲ್ಲದ ಇಂದ್ರಿಯಸ್ತಂಭನದ ಹಾಸಪಲತೆ ಪುನಃ ಕಲಂ ಕಲಯದಿಂಲೇ ಸ್ವಾರ್ಥಸಿದ್ಧಿ, ನಿರ್ಣಾಯಕವಾಕ್ಯ,- ತಿಳಿದಾಯಿತು. ಇನ್ನುಮುಂದೆ ತಿಳಿಯುವಾ.

ಚಿತ್ರಪ್ರಪಂಚಜಾನೇಕವಿಕಾರಪ್ರತಿಬಂಧಕಾಃ ।
ಪ್ರಾಪ್ನುವಂತಿ ನರಾ ನೂನಂ ಮುಕ್ತಿಕಾಂತಾಕರಗ್ರಹಮ್ ॥೮॥

*ಅತಸ್ತದೇವ ಸಂರುಧ್ಯ ಕುರು ಸ್ವಾಧೀನಮಞ್ಜಸಾ ।
ಯದಿ ಭೇತ್ತುಂ ಸಮುದ್ಯುಕ್ತಸ್ತ್ವಂ ಕರ್ಮನಿಗಡಂ ದೃಢಮ್ ॥೯॥

---

ಮನಃಕಲಂಕವಿಲಯದಿಂದ ಒದಗುವ ಯೋಗಸಿದ್ಧಿಸಾಧನೆಯ ಆತ್ಯಂತಿಕಫಲವನ್ನಿಂತು ಆಚಾರ್ಯರುಬಣ್ಣಿಸುತ್ತಾರೆ—

ಚಿತ್ರಪ್ರಪಂಚ ಇತ್ಯಾದಿಯಾಗಿ, "ಆತ್ಮಾ ಮನಸಾ ಸಂಯುಜ್ಯತೇ। ಮನ ಇಂದ್ರಿಯೇಣ। ಇಂದ್ರಿಯಮರ್ಥೇನ। ತತಃ ಪ್ರತ್ಯಕ್ಷಮ್॥" ಎಂಬಂತೆ ಜೀವಿಜಾತವು ತನ್ನ ತನ್ನ ಕರ್ಮಾನುಗುಣವಾದ ಫಲವನ್ನು ಹೊಂದುತ್ತದೆ. ಆ ಸಂದರ್ಭದಲ್ಲಿ ಆತ್ಮವು ಮನದೊಡನೆ ಕೂಡುತ್ತದೆ. ಮನವು ಇಂದ್ರಿಯದೊಡನೆ ಒಗ್ಗೂಡುವುದು. ಇಂದ್ರಿಯವು ಸ್ರಕ್ಚಂದನವನಿತಾದ್ಯಲಂಕರಣಗಳೊಡನೆ ಸೇರುತ್ತದೆ. ನಂತರ ಆಯಾಯಾ ಕರ್ಮಫಲ ಫಲಿಸುತ್ತದೆ. ಈ ಸ್ವಾಭಾವಿಕ ಕ್ರಮವನ್ನು ತಡೆಹಿಡಿಯಬೇಕಾದರೆ ಮನಸ್ಸಂರೋಧ ತನ್ಮೂಲಕ ಮನಸ್ಸಿನೊಳು ಸೇರುವ ವಿಷಯವಸ್ತು ಪ್ರಾಪ್ತ್ಯಾಶಾರೂಪಕಲಂಕದ ದೂರೀಕರಣ ಮಾಡಲೇಬೇಕು. ಆಗಲೀಗ ಏಕಪತ್ನೀವ್ರತಸ್ಥನಾದ ಸದ್ಗೃಹಸ್ಥನನ್ನು ಪತಿವ್ರತೆಯು ಅವನೊಳು ಸಹಕರಿಸುವಂತೆ ನಿತ್ಯಾತ್ಮಾನಂದವನ್ನು ನೀಡುವ ಮುಕ್ತಿವನಿತೆ ಪಾಣಿಗ್ರಹಣಮಾಡಿ ಅವನನ್ನು ವರಿಸುತ್ತಾಳೆ. ಅವಳ ಕರಾವಲಂಬನವನ್ನು ಪೊಂದಿದ ಜೀವಿ ನಿತ್ಯಸುಖಿಯಾಗಿ ಬಾಳುವುದರಲ್ಲಿ ಸಂಶಯವೇ ಇಲ್ಲ. ॥೮॥

ಕರ್ಮಬಂಧನಿವೃತ್ತಿದ್ವಾರಾ ಮುಕ್ತಿಕಾಂತಾಕರಗ್ರಹಾಪೇಕ್ಷಿಯಾದವನಿಗೆ ಆಚಾರ್ಯರುಸುರುವ ಕಿವಿಮಾತಿದು—

ಅತಸ್ತದೇವೇತ್ಯಾದಿ. ಎಲೈ! ಜೀವಿಯೇ! ನಶ್ವರಸಾಂಸಾರಿಕಕ್ಲೇಶನಿವೃತ್ತಿಯ ಅಪೇಕ್ಷೆ ನಿನಗಿದ್ದರೆ, ಕರ್ಮಬಂಧನದಿಂದ ವಿಮುಕ್ತ್ಯಪೇಕ್ಷೆಯು ಸತ್ಯವಾಗಿನಿನ್ನಲ್ಲಿ ಉಂಟಾಗಿದ್ದರೆ— ಹುಚ್ಚೆದ್ದ ಮನ ಸಂಸಾರದ ಸುಳಿಯಲ್ಲಿ ನಿನ್ನನ್ನು ಸಿಲುಕಿಸುವ ಮೊದಲೇ ನೀನು ಎಚ್ಚರಗೊಳ್ಳುವವನಾಗು! ಮನವನ್ನು ತಡೆಹಿಡಿ! ಅದನ್ನು ಸ್ವಾಧೀನ ಪಡಿಸಿಕೋ! ಅದರಲ್ಲಿ ನಿನಗೆ ತಿಳಿದೂ ತಿಳಿಯದಂತೆ ಅಡಗಿರುವ ಕಳಂಕವನ್ನು ತೊಡೆದುಹಾಕು. ಆಗಲೇ ನೀನು ಯೋಗಸಿದ್ಧಿಸಾಧನೆಗೆ ಅರ್ಹಪಾತ್ರನಾಗುತ್ತೀಯೇ. ಎಲೈ! ಜೀವಿಯೇ! ಎಚ್ಚರಗೊಳ್ಳುವವನಾಗು! ಎಚ್ಚರಗೊಳ್ಳುವವನಾಗು!! ॥೯॥

---

* ಪಾತಂಜಲಯೋಗದರ್ಶನವೂ ಕೂಡ-ಯೋಗಶ್ಚಿತ್ತವೃತ್ತಿನಿರೋಧಃ (ಸಮಾಧಿಪಾದ ಸೂತ್ರ. ೨) ಸೂತ್ರದಲ್ಲಿ ಇದನ್ನೇ ಇಂತುವಿವರಿಸಿದೆ—

ಸ್ವೇಚ್ಛೆಯಾಗಿ ಹೆಜ್ಜೆಯಿಡುವ ಮನಸ್ಸಿನ ವ್ಯಾಪಾರವನ್ನು ತಡೆಗಟ್ಟುವುದೇ ಯೋಗ. ಚಿತ್ತದ ವ್ಯಾಪಾರದಲ್ಲಿ ಅದರ ಜೇಷ್ಟೆ ಬಹಿರ್ಮುಖವಾದಾಗ ಸಂಸಾರವಿಷಯದಲ್ಲಿ ಮುಂದುವರಿಯುವುದನ್ನು ತಡೆಗಟ್ಟಿ ಅದನ್ನು ಅಂತರ್ಮುಖಿಯಾಗಿಸಿ ತನ್ಮೂಲಕ ಆಧ್ಯಾತ್ಮವಿಷಯದತ್ತ ಅದರ ವ್ಯಾಪಾರದ ಚಲನೆಯನ್ನು ಉಂಟುಮಾಡುವುದೇ ಮನೋನಿರೋಧ.

ಚಿತ್ತವು ಅಗಾಧಸಮುದ್ರದ ನೀರಿಗೆ ಸಮಾನ. ನೀರು ಯಾವರೀತಿಯಲ್ಲಿ ಯಾವರೀತಿಯ ಭೂಮಿಯ ಸಂಬಂಧವನ್ನು ಪಡೆಯುವುದೋ ಅಲ್ಲಿ ಅದೇ ಆಕಾರದ ರೂಪಗುಣಗಳನ್ನು ಪಡೆಯುತ್ತದೆ. ಅದೇ ಬಗೆಯಲ್ಲಿ ಚಿತ್ತವು ರಾಗ-ದ್ವೇಷ, ಕಾಮ-ಕ್ರೋಧ, ಲೋಭ-ಮೋಹ ಇವೇ ಮೊದಲಾದ ಬದಲಾವಣೆಯ ಬಣ್ಣವನ್ನು ಹೊಂದುತ್ತದೆ. ವಾಯುವೇಗದೀದ ಜಲದಲ್ಲಿ ತರಂಗಗಳುಂಟಾಗುವಂತೆ ಚಿತ್ತವು ಇಂದ್ರಿಯದ್ವಾರಾ ಸಾಂಸಾರಿಕ ವಿಷಯವಸ್ತುಗಳಾದ ಸ್ರಕ್ಚಂದನವನಿತಾಲಂಕರಣಾದಿಗಳಿಂದ ಆಕರ್ಷಿತವಾಗಿ ಅದೇ ಆಕಾರವನ್ನು ಗುಣವನ್ನು ಹೊಂದುತ್ತದೆ. ಯಾವಾಗ ವಾಯುವೇಗ ಶಾಂತವಾದಾಗ ಜಲತರಂಗಗಳು ನಷ್ಟವಾಗಿ ಜಲವು ತನ್ನ ಸ್ವಸ್ವರೂಪ ಸ್ಥಿತಿಯನ್ನು ಹೊಂದುತ್ತದೆಯೋ ಹಾಗೆಯೇ ಮನವು ಯೋಗಾಭ್ಯಾಸದಿಂದ ಬಾಹ್ಯ-ಆಭ್ಯಂತರ ಪರಿಣಾಮಗಳನ್ನು ತ್ಯಜಿಸಿ ಸ್ವಸ್ಥಿತಿಯಲ್ಲಿ ನಿಲ್ಲುತ್ತದೆ. ಈ ಪ್ರಕಾರ ಚಿತ್ತವೃತ್ತಿ ನಿರೋಧವನ್ನು ಮಾಡಬೇಕು.

ಚಿತ್ತದ ಅವಸ್ಥೆ ಐದುವಿಧ–ಮೂಢ, ಕ್ಷಿಪ್ತ, ವಿಕ್ಷಿಪ್ತ, ಏಕಾಗ್ರ, ನಿರುದ್ಧ–ಎಂದು.

ಮೂಢಾವಸ್ಥೆ– ಮನದ ಮೂಢಾವಸ್ಥೆಗೆ ಕಾರಣ– ಕಾಮ-ಕ್ರೋಧ-ಲೋಭ-ಮೋಹಗಳು. ಇದರ ಲಕ್ಷಣ– ನಿದ್ರಾ-ತಂದ್ರಾ-ಭಯ-ಮೋಹ-ಆಲಸ್ಯ-ದೀನತೆಗಳೇ ಮೊದಲಾದ ಮನುಷ್ಯಪ್ರವೃತ್ತಿಗಳು. ಈ ಅವಸ್ಥೆಯಲ್ಲಿ ತಮೋಗುಣ ಪ್ರಧಾನಪಾತ್ರವಹಿಸುತ್ತದೆ.

ಕ್ಷಿಪ್ತಾವಸ್ಥೆ– ಇದರಲ್ಲಿ ರಜೋಗುಣಪ್ರಧಾನವಾಗುತ್ತದೆ. ಇದಕ್ಕೆ ಕಾರಣ– ರಾಗ-ದ್ವೇಷಗಳೇ ಲಕ್ಷಣ– ಧರ್ಮ-ಅಧರ್ಮ, ರಾಗ-ವಿರಾಗ, ಜ್ಞಾನ-ಅಜ್ಞಾನ, ಐಶ್ವರ್ಯ-ಅನೈಶ್ವರ್ಯ,– ಇವುಗಳಲ್ಲಿ ಪ್ರವೃತ್ತಿಯುಂಟಾಗುತ್ತದೆ. ಈ ಸ್ಥಿತಿಯನ್ನು ಸಾಧಾರಣ ಸಂಸಾರಿಯಲ್ಲಿ ಕಾಣಬಹುದು.

ಸಮ್ಯಗಸ್ಮಿನ್ ಸಮಂ ನೀತೇ ದೋಷಾ ಜನ್ಮಭ್ರಮೋದ್ಭವಾಃ।
ಜನ್ಮಿನಾಂ ಖಲು ಶೀರ್ಯಂತೇ ಜ್ಞಾನಶ್ರೀಪ್ರತಿಬಂಧಕಾಃ ॥೧೦॥

---

ಮನಸ್ಸಂಸ್ತಂಭನ-ಮನಃಕಲಂಕನಿವಾರಣದಿಂದ ಆಗುವಫಲಿತವನ್ನು ಆಚಾರ್ಯ ಶುಭಚಂದ್ರರಿಂತು ಬಣ್ಣಿಸುತ್ತಾರೆ—

ಸಮ್ಯಗಸ್ಮಿನ್' ಇತ್ಯಾದಿಯಾಗಿ. ಮನಸ್ಸಸ್ತಂಭನ-ಮನಃಕಲಂಕನಿವಾರಣ ಇವುಗಳಿಂದ ಮನವು ಸ್ವಸ್ವರೂಪವಲ್ಲಿ ಸಮಭಾವವಲ್ಲಿ ನೆಲೆಸಿಲ್ಲುತ್ತದೆ.

---

ವಿಕ್ಷಿಪ್ತಾವಸ್ಥೆ—ಇದಕ್ಕೆಕಾರಣ: ಕರ್ಮಯೋಗ ಇಲ್ಲಿ ಸತ್ವಗುಣ ಪ್ರಧಾನ. ಅದರಿಂದ ಧರ್ಮ-ಜ್ಞಾನ-ಐಶ್ವರ್ಯಗಳಲ್ಲಿ ಪ್ರವೃತ್ತಿಯುಂಟಾಗುತ್ತದೆ ಸುಖ-ಪ್ರಸನ್ನತಾ-ಕ್ಷಮಾ-ಶ್ರದ್ಧಾ-ಧೈರ್ಯ-ಚೈತನ್ಯತಾ-ಓಜ-ದಾನ-ದಯಾದಿಗಳು ಪ್ರಧಾನ ಪಾತ್ರಧಾರಿಗಳು ರಜೋಗುಣವೂ ಇದರ ಜತೆ ಮೇಳವಿಸುತ್ತದೆ. ಇವುಗಳು ತಮ್ಮ ಪ್ರಚೋದನೆಯನ್ನು ಜೀವಿಯತ್ತ ಹೆಚ್ಚಿಸಿದಾಗ ಚಿತ್ತದ ವಿಕ್ಷೇಪ ವಾಗುತ್ತದೆ.

ಏಕಾಗ್ರಾವಸ್ಥೆ—ಇದು ರಜಃ-ತಮಗಳ ವಿಕ್ಷೇಪದಿಂದಾಗುವ ಅವಸ್ಥೆ. ಒಂದು ದಿಕ್ಕಿನಲ್ಲಿ ಇದರ ಪ್ರವೃತ್ತಿಯ ಪ್ರವಾಹ ಹರಿದಾಗ ಸತ್ವ ಪ್ರಧಾನಪಾತ್ರವನ್ನು ಆಗ ವಹಿಸುತ್ತದೆ. ಆದರಿಂದ ಏಕಾಗ್ರಾವಸ್ಥೆಯು ಉಂಟಾಗುತ್ತದೆ. ಈ ಅವಸ್ಥೆ ಯಲ್ಲಿ ಚಿತ್ತವು ನಿರ್ಮಲಸ್ಫಟಿಕಸಮಾನವಾಗುತ್ತದೆ. ಈ ಸ್ಥಿತಿಯು ಯೋಗಿ ಗಳಿಗೆ ಮಾತ್ರಸೀಮಿತ. ಈ ಸಮಯದಲ್ಲಿ ಪರಮಾಣುವಿನಿಂದ ಹಿಡಿದ ಮಹತ್ತತ್ತ್ವ ಪರ್ಯಂತವಾಗಿ ಗ್ರಾಹ್ಯ-ಗ್ರಹಣ-ಗ್ರಹೀತೃ (ಗ್ರಹಿಸುವುದು-ಗ್ರಹಿ ಸುವವಸ್ತು-ಗ್ರಹಿಸುವವ್ಯಕ್ತಿ) ವಿಷಯಗಳು ಸಾಕ್ಷಾತ್ತಾಗಿ ಜೀವಿಯ ಅರಿವಿಗೆ ಬರುತ್ತದೆ. ಈ ಸ್ಥಿತಿಯ ಅಂತಿಮಾವಸ್ಥೆ—ವಿವೇಕಖ್ಯಾತಿಯಾಗುತ್ತದೆ.

ನಿರುದ್ಧಾವಸ್ಥೆ—ಈ ಸ್ಥಿತಿಯಿಂದ ವಿವೇಕಖ್ಯಾತಿದ್ವಾರಾ ಮನದ ಮತ್ತು ಪುರುಷರು ಪೂರ್ಣಸ್ವರೂಪದ ಅರಿವಾಗುತ್ತದೆ. ಆದರಿಂದ ವೈರಾಗ್ಯವು ಉಂಟಾಗುತ್ತದೆ. ಇದರಿಂದ ಉಚ್ಚತಮವಾದ ಇದರ ಅಂತಿಮಾವಸ್ಥೆಯಲ್ಲಿ ಪರಮವೈರಾಗ್ಯ ದಿಂದ ಸಂಸ್ಕಾರಮಾತ್ರವು ಉಳಿಯುತ್ತದೆ; ಮತ್ತೆ ಚಿತ್ತವು ಆತ್ಮಸ್ವರೂಪಾನು ಸಂಧಾನದಲ್ಲಿ ಲೀನವಾಗುತ್ತದೆ. ಸಮಸ್ತಕ್ಲೇಶಗಳು ಆಗಲೀಗ ನಷ್ಟವಾಗಿ ಕರ್ಮಾಶಯರೂಪವಾದ ಜನ್ಮಾದಿಗಳಿಗೆ ಕಾರಣವೇ ಉಳಿಯಲಾರದು. ಇದರಿಂದ ಅಸಂಪ್ರಜ್ಞಾತಸಮಾಧಿಯು ಕೈವಲ್ಯಹೇತುವಾಗಿ ಉದಯಿಸುತ್ತದೆ

ಏಕ ಏವ ಮನೋದೈತ್ಯಜಯಃ ಸರ್ವಾರ್ಥಸಿದ್ಧಿದಃ ।
ಅನ್ಯತ್ರ ವಿಫಲಃ ಕ್ಲೇಶೋ ಯಮಿನಾಂ ತಜ್ಜಯಂ ವಿನಾ ॥೧೧॥

---

ಸಂಸಾರದಲ್ಲಿ ಮಾತೃಗರ್ಭದಿಂದ ಹೊರಬಂದ ಜೀವಿ ಈ ಪಾಂಚಭೌತಿಕ ಪ್ರಪಂಚಕ್ಕೆ ಮನಸೋತು ಭ್ರಾಂತನಾಗಿ ಅದಕ್ಕೆ ವಶನಾಗಿ ವಿಷಯವಸ್ತುಗಳನ್ನು ಇಂದ್ರಿಯದ್ವಾರಾ ಉಪಭೋಗಿಸುತ್ತಾ ಗರ್ಭ-ಜನ್ಮ-ಮರಣಾದ್ಯವಸ್ಥೆಗಳಿಗೆ ತುತ್ತಾ-ಗುತ್ತಾನೆ. ಅದರ ಸರಣಿಯಲ್ಲಿ "[1]ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೀ-ಜಠರೇ ಶಯನಮ್[1]" ಎಂಬಂತೆ ಪುನಃಪುನಃ ಹುಟ್ಟುಸಾವಿಗೀಡಾಗುತ್ತಾನೆ. ಇದು ಮಾನವನ ನಿತ್ಯವಾದ ಆತ್ಮಜ್ಞಾನಕ್ಕೆ ಶಾಶ್ವತವಾದ ಮೋಕ್ಷಲಕ್ಷ್ಮೀಪ್ರಾಪ್ತಿಗೆ ಪ್ರತಿ ಬಂಧಕಗಳು.

ಆದರೆ ಹಿಂದೆಹೇಳಿದಂತೆ ಮನಸ್ಸನ್ನು ಸುಸ್ಥಿತಿಯಲ್ಲಿಟ್ಟವನಿಗೆ ಜನ್ಮಸಂಬಂಧವಾದ ಯಾವ ದೋಷಗಳೂ ಅಂಟಲಾರವು. ಅಥವಾ ಅವುಗಳಿಗೆ ಆತ ವಶನಾಗಲಾರ ಆಗಲೀಗ ಆತ್ಮಜ್ಞಾನವಿಕಸನಕ್ಕಾಗಲಿ ಮುಕ್ತಿಶ್ರೀಪ್ರಾಪ್ತಿಗಾಗಲಿ ಯಾವ ಅಡತಡೆಯೂ ಉಂಟಾಗಲಾರದು. ॥೧೦॥

ಸಂಸಾರಸಾಗರದಲ್ಲಿ ತೊಳಲಾಡುವುದಕ್ಕಿಂತ ಮನೋಜಯದ ದ್ವಾರಾ ಮುಕ್ತಿ ಕಾಂತಾಕರಗ್ರಹಣವೇ ಲೇಸೆಂಬುದನ್ನಿಂತು ಶ್ರೀಶುಭಚಂದ್ರರು ವಿವರಿಸುತ್ತಾರೆ–

ಏಕ ಏವ ಇತ್ಯಾದಿಯಾಗಿ. ಮನಸ್ಸು ರಾಕ್ಷಸನಿದ್ದಂತೆ. ಅದಕ್ಕೆ ನಾವು ವಶ-ವಾದರೆ ಸಂಸಾರದಲ್ಲಿ ತೊಳಲಾಟ. ನಮ್ಮ ವಶದಲ್ಲಿ ಅದು ಇದ್ದರೆ– ಆರಾಕ್ಷಸನನ್ನು ನಾವು ಗೆದ್ದು ಮನವನ್ನು ಸುಸ್ಥಿತಿಯಲ್ಲಿ ಬೆಳಸಿದರೆ ಸ್ವವಶನಾದ ದೈತ್ಯ ಹೇಳಿದ್ದ-ನ್ನೆಲ್ಲಾ ಮಾಡುವಂತೆ ಸರ್ವಸಾಂಸಾರಿಕಕ್ಲೇಶಗಳನ್ನೂ ಮನವು ಜಯಿಸಿ ಆ ಮನ ಆತ್ಮಸಂತೃಪ್ತಿಯನ್ನುಂಟುಮಾಡುತ್ತದೆ. ಆದ್ದರಿಂದ ವಿವೇಕಿಯಾದವನು ಆ ಮನೋನಿಗ್ರಹವನ್ನು ಬಿಟ್ಟು ಸಂಸಾರಭ್ರಮಣವೇ ಸುಖದ ಸುಪ್ಪತ್ತಿಗೆಯೆಂದು ಭ್ರಮಿಸಿ ಅದರೊಳು ಸಿಲುಕಿದರೆ ಅವನ ಪ್ರಯತ್ನ ನಿಷ್ಫಲ. ಕ್ಲೇಶವೇ ಆತನನ್ನು ಯಾವಾಗಲೂ ಕೋಟೆಯಂತೆ ಸುತ್ತಿಕೊಂಡಿರುತ್ತದೆ. ಆದ್ದರಿಂದ ಸಂಯಮಿಯಾದವನಿಗೆ ಮನೋ-ಜಯಕ್ಕಿಂತ ಮಿಗಿಲಾದುದು ಮತ್ತೊಂದಿಲ್ಲ. ॥೧೧॥

---

1. ಶಂಕರರ ಭಜಗೋವಿಂದಸ್ತುತಿ.

ಜಿನವಾಣಿ REG. NO. K.R.N.N. 17

೧೩) ಎ. ಸಿ. ಎ. ದೇವೇಂದ್ರಪ್ಪನವರು, ಮೈಸೂರು
೧೪) ಪಾರ್ಶ್ವನಾಥಯ್ಯನವರು, ಬೆಂಗಳೂರು
೧೫) ಬಿ ಜೆ. ಸುರೇಂದ್ರ ಕುಮಾರ್,
೧೬) ಎಂ. ಕೆ. ಅನಂತಯ್ಯನವರು, ವೈನಾಡು
೧೭) ಶ್ರೀಮತಿ ಚಂದ್ರಮತಿ ಅಮ್ಮನವರು, ವೈನಾಡು
೧೮) ಪಿ. ಡಿ. ಚಂದ್ರಪ್ರಭ, ಕೌಡಿಕೆರೆ
೧೯) ಎಸ್. ಎಸ್. ಡಿ. ನಾಗರಾಜಯ್ಯನವರು, ಶ್ರವಣಬೆಳಗೊಳ
೨೦) ಶ್ರೀ ಚಂದ್ರಪ್ರಭ ಕರಿಂಗುತ್ತಿ

To

BOOK POST

Vidyanandaji muni
Bahubali Kshetra

**ಜಿನವಾಣಿ ಕಾರ್ಯಾಲಯ**

ನಂ.67. ಡಿ. ಬನುಮಯ್ಯ ರಸ್ತೆ, ಮೈಸೂರು-೫೭೦೦೦೧




The Jinavani, the monthly Kannada Maga[illegible]ed and Published by Sri M.C. Padmanabhasharm[illegible] by B V. Alahiyamanavalan, Propritor, Sri Vijayala[illegible] 355, D. Subbiah Road, MYSORE- 570001

ಜೈನಸಾಹಿತ್ಯಪ್ರಚಾರಸಂಘದ ಜೈನಧಾರ್ಮಿಕ ಕನ್ನಡ ಮಾಸಿಕ ಮುಖಪತ್ರಿಕೆ

# ಜಿನವಾಣಿ

ಅರ್ಹತ್ಪರಮೇಷ್ಠಿಗಳು







ಮೇ 10 1984

ಅನಂತಕೃತಜ್ಞತಾಭಿನಂದನಗಳು

ಜಿನವಾಣೀರಜತೋತ್ಸವ ಸ್ಮಾರಕವಾದ

ಶ್ರೀ ಮಹಾವೀರಸ್ವಾಮಿಯ

೨೫೦೦ ನೇ ವೀರನಿರ್ವಾಣವಿಶೇಷಸಂಚಿಕೆಯಲ್ಲಿನ

ಜಿನವಾಣೀಸಂಪಾದಕನ

ಎಂ. ಸಿ. ಪದ್ಮನಾಭ ಶರ್ಮನಾದ ನನ್ನ

ವಿಶೇಷ ನಿವೇದನಪ್ರಾರ್ಥನಾನುಸಾರ

೯೮೮ನೇ ಮೇ ಸಂಚಿಕೆಯ

ಸಂಪೂರ್ಣ ಪ್ರಕಟಣಾದಿಗಳಿಗೆ

ಮೈಸೂರಿನ ಜೈನ ವಿದ್ಯಾಭಾಸ್ಕರರಾದ

ದಿ|| ಎ. ಶಾಂತಿರಾಜಶಾಸ್ತ್ರಿಗಳ

ವಿ ಸ್ಮರಣೆಗಾಗಿ

ಅವರ ಮಕ್ಕಳುಗಳಾದ

ಸನ್ಮಾನ್ಯಶ್ರೀ: ಎಸ್. ನಾಗಕುಮಾರಯ್ಯ.

„ ಎಸ್. ಜಿತೇಂದ್ರಕುಮಾರ್.

„ ಡಾ|| ಎಸ್. ಪ್ರಸನ್ನಕುಮಾರ್

„ ಎಸ್. ಗುಣವರ್ಮ ಇವರುಗಳಿಗೆ

ಇದೇ ಮೈಸೂರಿನಲ್ಲಿರುವ ನ್ಯಾಯಧರ್ಮ ಪ್ರವರ್ತಕರುಗಳಾದ

ಅನಂತಹೃತ್ಪೂರ್ವಕಕೃತಜ್ಞತಾಯುಕ್ತವಾದ ಧನ್ಯವಾದಗಳನ್ನು ಅರ್ಪಿಸುವೆವು

ಈ ಔದಾರ್ಯ ವಾತ್ಸಲ್ಯಗಳೇ ನಮ್ಮ ರಕ್ಷಾಕವಚ !!

ಇದೇ ಈ ಸಂಚಿಕೆಯ

ಮುದ್ರಣಪ್ರಕಟಣಾದಿಗಳಿಗೆ ಆಧಾರ!!!

ಇಂತು ಕೃತಜ್ಞ

ಮೈಸೂರು ಎಂ. ಸಿ ಪದ್ಮನಾಭಶರ್ಮ

೧೦-೫-೮೪ ಸಂಪದಕ, ಜಿನವಣಿ

||ಓಮ್||

|| ಓಮ್ ನಮಸ್ಸಿದ್ಧೇಭ್ಯಃ ||


# ಜಿ ನ ವಾ ಣಿ

## JINAVANI

ಜೈನಸಾಹಿತ್ಯ ಪ್ರಚಾರಸಂಘದ ಮುಖಪತ್ರಿಕೆ

ಜೈ ನ ಧಾ ರ್ಮಿ ಕ

ಕ ನ್ನ ಡ ಮಾ ಸ ಪ ತ್ರಿ ಕೆ

KANNADA MONTHLY MAGAZINE


ಸತ್ವೇಷು ಮೈತ್ರೀಂ ಗುಣಿಷು ಪ್ರಮೋದಂ ಕ್ಲಿಷ್ಟೇಷು ಜೀವೇಷು ಕೃಪಾಪರತ್ವಮ್
ಮಾಧ್ಯಸ್ಥಭಾವಂ ವಿಪರೀತವೃತ್ತೌ ಸದಾ ಮಮಾತ್ಮಾ ವಿದಧಾತು ದೇವ ! ||

–ಅಮಿತಗತಿ

ಎಲೈ ! ದೇವನೇ ! ಪ್ರಾಣಿಗಳಲ್ಲಿ ಸ್ನೇಹವನ್ನೂ, ಗುಣವಂತರಲ್ಲಿ ಸಂತೋಷವನ್ನೂ, ಕಾಯಕ್ಲೇಶ-ಮನಃಕ್ಲೇಶಗಳಲ್ಲಿ ತೊಳಲಾಡುವ ಪ್ರಾಣಿಗಳಲ್ಲಿ ದಯೆಯನ್ನೂ, ಶಾಸ್ತ್ರಾಗಮಾಪ್ತವ್ಯತಿರೇಕಮಾರ್ಗಾಶ್ರಯಿಗಳಲ್ಲಿ ಮಾಧ್ಯಸ್ಥಭಾವನೆಯನ್ನೂ ನನಗೆ ಉಂಟುಮಾಡು.

ಅನುವಾದ– M.P.A. ತಿಲಕ್, M.A., ಮೈಸೂರು.


ಮಂಡಲ ೩೩-೩೪) ಮೈಸೂರು ೧೧ನೆಯ ಮೇ ೧೯೮೮ (ಕಿರಣ- ೮

(ಗೊಮ್ಮಟ-ಚಾವುಂಡರಾಯ ಶಕ– ೧೦೦೩)


## ಶ್ರೀ ಜಿನಸೇನರ ವಾಣಿ ಸರ್ವೋತ್ಕರ್ಷವಾಗಿ ಬೆಳಗಲಿ!

ಜಯಂತಿ ಜಿನಸೇನಸ್ಯ ವಾಚಸ್ತ್ರೈವಿದ್ಯವಂದಿತಃ |
ಯೋಗಿಭಿರ್ಯತ್ಸಮಾಸಾದ್ಯ ಸ್ಖಲಿತಂ ನಾತ್ಮನಿಶ್ಚಯೇ ||

–ಶ್ರೀ ಶುಭಚಂದ್ರರು.

ಜಿನಸೇನರವಾಣಿ-ನ್ಯಾಯ-ವ್ಯಾಕರ-ಸಿದ್ಧಾಂತಶಾಸ್ತ್ರರೂಪವಾದುದು. ಆದ್ದರಿಂದಲೇ ಅದನ್ನು ಎಲ್ಲಾ ಜ್ಞಾನಿಗಳೂ ಗೌರವಿಸುವರು; ಭಕ್ತಿಪ್ರಣವ್ರರಾಗಿ ನಮಿಸುವರು. ಆ ಮಹಾವಾಣಿಯನ್ನು ಓದಿ ಅರ್ಥೈಸಿ ಅನುಷ್ಠಾನದಲ್ಲಿ ಅಳವಡಿಸಿಕೊಂಡವ

ಎಂದೂ ಆತ್ಮನ ನಿಶ್ಚಯಾತ್ಮಕಜ್ಞಾನವಿಚಾರದ ತಿಳುವಳಿಕೆಯಲ್ಲಿ ಎಡವಲಾರರು. ಇಂತಹ ಜಿನಸೇನರ ವಾಣಿ ಸರ್ವೋತ್ಕರ್ಷವಾಗಿ ಬೆಳಗಲಿ! ಅದು ಜಿನವಾಣಿಗೆ ಸಮ.

ಅನುವಾದ– ಸಿಂಹಶರ್ಮ, ಬಿ. ವಿ.

★★★★★★★★★★★★★★★★★★★★★★★★★

## ಸಂಪಾದಕೀಯ

### ವೃಷಭತೀರ್ಥಂಕರರಿಂದ

# ಅಕ್ಷಯ ತದಿಗೆಗೆ ಬಂದಿರುವ ಹೆಗ್ಗಳಿಕೆ

### ವೃಷಭದೇವನ ಜಿನದೀಕ್ಷಾಗ್ರಹಣಕಾಲದಲ್ಲಿ ದೀಕ್ಷಿತರಾದವರ ಅಪಾಮಾರ್ಗಾಶ್ರಯಣ

ಭಗವಾನ್ ವೃಷಭದೇವನು ಭೋಗ-ಭೋಗೋಪಕರಣ- ಭೋಗಸ್ಥಾನಗಳಲ್ಲಿ ವೈರಾಗ್ಯಹೊಂದಿ, ಆತ್ಮಕಲ್ಯಾಣದತ್ತ ಒಲಿದು ಅದರ ಸಾಧನೆಗಾಗಿ ಜಿನದೀಕ್ಷಾಬದ್ಧನಾದನು. ನಂತರ ಆತನು ಆರುತಿಂಗಳಕಾಲ ಉಗ್ರೋಗ್ರವಾದ ಆತ್ಮಧ್ಯಾನರೂಪವಾದ ತಪಸ್ಸಿನಲ್ಲಿ ನಿರತನಾದನು. ಈ ಪುಣ್ಯಾತ್ಮನು ವೈರಾಗ್ಯಹೊಂದಿ ಸರ್ವಸಂಗ ಪರಿತ್ಯಾಗಿಯಾದುದನ್ನು ಕಂಡ ಮರೀಚಿಯೇ ಮೊದಲಾದ ನಾಲ್ಕುಸಾವಿರ ಮುನಿಗಳೂ ಜಿನದೀಕ್ಷಿತರಾದರು. ಧಗಕನಕ ವಸ್ತುವಾಹನಗಳನ್ನೂ ಅದರಲ್ಲಿ ಅಷ್ಟೈಶ್ವರ್ಯವನ್ನೂ ಹೊಂದಿದ ರಾಜಮಹಾರಾಜರುಗಳ ಗುಂಪೂ ಇತ್ತು.

ಪ್ರಕೃತಿವಿಕಾರವನ್ನು ಸಹಿಸಲಾರದ ವೃಷಭದೇವರ ಸಮಕಾಲೀನ ದೀಕ್ಷಿತರ ಕುಚೋದ್ಯ, ಅದರಿಂದ ಉಂಟಾದ ನಾನಾಮತಾದಿವಿಷಯಗಳು–

ವೃಷಭದೇವನೊಡನೆ ಉತ್ಸಾಹದಿಂದ ಜಿನದೀಕ್ಷೆಯನ್ನು ಸ್ವೀಕರಿಸಿದ ಈ ದೀಕ್ಷಾಬದ್ಧರು ಪ್ರಾಕೃತಿಕವಾದ ಹಸಿವು ಬಾಯಾರಿಕೆ ಮುಂತಾದುವುಗಳನ್ನು ಸಹಿಸಲಾರದಾದರು. ಆಗ ಅವರು ತಮಗೆ ಪ್ರಾಪ್ತವಾದ ತಪಸನ್ನು ಪರಿತ್ಯಜಿಸಿ ಸ್ವೇಚ್ಛಾಚಾರಿಗಳಾಗಿ ಗೆಡ್ಡೆಗೆಣಸುಗಳನ್ನೇ ತಿನ್ನುತ್ತಾ ವನಗಳಲ್ಲಿ ಸಂಚರಿಸಲಾರಂಭಿಸಿದರು.

## ವನದೇವತೆಗಳ ಹಿತೋಪದೇಶ, ಅದರಿಂದ ಅವರ ಸ್ವಹಿತಾನುಸಾರಿಯಾದ ಹೊಸ ಹೊಸ ಮತಸ್ಥಾಪನಾದಿಗಳು.

ಇದನ್ನು ಕಂಡು ಹೇಸಿದ ವನದೇವತೆಗಳು ಅವರ ಮೇಲಿನ ಕರುಣೆಯಿಂದ– "ಆತ್ಮಹಿತಾಪೇಕ್ಷಿಯು ಹೀಗೆ ವ್ರತಭ್ರಷ್ಟನಾಗಬಾರದು. 'ವ್ರತಭ್ರಷ್ಟನಿಗೆ 'ನಾಯಂ ಲೋಕೋಽಸ್ತಿ ನ ಪರಃ' ಐಹಿಕವೂ ಇಲ್ಲ; ಆಮುಷ್ಮಿಕ ಮೊದಲೇ ಕೈಗೆಟುಕದು. ನಿಯಮದಂತೆ ನಡೆಯಿರಿ,"—ಎಂದು ಹಿತವಚನವನ್ನು ನುಡಿದರು. ಆದರೆ ರೋಗಗ್ರಸ್ತನಿಗೆ ರೋಗನಿವಾರಕವಾದ ಔಷಧದ ವಿಷಯದಲ್ಲಿ ಅಸಹ್ಯತೆಯುಂಟಾಗುವಂತೆ ಆ ಹಿತವಚನದಲ್ಲಿ ಅವರಿಗೆ ಪಥ್ಯಭಾವನೆ ಉಂಟಾಗಲಿಲ್ಲ. ಆದ್ದರಿಂದ ಅವರು ತಮಗೆ ತೋರಿದ್ದೇ ಆತ್ಮಹಿತಕಾರಕವೆಂದು ಭಾವಿಸಿ ಅದನ್ನೇ ನುಡಿದು ಅದರಂತೆ ಇತರರು ಆಚರಿಸಲು ಪ್ರೇರಿಸಿದರು. ಅವರ ಮಾತುಗಳೇ ಕಪಿಲಾದಿಗಳ ಸಿದ್ಧಾಂತಗಳಾದವು.

## ವೃಷಭದೇವನ ದೀರ್ಘತಪಸ್ಸು, ಆಹಾರಕ್ಕಾಗಿ ಪರ್ಯಟನ, ಆಹಾರ ಅಲಭ್ಯವಾದಾಗ ಪುನಸ್ತಪಸ್ಸು, ಪುನಃ ಪರ್ಯಟನ, ಪುನಶ್ಚ ಉಪದೇಶ

ವೃಷದೇವರು ಆರುತಿಂಗಳಕಾಲ ಉಗ್ರೋಗ್ರತಪವನ್ನಾಚರಿಸಿ ಶರೀರವು ಆಹಾರವನ್ನು ಬಯಸಿದಾಗ ತನ್ನಿಮಿತ್ತವಾಗಿ ಜನಪದದಲ್ಲಿ ಸಂಚರಿಸಲು ಹೊರಟರು. ಆಕಾಲದಲ್ಲಿ ನಿಯಮಬದ್ಧಾಹಾರಪ್ರದಾನವನ್ನರಿಯದ ಜನರ ಆಹಾರವನ್ನು ವೃಷಭದೇವ ಸ್ವೀಕರಿಸಲಾಗಲಿಲ್ಲ. ಆದ್ದರಿಂದ ಪುನಃ ಹೃದಯವನ್ನು ವಿಷಯದಲ್ಲಿ ಪರಾಙ್ಮುಖಗೊಳಿಸಿ ಪುನಃ ಆರುತಿಂಗಳುಕಾಲ ಉಗ್ರತಪಸ್ಸಿಗೆ ಈಡಾದರು. ನಂತರ ಶರೀರ ಆಹಾರ ಬಯಸಿತು. ಕರುಣಾಮಯಿ ವೃಷಭದೇವರು ಆಹಾರಸ್ವೀಕಾರಕ್ಕಾಗಿ ದೇಶಸಂಚಾರ ಹೊರಟರು. ಆಹಾರ ದಾನನಿಯಮವನ್ನು ಅರಿಯದ ಮುಗ್ಧಜೀವಿಗಳಲ್ಲಿ ಅವರ ಕರುಣೆ ಉಕ್ಕಿ ಹರಿಯಿತು. ಆದ್ದರಿಂದ ಕಂಡಕಂಡಲ್ಲಿ ಉಪದೇಶಮಾಡುವುದರಲ್ಲಿಯೇ ನಿರತರಾದರು. ದೇಶಸಂಚಾರಮಾಡುತ್ತಾ ಜಿನಧರ್ಮಬೋಧನೆಯನ್ನುಮಾಡುತ್ತಾ ಜೀವಿಜಾತದ ಅಜ್ಞಾನಾಂಧಕಾರನಿವಾರಣಕಾರ್ಯದಲ್ಲಿ ಪ್ರವೃತ್ತರಾದರು. ಆಗಲೀಗ ಅವರನ್ನು ಶರೀರಕ್ಲೇಶವಾಗಲಿ ಆಹಾರಾಭಾವದ ಶ್ರಮವಾಗಲಿ ಅವರನ್ನು ಪೀಡಿಸಲಿಲ್ಲ.

## ಪೂರ್ವಭವಸ್ಮರಣದಿಂದ ಹಸ್ತಿನಾಪುರದರಸ-ಸಹೋದರರ ನಿಯಮಬದ್ಧಾಹಾರದಾನ

ವೃಷಭದೇವನ ಆಗಮನ, ಅವನ ಉಪದೇಶ, ಅದಕ್ಕಾಗಿ ಲಕ್ಷೋಪಲಕ್ಷಜನ ಸೇರುವ ಬಗ್ಗೆ, ಇವುಗಳನ್ನು ಕರ್ಣಾಕರ್ಣಿಕೆಯಿಂದ ಹಸ್ತಿನಾಪುರದ ಅರಸುಕುಮಾರರಾದ ಸೋಮಪ್ರಭ-ಶ್ರೇಯಾಂಸರು ತಿಳಿದರು. ಆವೇಳೆಗಾಗಲೇ ವೃಷಭದೇವ ಅತ್ತ ಬಿಜಮಾಡುತ್ತಿರುವ ಅಂಶವು ಕಿವಿಗೆ ಬಿತ್ತು. ಆಗಲೀಗ ಅವರಿಗೆ ಪೂರ್ವಭವಸ್ಮರಣೆಯಾಯಿತು ಅದರಿಂದ ಜಿನದೀಕ್ಷಿತರಿಗೆ ಆಹಾರ ದಾನಕೊಡುತ್ತಿದ್ದ ಬಗೆಯೂ ತನಗೆ ತಾನೇ ಸ್ಮರಣೆಗೆ ಬಂದಿತು. ಆ ವೇಳೆಗಾಗಲೇ ಅಂದರೆ– ವೃಷಭದೇವ ಹಸ್ತಿನಾಪುರಿಗೆ

ಬರುವ ಮೊದಲದಿನ ರಾತ್ರಿ ಶುಭಸ್ವಪ್ನವಾಯಿತು. ನಿಮಿತ್ತಜ್ಞಾನಿಗಳಿಂದ ಮಹಾಪುರುಷರ ಆಗಮನದ ಅರಿವಾಯಿತು. ಆ ಮಹಾಪುರುಷನನ್ನು ಆದರಿಸಲು ಸ್ವಾಗತಿಸಲು ಕಾಯುತ್ತಿದ್ದರವರು.

### ಅರಸಕುವರರಿಗೆ ಆಹಾರದಾನಕ್ರಮಸ್ಮರಣಕಾರಣ, ಮಹಾಸ್ವಾಮಿಗೆ ಆಹಾರದಾನ

ಮಹಾಪುರುಷ ವೃಷಭದೇವರ ಆಗಮನವಾಯಿತು. ಆ ದಿವ್ಯತೇಜಃಪುಂಜ ಅವನ ಹೃನ್ಮನಗಳನ್ನು ತುಂಬಿತು. ಆಗಲೀಗ ಮಿಂಚುಮಿಂಚಿದಂತೆ ಪೂರ್ವಭವದಲ್ಲಿ ತಾವು ವಜ್ರಜಂಘ ಶ್ರೀಮತಿಯರಾಗಿದ್ದುದು ಜ್ಞಾಪಕಕ್ಕೆ ಬಂತು. ಆಗ ಜಿನಭಕ್ತರಾಗಿ ಮುನಿಗಳಿಗೆ ಆಹಾರ ದಾನಮಾಡುತ್ತಿದ್ದ ಕ್ರಮವು ಜ್ಞಾಪಕಕ್ಕೆ ಮರುಕಳಿಸಿದರು ತತ್‌ಕ್ಷಣವೇ ಅವರು ಭಕ್ತಿಪ್ರಸ್ವರಾದರು. ಆ ವೃಷಭದೇವರನ್ನು ದಾನಕ್ಕಾಗಿ ತಡೆದರು. ನಂತರ ಅವರ ಪೂಜಾದಿಗಳನ್ನು ಮಾಡಿ ಕಬ್ಬಿನಹಾಲನ್ನು ಆಹಾರವಾ ಸಕ್ರಮವಾಗಿತ್ತು ಪೂಜಿಸಿದರು.

### ರಾಜಕುಮಾರ್ದ್ವಯರು ವೃಷಭದೇವನಿಗೆ ಆಹಾರದಾನವಿತ್ತ ಸುದಿನ- ತದಿಗೆ

## ಅಕ್ಷಯ ತದಿಗೆಯಾದ ಬಗೆ

ಮಹಾಪುರುಷ ವೃಷಭದೇವನಿಗೆ ಯಾವದಿನ ಸೋಮಪ್ರಭ-ಶ್ರೇಯಂಸರು ನಿಯಮಬದ್ಧವಾಗಿ ಆಹಾರದಾನವನ್ನಿತ್ತರೊ ಆ ಪುಣ್ಯದಿನ ತದಿಗೆಯಾಗಿದ್ದಿತು. ಅದ್ದರಿಂದ ಆ ಪುಣ್ಯಪುರುಷನಿಗೆ ಆಹಾರದಾನವಿತ್ತ ಮಹಾಪುಣ್ಯದಿಂದ ಜಗತ್ತಿನ ಸಮಸ್ತ ಜೀವರಾಶಿಗಳಿಗೂ ಪುಣ್ಯವೂ ಆಹಾರವೂ ಅಕ್ಷಯವಾಯಿತು. ಆದ್ದರಿಂದ ಈದಿನ ಅಕ್ಷಯತದಿಗೆಯೆಂದು ಪ್ರಸಿದ್ಧಪಡೆಯಿತು.

### ದೇವತೆಗಳಿಂದ ಆದ ಅಕ್ಷಯತದಿಗೆಯ ಪ್ರಾಶಸ್ತ್ಯಪ್ರಶಂಸೆ

ಇಂತಹ ಅಮೋಘವಾದ ಮಹಾಸನ್ನಿವೇಶವನ್ನು ಕಂಡ ದೇವಗಳು ಹರ್ಷತುಂಬಿದವರಾಗಿ ಪಂಚಾಶ್ಚರ್ಯಗಳನ್ನುಂಟುಮಾಡಿದರು. ಅಲ್ಲದೆ- ಈ ಮಹಾದಾನವನು ಅಹೋ ! ದಾನ ! ಅಹೋ ! ಪಾತ್ರ ! ಎಂದು ಆದಿನದ ಪಾಶಸ್ತ್ಯವನ್ನು ಉದ್ಘೋಷಿಸಿದರು. ಅಂದಿನಿಂದ ಆದಿನ 'ಅಕ್ಷಯತದಿಗೆ' ಎಂದು ಪ್ರಸಿದ್ಧವಾಯಿತು.

### ಅಕ್ಷಯ ತದಿಗೆಯ ದಿನವೇ ವೃಷಭದೇವನ ಸಿದ್ಧಪದಾರೋಹಣಕ್ಕೆ ಕಾರಣ

ಈ ಬಗೆಯಲ್ಲಿ ಆಹಾರದಾನ ಅಂದು ನಡೆಯದಿದ್ದರೆ ಏನಾಗುತ್ತಿತ್ತೋ ಬಲ್ಲವರಾರು? ಆರೀತಿ ಆಹಾರ ದಾನವಾದದ್ದರಿಂದಲೇ ವೃಷಭದೇವರು ಒಂದು ಸಾವಿರವರ್ಷ

॥ಓಮ್॥

॥ ಓಮ್ ನಮಸ್ಸಿದ್ಧೇಭ್ಯಃ ॥

# ಜಿನವಾಣಿ

# JINAVANI


ಜೈನಸಾಹಿತ್ಯ ಪ್ರಚಾರಸಂಘದ ಮುಖಪತ್ರಿಕೆ

ಜೈನ ಧಾರ್ಮಿಕ

ಕನ್ನಡ ಮಾಸಪತ್ರಿಕೆ

KANNADA MONTHLY MAGAZINE


ಸತ್ವೇಷು ಮೈತ್ರೀಂ ಗುಣಿಷು ಪ್ರಮೋದಂ ಕ್ಲಿಷ್ಟೇಷು ಜೀವೇಷು ಕೃಪಾಪರತ್ವಮ್
ಮಾಧ್ಯಸ್ಥಭಾವಂ ವಿಪರೀತವೃತ್ತೌ ಸದಾ ಮಮಾತ್ಮಾ ವಿದಧಾತು ದೇವ ! ॥

–ಅಮಿತಗತಿ

ಎಲೈ ! ದೇವನೇ ! ಪ್ರಾಣಿಗಳಲ್ಲಿ ಸ್ನೇಹವನ್ನೂ, ಗುಣವಂತರಲ್ಲಿ ಸಂತೋಷವನ್ನೂ, ಕಾಯಕ್ಲೇಶ-ಮನಃಕ್ಲೇಶಗಳಲ್ಲಿ ತೊಳಲಾಡುವ ಪ್ರಾಣಿಗಳಲ್ಲಿ ದಯೆಯನ್ನೂ, ಶಾಸ್ತ್ರಾಗಮಾಪ್ತವ್ಯತಿರೇಕಮಾರ್ಗಾಶ್ರಯಿಗಳಲ್ಲಿ ಮಾಧ್ಯಸ್ಥಭಾವನೆಯನ್ನೂ ನನಗೆ ಉಂಟುಮಾಡು.

ಅನುವಾದ– M.P.A. ತಿಲಕ್, M.A., ಮೈಸೂರು.

---


ಮಂಡಲ ೩೩-೩೪) ಮೈಸೂರು ೧೧ನೆಯ ಮೇ ೧೯೮೪ (ಕಿರಣ– ೮

(ಗೊಮ್ಮಟ-ಚಾವುಂಡರಾಯ ಶಕ– ೧೦೦೩)


---

## ಶ್ರೀ ಜಿನಸೇನರ ವಾಣಿ ಸರ್ವೋತ್ಕರ್ಷವಾಗಿ ಬೆಳಗಲಿ !

ಜಯಂತಿ ಜಿನಸೇನಸ್ಯ ವಾಚಸ್ತ್ರೈವಿದ್ಯವಂದಿತಾಃ ।
ಯೋಗಿಭಿರ್ಯತ್ಸಮಾಸಾದ್ಯ ಸ್ಖಲಿತಂ ನಾತ್ಮನಿಶ್ಚಯೇ ॥

–ಶ್ರೀ ಶುಭಚಂದ್ರರು.

ಜಿನಸೇನರವಾಣಿ-ನ್ಯಾಯ-ವ್ಯಾಕರ-ಸಿದ್ಧಾಂತಶಾಸ್ತ್ರರೂಪವಾದುದು. ಆದ್ದರಿಂದಲೇ ಅದನ್ನು ಎಲ್ಲಾ ಜ್ಞಾನಿಗಳೂ ಗೌರವಿಸುವರು; ಭಕ್ತಿಪ್ರಣಮ್ರರಾಗಿ ನಮಿಸುವರು. ಆ ಮಹಾವಾಣಿಯನ್ನು ಓದಿ ಅರ್ಥೈಸಿ ಅನುಷ್ಠಾನದಲ್ಲಿ ಅಳವಡಿಸಿಕೊಂಡವ

ಎಂದೂ ಆತ್ಮನ ನಿಶ್ಚಯಾತ್ಮಕಜ್ಞಾನವಿಚಾರದ ತಿಳುವಳಿಕೆಯಲ್ಲಿ ಎಡವಲಾರ. ಇಂತಹ ಜಿನಸೇನರ ವಾಣಿ ಸರ್ವೋತ್ಕರ್ಷವಾಗಿ ಬೆಳಗಲಿ! ಅದು ಜಿನವಾಣಿಗೆ ಸಮ.

ಅನುವಾದ– ಸಿಂಹಶರ್ಮ, ಬಿ. ಎ.

★★★★★★★★★★★★★★★★★★★★★★★★

## ಸಂಪಾದಕೀಯ

### ವೃಷಭತೀರ್ಥಂಕರರಿಂದ

# ಅಕ್ಷಯ ತದಿಗೆಗೆ ಬಂದಿರುವ ಹೆಗ್ಗಳಿಕೆ

### ವೃಷಭದೇವನ ಜಿನದೀಕ್ಷಾಗ್ರಹಣಕಾಲದಲ್ಲಿ ದೀಕ್ಷಿತರಾದವರ ಅಪಾಮಾರ್ಗಾಶ್ರಯಣ

ಭಗವಾನ್ ವೃಷಭದೇವನು ಭೋಗ-ಭೋಗೋಪಕರಣ- ಭೋಗಸ್ಥಾನಗಳಲ್ಲಿ ವೈರಾಗ್ಯಹೊಂದಿ, ಆತ್ಮಕಲ್ಯಾಣದತ್ತ ಒಲಿದು ಅದರ ಸಾಧನೆಗಾಗಿ ಜಿನದೀಕ್ಷಾಬದ್ಧನಾದನು. ನಂತರ ಆತನು ಆರುತಿಂಗಳಕಾಲ ಉಗ್ರೋಗ್ರವಾದ ಆತ್ಮಧ್ಯಾನರೂಪವಾದ ತಪಸ್ಸಿನಲ್ಲಿ ನಿರತನಾದನು. ಈ ಪುಣ್ಯಾತ್ಮನು ವೈರಾಗ್ಯಹೊಂದಿ ಸರ್ವಸಂಗ ಪರಿತ್ಯಾಗಿಯಾದುದನ್ನು ಕಂಡ ಮರೀಚಿಯೇ ಮೊದಲಾದ ನಾಲ್ಕುಸಾವಿರ ಮುನಿಗಳೂ ಜಿನದೀಕ್ಷಿತರಾದರು. ಧಗಕನಕ ವಸ್ತುವಾಹನಗಳನ್ನೂ ಅದರಲ್ಲಿ ಅಷ್ಟೈಶ್ವರ್ಯವನ್ನೂ ಹೊಂದಿದ ರಾಜಮಹಾರಾಜರುಗಳ ಗುಂಪೂ ಇತ್ತು.

**ಪ್ರಕೃತಿವಿಕಾರವನ್ನು ಸಹಿಸಲಾರದ ವೃಷಭದೇವರ ಸಮಕಾಲೀನ ದೀಕ್ಷಿತರ ಕುಚೋದ್ಯ, ಅದರಿಂದ ಉಂಟಾದ ನಾನಾಮತಾದಿವಿಷಯಗಳು–**

ವೃಷಭದೇವನೊಡನೆ ಉತ್ಸಾಹದಿಂದ ಜಿನದೀಕ್ಷೆಯನ್ನು ಸ್ವೀಕರಿಸಿದ ಈ ದೀಕ್ಷಾಬದ್ಧರು ಪ್ರಾಕೃತಿಕವಾದ ಹಸಿವು ಬಾಯಾರಿಕೆ ಮುಂತಾದುವುಗಳನ್ನು ಸಹಿಸಲಾರದಾದರು. ಆಗ ಅವರು ತಮಗೆ ಪ್ರಾಪ್ತವಾದ ತಪಸನ್ನು ಪರಿತ್ಯಜಿಸಿ ಸ್ವೇಚ್ಛಾಚಾರಿಗಳಾಗಿ ಗೆಡ್ಡೆಗೆಣಸುಗಳನ್ನೇ ತಿನ್ನುತ್ತಾ ವನಗಳಲ್ಲಿ ಸಂಚರಿಸಲಾರಂಭಿಸಿದರು.

## ವನದೇವತೆಗಳ ಹಿತೋಪದೇಶ, ಅದರಿಂದ ಅವರ ಸ್ವಹಿತಾನುಸಾರಿಯಾದ ಹೊಸ ಹೊಸ ಮತಸ್ಥಾಪನಾದಿಗಳು

ಇದನ್ನು ಕಂಡು ಹೇಸಿದ ವನದೇವತೆಗಳು ಅವರ ಮೇಲಿನ ಕರುಣೆಯಿಂದ– "ಆತ್ಮಹಿತಾಪೇಕ್ಷಿಯು ಹೀಗೆ ವ್ರತಭ್ರಷ್ಟನಾಗಬಾರದು. 'ವ್ರತಭ್ರಷ್ಟನಿಗೆ 'ನಾಯಂ ಲೋಕೋಽಸ್ತಿ ನ ಪರಃ' ಐಹಿಕವೂ ಇಲ್ಲ; ಆಮುಷ್ಮಿಕ ಮೊದಲೇ ಕೈಗೆಟುಕದು. ನಿಯಮದಂತೆ ನಡೆಯಿರಿ,"—ಎಂದು ಹಿತವಚನವನ್ನು ನುಡಿದರು. ಆದರೆ ರೋಗಗ್ರಸ್ತನಿಗೆ ರೋಗನಿವಾರಕವಾದ ಔಷಧದ ವಿಷಯದಲ್ಲಿ ಅಸಹ್ಯತೆಯುಂಟಾಗುವಂತೆ ಆ ಹಿತವಚನದಲ್ಲಿ ಅವರಿಗೆ ಪಥ್ಯಭಾವನೆ ಉಂಟಾಗಲಿಲ್ಲ. ಆದ್ದರಿಂದ ಅವರು ತಮಗೆ ತೋರಿದ್ದೇ ಆತ್ಮಹಿತಕಾರಕನೆಂದು ಭಾವಿಸಿ ಅದನ್ನೇ ನುಡಿದು ಅದರಂತೆ ಇತರರು ಆಚರಿಸಲು ಪ್ರೇರಿಸಿದರು. ಅವರ ಮಾತುಗಳೇ ಕಪಿಲಾದಿಗಳ ಸಿದ್ಧಾಂತಗಳಾದವು.

## ವೃಷಭದೇವನ ದೀರ್ಘತಪಸ್ಸು, ಆಹಾರಕ್ಕಾಗಿ ಪರ್ಯಟನ, ಆಹಾರ ಅಲಭ್ಯವಾದಾಗ ಪುನಸ್ತಪಸ್ಸು, ಪುನಃ ಪರ್ಯಟನ, ಪುನಶ್ಚ ಉಪದೇಶ

ವೃಷದೇವರು ಆರುತಿಂಗಳಕಾಲ ಉಗ್ರೋಗ್ರತಪವನ್ನಾಚರಿಸಿ ಶರೀರವು ಆಹಾರವನ್ನು ಬಯಸಿದಾಗ ತನ್ನಿಮಿತ್ತವಾಗಿ ಜನಪದದಲ್ಲಿ ಸಂಚರಿಸಲು ಹೊರಟರು. ಆಕಾಲದಲ್ಲಿ ನಿಯಬದ್ಧಾಹಾರಪ್ರದಾನವನ್ನರಿಯದ ಜನರ ಆಹಾರವನ್ನು ವೃಷಭದೇವ ಸ್ವೀಕರಿಸಲಾಗಲಿಲ್ಲ. ಆದ್ದರಿಂದ ಪುನಃ ಹೃದಯವನ್ನು ವಿಷಯದಲ್ಲಿ ಪರಾಙ್ಮುಖಗೊಳಿಸಿ ಪುನಃ ಆರುತಿಂಗಳುಕಾಲ ಉಗ್ರತಪಸ್ಸಿಗೆ ಈಡಾದರು. ನಂತರ ಶರೀರ ಆಹಾರ ಬಯಸಿತು. ಕರುಣಾಮಯಿ ವೃಷಭದೇವರು ಆಹಾರಸ್ವೀಕಾರಕ್ಕಾಗಿ ದೇಶಸಂಚಾರ ಹೊರಟರು ಆಹಾರ ದಾನನಿಯಮವನ್ನು ಅರಿಯದ ಮುಗ್ಧಜೀವಿಗಳಲ್ಲಿ ಅವರ ಕರುಣೆ ಉಕ್ಕಿ ಹರಿಯಿತು. ಆದ್ದರಿಂದ ಕಂಡಕಂಡಲ್ಲಿ ಉಪದೇಶಮಾಡುವುದರಲ್ಲಿಯೇ ನಿರತರಾದರು. ದೇಶಸಂಚಾರಮಾಡುತ್ತಾ ಜಿನಧರ್ಮಬೋಧನೆಯನ್ನುಮಾಡುತ್ತಾ ಜೀವಿಜಾತದ ಅಜ್ಞಾನಾಂಧಕಾರನಿವಾರಣಕಾರ್ಯದಲ್ಲಿ ಪ್ರವೃತ್ತರಾದರು. ಆಗಲೀಗ ಅವರನ್ನು ಶರೀರಕ್ಲೇಶವಾಗಲಿ ಆಹಾರಾಭಾವದ ಶ್ರಮವಾಗಲಿ ಅವರನ್ನು ಪೀಡಿಸಲಿಲ್ಲ.

## ಪೂರ್ವಭವಸ್ಮರಣದಿಂದ ಹಸ್ತಿನಾಪುರದರಸ-ಸಹೋದರರ ನಿಯಮಬದ್ಧಾಹಾರದಾನ

ವೃಷಭದೇವನ ಆಗಮನ, ಅವನ ಉಪದೇಶ, ಅದಕ್ಕಾಗಿ ಲಕ್ಷೋಪಲಕ್ಷಜನ ಸೇರುವ ಬಗ್ಗೆ, ಇವುಗಳನ್ನು ಕರ್ಣಾಕರ್ಣಿಕೆಯಿಂದ ಹಸ್ತಿನಾಪುರದ ಅರಸುಕುಮಾರರಾದ ಸೋಮಪ್ರಭ-ಶ್ರೇಯಾಂಸರು ತಿಳಿದರು. ಆವೇಳೆಗಾಗಲೇ ವೃಷಭದೇವ ಅತ್ತ ಬಿಜಮಾಡುತ್ತಿರುವ ಅಂಶವು ಕಿವಿಗೆ ಬಿತ್ತು. ಆಗಲೀಗ ಅವರಿಗೆ ಪೂರ್ವಭವಸ್ಮರಣೆಯಾಯಿತು ಅದರಿಂದ ಜಿನದೀಕ್ಷಿತರಿಗೆ ಆಹಾರ ದಾನಕೊಡುತ್ತಿದ್ದ ಬಗೆಯೂ ತನಗೆ ತಾನೇ ಸ್ಮರಣೆಗೆ ಬಂದಿತು. ಆ ವೇಳೆಗಾಗಲೇ ಅಂದರೆ– ವೃಷಭದೇವ ಹಸ್ತಿನಾವತಿಗೆ

ಬರುವ ಮೊದಲದಿನ ರಾತ್ರಿ ಶುಭಸ್ವಪ್ನವಾಯಿತು. ನಿಮಿತ್ತಜ್ಞಾನಿಗಳಿಂದ ಮಹಾ ಪುರುಷರ ಆಗಮನದ ಅರಿವಾಯಿತು. ಆ ಮಹಾಪುರುಷನನ್ನು ಆದರಿಸಲು ಸ್ವಾಗತಿಸಲು ಕಾಯುತ್ತಿದ್ದರವರು.

### ಅರಸಕುವರರಿಗೆ ಆಹಾರದಾನಕ್ರಮಸ್ಮರಣಕಾರಣ, ಮಹಾಸ್ವಾಮಿಗೆ ಆಹಾರದಾನ

ಮಹಾಪುರುಷ ವೃಷಭದೇವರ ಆಗಮನವಾಯಿತು. ಆ ದಿವ್ಯತೇಜಃಪುಂಜ ಅವನ ಹೃನ್ನಯನಗಳನ್ನು ತುಂಬಿತು. ಆಗಲೀಗ ಮಿಂಚುಮಿಂಚಿದಂತೆ ಪೂರ್ವಭವದಲ್ಲಿ ತಾವು ವಜ್ರಜಂಘ ಶ್ರೀಮತಿಯರಾಗಿದ್ದುದು ಜ್ಞಾಪಕಕ್ಕೆ ಬಂತು. ಆಗ ಜಿನಭಕ್ತರಾಗಿ ಮುನಿಗಳಿಗೆ ಆಹಾರ ದಾನಮಾಡುತ್ತಿದ್ದ ಕ್ರಮವು ಜ್ಞಾಪಕಕ್ಕೆ ಮರುಕಳಿಸಿದರು ತತ್‌ಕ್ಷಣವೇ ಅವರು ಭಕ್ತಿಪ್ರಹೃಷ್ಟರಾದರು. ಆ ವೃಷಭದೇವರನ್ನು ದಾನಕ್ಕಾಗಿ ತಡೆದರು. ನಂತರ ಅವರ ಪೂಜಾದಿಗಳನ್ನು ಮಾಡಿ ಕಬ್ಬಿನಹಾಲನ್ನು ಆಹಾರವಾ ಸಕ್ರಮವಾಗಿತ್ತು ಪೂಜಿಸಿದರು.

### ರಾಜಕುಮಾರದ್ವಯರು ವೃಷಭದೇವನಿಗೆ ಆಹಾರದಾನವಿತ್ತ ಸುದಿನ– ತದಿಗೆ

## ಅಕ್ಷಯ ತದಿಗೆಯಾದ ಬಗೆ

ಮಹಾಪುರುಷ ವೃಷಭದೇವನಿಗೆ ಯಾವದಿನ ಸೋಮಪ್ರಭ-ಶ್ರೇಯಂಸರು ನಿಯಮಬದ್ಧವಾಗಿ ಆಹಾರದಾನವನ್ನಿತ್ತರೊ ಆ ಪುಣ್ಯದಿನ ತದಿಗೆಯಾಗಿದ್ದಿತು. ಆದ್ದರಿಂದ ಆ ಪುಣ್ಯಪುರುಷನಿಗೆ ಆಹಾರದಾನವಿತ್ತ ಮಹಾಪುಣ್ಯದಿಂದ ಜಗತ್ತಿನ ಸಮಸ್ತ ಜೀವರಾಶಿಗಳಿಗೂ ಪುಣ್ಯವೂ ಆಹಾರವೂ ಅಕ್ಷಯವಾಯಿತು. ಆದ್ದರಿಂದ ಈದಿನ ಅಕ್ಷಯತದಿಗೆಯೆಂದು ಪ್ರಸಿದ್ಧಪಡೆಯಿತು.

### ದೇವತೆಗಳಿಂದ ಆಡ ಅಕ್ಷಯತದಿಗೆಯ ಪ್ರಾಶಸ್ತ್ಯಪ್ರಶಂಸೆ

ಇಂತಹ ಅಮೋಘವಾದ ಮಹಾಸನ್ನಿವೇಶವನ್ನು ಕಂಡ ದೇವಗಳು ಹರ್ಷತುಂಬಿದ ವರಾಗಿ ಪಂಚಾಶ್ಚರ್ಯಗಳನ್ನುಂಟುಮಾಡಿದರು. ಅಲ್ಲದೆ– ಈ ಮಹಾದಾನವನು ಅಹೋ ! ದಾನ ! ಅಹೋ ! ಪಾತ್ರ ! ಎಂದು ಆದಿನದ ಪಾಶಸ್ತ್ಯವನ್ನು ಉದ್ಘೋಷಿಸಿದರು. ಅಂದಿನಿಂದ ಆದಿನ 'ಅಕ್ಷಯತದಿಗೆ' ಎಂದು ಪ್ರಸಿದ್ಧವಾಯಿತು.

### ಅಕ್ಷಯ ತದಿಗೆಯ ದಿನವೇ ವೃಷಭದೇವನ ಸಿದ್ಧಪದಾರೋಹಣಕ್ಕೆ ಕಾರಣ

ಈ ಬಗೆಯಲ್ಲಿ ಆಹಾರದಾನ ಅಂದು ನಡೆಯದಿದ್ದರೆ ಏನಾಗುತ್ತಿತ್ತೋ ಬಲ್ಲವರಾರು? ಆರೀತಿ ಆಹಾರ ಧಾನವಾದದ್ದರಿಂದಲೇ ವೃಷಭದೇವರು ಒಂದು ಸಾವಿರವರ್ಷ

ತಪವನ್ನಾಚರಿಸುವಂತಾಯಿತು. ಅದರ ಅಂತ್ಯದಲ್ಲಿ ಒಂದುದಿನ ಉತ್ತರಾಷಾಢಾ ನಕ್ಷತ್ರದೊಳು ವೃಷಭದೇವರು ಕೇವಲ ಜ್ಞಾನಕಲ್ಯಾಣವನ್ನು ಪಡೆದರು.

## ವೃಷಭದೇವರ ಸಮವಸರಣಸಭಾಲಂಕರಣ, ದಿವ್ಯಧ್ವನ್ಯುದ್ಭವ ಗಣಧರರಿಂ ಜ್ಞಾನೋಪದೇಶ ಸಿದ್ಧಪದಪ್ರಾಪ್ತಿ

ವೃಷಭದೇವರಿಗೆ ಕೇವಲ ಜ್ಞಾನೋದಯವಾಗುತ್ತಿದ್ದಂತೆಯೇ ಕುಬೇರನು ದೇವೇಂದ್ರನ ಅಪ್ಪಣೆಯಂತೆ ಸಮವಸರಣಸಭೆಯನ್ನು ವಿರಚಿಸಿದನು. ಆಗಲೀಗ ವೃಷಭ ದೇವರು ತೀರ್ಥಂಕರರಾಗಿ ವಿರಾಜಮಾನರಾಗಲು ಅವರಿಂದ ದಿವ್ಯಧ್ವನ್ಯಾತ್ಮಕವಾಗಿ ಪೌರುಷೇಯಾಪೌರುಷೇಯಾತ್ಮಕವಾದ ಜಿನವೇದವು ಉದಯಿಸಿತು. ಅದನು ಗಣಧರರು ವ್ಯಾಖ್ಯಾನಿಸಲು ಆಯುಷ್ಯಾವಸಾನದಲ್ಲಿ ಸಿದ್ಧಪದವಿಯನ್ನು ಹೊಂದಿ ನಿತ್ಯಾನಂದವನ್ನು ಹೊಂದಿದರು.

## ಜಿನದೀಕ್ಷಾಪ್ರಭಾವಂ

ಜಿನದೀಕ್ಷಾಪ್ರಭಾವದಿಂದ ವೃಷಭಮುನಿ-ಸೋಮಪ್ರಭ-ಶ್ರೇಯಾಂಸರಲ್ಲಿ ಕ್ರಮ ವಾಗಿ ವೃಷಭದೇವನು ತೀರ್ಥಂಕರಪರಮದೇವನಾಗಿಯೂ, ಸೋಮಪ್ರಭನು ಸಿಂಹ ಸೇಣಗಣಧರನಾಗಿಯೂ, ಶ್ರೇಯಾಂಸನು ಚಾರುಷೇಣಗಣಧರನಾಗಿಯೂ ಆದರು. ಇದೆಲ್ಲವೂ ಅವರವರ ಪುಣ್ಯಾನುಬಂಧಪುಣ್ಯದಿಂದ ಸಿದ್ಧಪದವಿಯನ್ನು ಪಡದಬಗ.

## ಈ ಮಹಾಪುರುಷರ ದಿವ್ಯಜೀವನದಿಂದ ತಿಳಿಯಬೇಕಾದ ಅಂಶ

ನಮ್ಮ ನಮ್ಮ ಕರ್ಮಾನುಬಂಧಕರ್ಮಗಳಿಂದ ನಾವು ಪುಣ್ಯಪಾಪಗಳನು ಸಂಚಯಿಸಿ ತದನುಗುಣವಾದ ಸ್ವರ್ಗನರಕಾದಿಗಳನ್ನು ಪಡೆಯುತ್ತೇವೆ. ಈ ಸಂದರ್ಭ ದಲ್ಲಿ ಈ ಕರ್ಮಬಂಧದಿಂದಲೇ ಹೊರಬರಲು ಸಕಲಕರ್ಮಗಳನ್ನು ತೊಳೆದುಕೊಂಡು ಆತ್ಮಧ್ಯಾನ ತತ್ಪರನಾದರೆ ಉತ್ತಮ ಸಿದ್ಧಗತಿಯು ಲಭ್ಯವಾಗುವುದರಲ್ಲಿ ಸಂಶಯವಿಲ್ಲ. ಉದಾಹರಣೆಗೆ ಹೇಳುವುದಾದರೆ ನಿರ್ನಾಮಿಕೆಯಾಗಿದ್ದ ಹೆಣ್ಣುಜೀವವು ಮುನಿಗಳ ಉಪದೇಶಬಲದಿಂದ ಸ್ವಯಂಪ್ರಭೆ ನಂತರದ ಭವದಲ್ಲಿ ಕೇಶವ ಇವೇ ಮೊದಲಾದ ಭವ ಗಳನ್ನು ಪಡೆದು ಕೊನೆಗೆ ಶ್ರೇಯಾಂಸಗಣಧರನಾಗಿ ಕೊನೆಯಲ್ಲಿ ಸಕಲಕರ್ಮಬಂಧ ಗಳನ್ನು ಕಳೆದು ಸಿದ್ಧಪದವಿಯನ್ನು ಪಡೆದನೆಂಬುದನ್ನು ಸ್ಮರಿಸಬಹುದಲ್ಲವೆ? ಆದ್ದರಿಂದ ನಾವು ಕರ್ಮಬಂಧವನ್ನು ಕಳಚಿಕೊಂಡು ಉತ್ತಮಪದವಿಯನ್ನು ಪಡೆಯಲು ಪ್ರಯತ್ನಿಸಲು ಇಂತಹ ಅಕ್ಷಯತದಿಗೆ ಮುಂತಾದ ದಿನಗಳು ಎಚ್ಚರಗೊಳಿಸುತ್ತವೆ. ಜೈನಬಾಂಧವರೇ, ಎಚ್ಚರಗೊಳ್ಳಿರಿ! 'ಪ್ರಾಪ್ಯ ವರಾನ್ ನಿಬೋಧತ!' ಜೈ ವೃಷಭ ಜಿನೇಂದ್ರ!!

ಸಂಪಾದಕ ಜಿನವಾಣಿ,

## ಜೈನ ವಿವಿಧ ವಾರ್ತೆಗಳು

ಮತ್ತು

## ಪ್ರಕಟಣ ವಿಮರ್ಶಾದಿಗಳು

### ಮಹಾವೀರ ಜಯಂತ್ಯುತ್ಸವ ಸಂದರ್ಭದಲ್ಲಿ

#### ಪೂಜ್ಯ ಹೊಂಬಜ ಮಹಾಸ್ವಾಮಿಗಳವರ ವಿಶೇಷ ಭೇಟಿ

ಭಗವಾನ್ ಶ್ರೀ ಮಹಾವೀರತೀರ್ಥಂಕರರ ೨೫೮೩ನೇ ಜಯಂತ್ಯುತ್ಸವದ ಆಚರಣೆಯ ಪವಿತ್ರಸಂದರ್ಭದಲ್ಲಿ ಹೊಂಬುಜ ಶ್ರೀಕ್ಷೇತ್ರದ ಪರಮಪೂಜ್ಯ ಸ್ವಸ್ತಿಶ್ರೀಶ್ರೀಶ್ರೀ ದೇವೇಂದ್ರ ಕೀರ್ತಿಭಟ್ಟಾರಕ ಪಟ್ಟಾಚಾರ್ಯವರ್ಯಮಹಾಸ್ವಾಮಿಗಳವರು ಚಿಕ್ಕಮಗಳೂರು ಜಿಲ್ಲಾ ಹೋನ್ನಾಡು ಕುದುರೆಮುಖ, ವರಂಗ, ಮುಂತಾದ ಕಡೆಗಳಲ್ಲಿರುವ ಶ್ರೀ ಜಿನಮಂದಿರಗಳನ್ನು ಸಂದರ್ಶಿಸಿ ಅಲ್ಲಿ ಬಹುಸಂಖ್ಯೆಯಲ್ಲಿ ಸಮಾವೇಶಗೊಂಡಿದ್ದ ಜೈನಜೈನೇತರಭಕ್ತಾದಿಗಳನ್ನು ಆಶೀರ್ವದಿಸಿ ವಿಶೇಷಪೂಜಾಮಹೋತ್ಸವಗಳಲ್ಲಿ ಭಾಗವಹಿಸಿದರು. ಪೂಜ್ಯ ಮಹಾಸ್ವಾಮಿಗಳ ಸಂದರ್ಶನದ ಸವಿನೆನಪಿಗಾಗಿ ಇಲ್ಲಿ ವಿಶೇಷ-ದಾನ-ಧರ್ಮಗಳು ನೆರವೇರಿದುವು.

— ನವೀನ್ ಕುಮಾರ್

---

#### "ಭಕ್ತಿ ಸಂಚಯ" ಬಿಡುಗಡೆ

ಶ್ರೀ ಹೊಂಬುಜ ಮಠದ ಆಶ್ರಯದಲ್ಲಿರುವ ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆಯ ಆರನೆಯ ಪುಷ್ಪವಾಗಿರುವ "ಭಕ್ತಿಸಂಚಯ" ಎಂಬ ಭಕ್ತಿಗೀತೆಗಳ ಸಂಕಲನವೊಂದನ್ನು ಕೋಥಳಿ ಶ್ರೀ ಶಾಂತಿಗಿರಿ ಕ್ಷೇತ್ರದಲ್ಲಿ ನೆರವೇರಿದ ಪಂಚಕಲ್ಯಾಣ ಮತ್ತು ಗಜರಥ ಮಹೋತ್ಸವಗಳು ನೆರವೇರಿದ ಸಂದರ್ಭದಲ್ಲಿ ದಿ. ೭-೫-೮೪ರಂದು ಕೊಲ್ಲಾಪುರ/ನಾಂದಣಿ ಮಠದ ಶ್ರೀ ಪೀಠಾಧ್ಯಕ್ಷರಾಗಿರುವ ಶ್ರೀ ಪರಮಪೂಜ್ಯ ಸ್ವಸ್ತಿಶ್ರೀ ಜಿನಸೇನ ಭಟ್ಟಾರಕ ಮಹಾಸ್ವಾಮಿಗಳವರು ಬಿಡುಗಡೆಮಾಡಿದರು.

ಇಪ್ಪತ್ತನಾಲ್ಕು ತೀರ್ಥಂಕರರ ಪೂರ್ವಭವ ಮತ್ತು ತೀರ್ಥಂಕರ ಭವವೃತ್ತಾಂತಗಳನ್ನು ಪದ್ಯರೂಪದಲ್ಲಿ ರಚಿಸಿರುವ ಈ ಕವನ ಸಂಕಲವನ್ನು ಬರೆದವರು ಶ್ರೀ ಯಂ.

ಪಿ. ವರ್ಧಮಾನಶೆಟ್ಟಿಯವರು. ಗ್ರಂಥವನ್ನು ಪರಮಪೂಜ್ಯ ಆಚಾರ್ಯ ರತ್ನ ಶ್ರೀ ೧೦೮ ದೇಶಭೂಷಣ ಮಹಾರಾಜರ ಚರಣಕಮಲಗಳಲ್ಲಿ ಅರ್ಪಿಸಲಾಗಿದೆ.

ಪುಸ್ತಕಬೆಲೆ ರೂಪಾಯಿ ೪-೦೦ (ಅಂಚೆವೆಚ್ಚ ಪ್ರತ್ಯೇಕ). ಆಸಕ್ತಿಯುಳ್ಳವರು ಶ್ರೀ ಸಿದ್ಧಾಂತ ಕೀರ್ತಿ ಗ್ರಂಥಮಾಲೆ ಹೊಂಬುಜ, ಜೈನಮಠ- P.O. ಹೊಂಬುಜ, ೫೭೭೪೩೬- ಶಿವಮೊಗ್ಗ ಜಿಲ್ಲೆ ಇವರಿಂದ ಪಡೆಯಬಹುದು.

## ಶ್ರೀ ಹೊಂಬುಜ ಮಹಾಕ್ಷೇತ್ರದಲ್ಲಿ

### ಮಹಾವೀರ ಜಯಂತ್ಯುತ್ಸವ

ಶ್ರೀ ಹೊಂಬುಜ ಅತಿಶಯ ಮಹಾಕ್ಷೇತ್ರದಲ್ಲಿ ದಿ. ೧೩-೪-೮೪ರಂದು. ಶ್ರೀ ಮಹಾವೀರ ಜಯಂತ್ಯುತ್ಸವವು ಪರಮಪೂಜ್ಯ ಸ್ವಸ್ತಿಶ್ರೀ ಮಹಾಸ್ವಾಮಿಗಳವರ ಮಾರ್ಗದರ್ಶನದಲ್ಲಿ ವಿಜೃಂಭಣೆಯಿಂದ ನೆರವೇರಿತು. ತತ್ಸಂಬಂಧ ಶ್ರೀಕ್ಷೇತ್ರದಲ್ಲಿ ವಿಶೇಷಪೂಜೆ, ಪುನಸ್ಕಾರ, ದಾನ, ಧರ್ಮಾದಿವಿನಿಯೋಗಗಳು ನೆರವೇರಿದುವು.

ವ್ಯವಸ್ಥಾಪಕರು,

ಶ್ರೀ ಹೊಂಬುಜ, ಜೈನಮಠ,

## ಮಹಾವೀರರ ಪಂಚಶೀಲ ತತ್ವಗಳು, ಜನತೆಗೆ ದಾರಿದೀಪವಾಗಲಿ !

– ಹೊರನಾಡುಕ್ಷೇತ್ರದಲ್ಲಿ ಪೂಜ್ಯ ಹೊಂಬುಜ ಶ್ರೀಶ್ರೀಗಳವರು

ಚಿಕ್ಕಮಗಳೂರು:—"ಭಗವಾನ್ ಮಹಾವೀರರು ಬೋಧಿಸಿದ ಸಾಮಾಜಿಕ ಆಧ್ಯಾತ್ಮಿಕ ತತ್ವಗಳು ವಿಶ್ವಮಾನವ ಕುಲದ ಶ್ರೇಯಸ್ಸಿಗಾಗಿ ಬೋಧಿಸಿದ ಮಹಾನ್ ತತ್ವಗಳಾಗಿವೆ. ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಮತ್ತು ಪಾರಮಾರ್ಥಿಕ ವಿಕಾಸಕ್ಕಾಗಿ ಇವೆಲ್ಲವೂ ಉಪಾದೇಯ ಮೌಲ್ಯಗಳಾಗಿವೆ." ಎಂದು ಇಲ್ಲಿಗೆ ಸಮೀಪದ ಶ್ರೀ ಹೊರನಾಡು ಕ್ಷೇತ್ರದಲ್ಲಿ ನೆರವೇರಿದ ಶ್ರೀ ಮಹಾವೀಗ ಜಯಂತ್ಯುತ್ಸವದಲ್ಲಿ ಹೊಂಬುಜ ಶ್ರೀಕ್ಷೇತ್ರ ಜೈನಮಠದ ಪರಮಪೂಜ್ಯ ಸ್ವಸ್ತಿಶ್ರೀ ದೇವೇಂದ್ರ ಕೀರ್ತಿ ಭಟ್ಟಾರಕ ಮಹಾಸ್ವಾಮಿಗಳವರು ಆಶೀರ್ವದಿಸಿದರು.

ಮಹಾವೀರ ಜಯಂತ್ಯುತ್ಸವ ಸಂದರ್ಭದಲ್ಲಿ ಇಲ್ಲಿಯ ಶ್ರೀಜಿನಚೈತ್ಯಾಲಯದಲ್ಲಿ ಪ್ರಾತಃಕಾಲ ಭಗವಾನ್ ಶ್ರೀಪಾರ್ಶ್ವನಾಥಸ್ವಾಮಿ ಮತ್ತು ಭಗವಾನ್ ಶ್ರೀ ಮಹಾವೀರಸ್ವಾಮಿ ಸನ್ನಿಧಿಯಲ್ಲಿ ವಿಶೇಷಪೂಜೆಗಳು ನೆರವೇರಿದುವು. ಅಪರಾಹ್ಣ ಪೂಜ್ಯ ಮಹಾಸ್ವಾಮಿಗಳವರು ದಯಮಾಡಿಸಿದಾಗ ಪೂಜ್ಯರಿಗೆ ವೈಭವದ ಪೂರ್ಣಕುಂಭ

ಸ್ವಾಗತವನ್ನು ನೀಡಿ ಗೌರವಿಸಲಾಯಿತು. ಸಾಯಂಕಾಲ ನೆರವೇರಿದ ಧರ್ಮ ಸಮ್ಮೇಳನವನ್ನು ಶ್ರೀ ಡಿ. ವಿ. ಗಜೇಂದ್ರ ಪ್ರಸನ್ನ ಜೋಯಿಸ್‌ರವರು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎನ್. ನೀಲಕಂಠಯ್ಯನವರು ಭಾಗವಹಿಸಿ ಧಾರ್ಮಿಕ ಉಪನ್ಯಾಸವನ್ನು ಮಾಡಿದರು.

ಶ್ರೀ ಚಂದ್ರರಾಜ ಜೈನ್‌ರವರು ಸ್ವಾಗತಿಸಿದರು. ಶ್ರೀ ಯಂ. ಪಿ., ವರ್ಧಮಾನ ಶೆಟ್ಟಿಯವರಿಂದ ಧನ್ಯವಾದವು ಸಮರ್ಪಿಸಲ್ಪಟ್ಟಿತು.

ಅಧ್ಯಕ್ಷ ಪೀಠದಿಂದ ಅನುಗ್ರಹ ಭಾಷಣಮಾಡಿದ ಪರಮಪೂಜ್ಯ ಮಹಾಸ್ವಾಮಿಗಳವರು ಹಿಂದೂ– ಜೈನದರ್ಶನಗಳ ಹೋಲಿಕೆ-ವ್ಯತ್ಯಾಸಗಳನ್ನು ವಿವರಿಸಿದರಲ್ಲದೆ ಭಗವಾನ್ ಮಹಾವೀರರ ತತ್ವಬೋಧನೆಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವ ಅವಶ್ಯಕತೆಯನ್ನು ವಿವರಿಸಿದರು. ಅಲ್ಲದೆ ಶ್ರೀ ಮಹಾವೀರರು ಬೋಧಿಸಿದ ಪಂಚಶೀಲ ತತ್ವಗಳು ಇಂದಿನ ಎಲ್ಲಾ ವರ್ಗದ ಜನತೆಗೆ ಸನ್ಮಾರ್ಗದಲ್ಲಿ ನಡೆಯಲು ದಾರಿದೀಪವಾಗೆಯಾಗಲಿ; ಎಂದು ಹಾರೈಸಿದರು.

—ನವೀನ್‌ಕುಮಾರ್

# ತ್ರಿಲೋಕದರ್ಶನ

( ಕಳೆದ ಸಂಚಿಕೆಯಿಂದ ಮುಂದುವರೆದುದು )

ಲೇಖಕರು: **ಡಿ. ಶ್ರೀಪತಿಜೋಯಿಸ್, ಭುವನಹಳ್ಳಿ.**

ಇಲ್ಲಿಯುವರೆವಿಗೆ– ಅಹಿಂಸೆಯ ಅಡಿಗಲ್ಲಮೇಲೆ ಅನೇಕಾಂತವಾದದ ನುಡಿಗಳಲ್ಲಿ ನಿರ್ಧೃತವಾದ ಜೈನಸಿದ್ಧಾಂತವು-- ತನ್ನ ನಿರೂಪಣಾನುಗುಣವಾದ ಕರ್ಮ ಸಿದ್ಧಾಂತವನ್ನು ಮುಂದಿಟ್ಟು ಲೋಕಾಲೋಕವಿಚಾರ ಮಂಥನ ಮಾಡಿದೆ. ಇದೆಲ್ಲವೂ ತೀರ್ಥಂಕರಪರಮದೇವನ ಮುಖೋದ್ಭೂತವಾಗಿ ಜಿನವಾಣಿಯಾಗಿದೆ. ಇದರ ಅನುಸಾರವಾಗಿ ಪ್ರಥಮಾನುಯೋಗಾದಿಗಳಲ್ಲಿ ಲೋಕಸ್ವರೂಪ, ತ್ರಿಲೋಕೌನ್ನತ್ಯ ವಿಸ್ತಾರಗಳು, ತ್ರಸನಾಳ-ರಜ್ಜು-ಅಧಃ-ಮಧ್ಯ-ಊರ್ಧ್ವಲೋಕ-ವಿಸ್ತಾರಾಯತಾದಿವರ್ಣನೆ, ಪ್ರಥಮಸ್ವರ್ಗದಿಂದ ಸಿದ್ಧಶಿಲೆಯುವರೆಗೆ ಲೋಕವಿಸ್ತಾರ-ವಾಯುವಲಯವರ್ಣನೆ, ಲೋಕದಲ್ಲಿ ಅಧೋಲೋಕದ ಘನಫಲ, ಆತ್ಮಾಂಗುಲದ ಉಪಯೋಗ, ಪಲ್ಯ-ಸಾಗರಪ್ರಮಾಣ ಅಧೋಲೋಕ-ಪೃಥ್ವಿಗಳ ಹಾಗೂ ಖರಭಾಗಾದಿ ಪೃಥ್ವೀಭಾಗಾಂಗಗಳ ವಿವರಣೆ, ರತ್ನಗರ್ಭಾ_ ನಾಮದ ಸಾರ್ಥಕತೆ, ಇವರ ವಿಸ್ತೀರ್ಣ-ಬಿಲ ಸಂಖ್ಯಾವಿವರಣ ನರಕದುಃಖಸ್ವರೂಪ, ನಾರಕಿಗಳ ವೃದಾಹಾರ, ಶ್ರೀ

ತೀರ್ಥಂಕರಪ್ರಕೃತಿಬದ್ಧನಾರಕಿಗಳ ಸ್ಥಿತಿ, ನರಕದುಃಖಭೇದ, ಅಸುರ-ಕುಮಾರಕೃತದುಃಖ, ನರಕದಲ್ಲಿ ಅವಧಿಜ್ಞಾನ, ತತ್-ಕ್ಷೇತ್ರಪ್ರಮಾಣ ಅಲ್ಲಿ ಸಮ್ಯಕ್ತ್ವದ ಕರಣ, ನಾರಕಿಗಳ ಅವಸ್ಥೆ, ಇಂದ್ರಾದಿದಿದೇವತೆಗಳ ದೇವಿಯರು, ಅವರ ಆಹಾರ-ಉಚ್ಛ್ವಾಸ-ಶರೀರ-ವೈಭವ ದೇವದೇವ್ಯಾಯುಷ್ಯ, ಜನ್ಮ ಜನ್ಮಕಾರಣ, ಇಷ್ಟು ಅಂಶ ತಿಳಿದಾಯಿತ್ತು.

[ಇನ್ನುಮುಂದೆ ಓದುವಾ]

## ಇಂದ್ರರ ದೇವಿಯರ ಸಂಖ್ಯೆ

ಚಮರೇಂದ್ರರಿಗೆ ಕೃಷ್ಣಾ, ರತ್ನಾ, ಸುಮೇಘಾ, ಸುಕಾ ಮತ್ತು ಸುಕಾತಾ ಎಂಬ ಐದು ಅಗ್ರಮಹಿಷೀ-ಮಹಾದೇವತೆಗಳಿದ್ದಾರೆ. ಈ ಮಹಾದೇವಿಯರು ಪ್ರತಿಯೊಬ್ಬರಿಗೂ ಪ್ರತ್ಯೇಕ ಪ್ರತ್ಯೇಕವಾಗಿ ೮೦೦೦ ಪರಿವಾರದೇವಿಯರು ಇದ್ದಾರೆ. ಈ ಪ್ರಕಾರ ಐವರು ಮಹಾದೇವಿಯರಿಗೆ ಒಟ್ಟು ೮೦೦೦×೫=೪೦,೦೦೦ ಪರಿವಾರ ದೇವಿಯರಾಗುತ್ತಾರೆ.

ಈ ಐದೂ ಮಹಾದೇವಿಯರೂ ವಿಕ್ರಿಯದಿಂದ ತಾವು ೮-೮ ಸಹಸ್ರರೂಪ! ಧಾರಣೆಮಾಡುತ್ತಾರಂತೆ ! ಅಲ್ಲದೆ ಇಂದ್ರರಿಗೆ ೧೬,೦೦೦ ವಲ್ಲಭಾದೇವಿಯರು ಬೇರೇ.

ಅಂತೂ ವಲ್ಲಭಾದೇವಿಯರು ೧೬,೦೦೦+ಪರಿವಾರ ದೇವಿಯರು ೪೦,೦೦೦ ಮೊತ್ತ: ೫೬,೦೦೦ ದೇವಿಯರು.

ಎರಡನೆಯ ವೈರೋಚನ ಇಂದ್ರರಿಗೆ ಪದ್ಮಾ, ಪದ್ಮಶ್ರೀ, ಕನಕಶ್ರೀ, ಕನಕ-ಮಾಲಾ ಮತ್ತು ಮಹಾಪದ್ಮಾ ಎಂಬ ಅಗ್ರಮಹಿಷಿಯರಿದ್ದಾರೆ. ಇವರ ವಿಕ್ರಿಯಾ, ಪರಿವಾರ ದೇವಿಯರ ಪ್ರಮಾಣ ಈ ಹಿಂದೆ ಹೇಳಿದಂತೆಯೇ ಇದ್ದು ಇಲ್ಲಿಯೂ ೫೬,೦೦೦ ದೇವಿಯರಿದ್ದಾರೆ.

ಇದೇಪ್ರಕಾರ ಭೂತಾನಂದ ಮತ್ತು ಧರಣಾನಂದರಿಗೆ ತಲಾ ಐವತ್ತು ಐವತು ಸಹಸ್ರ ದೇವಾಂಗನೆಯರು.

ವೇಣುದೇವ, ವೇಣುಧಾರಿ ಇಂದ್ರರಿಗೆ ೪೪,೦೦೦ ದೇವಿಯರು. ಉಳಿದ ಇಂದ್ರರಿಗೆ ಪ್ರತಿಯೊಬ್ಬರಿಗೂ ೩೨,೦೦೦ ದೇವಾಂಗನೆಯರು.

ಇದಲ್ಲದೆ ಈ ಇಂದ್ರರ ಪಾರಿಷದ ಮುಂತಾದ ದೇವತೆಗಳ ದೇವಾಂಗನೆಯರ ಪ್ರಮಾಣವು 'ತಿಲೋಯಪಣ್ಣತ್ತಿ'ಯಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟದೆ. ವಿಷಯ ವಿಸ್ತಾರಭಯದಿಂದ ಇಲ್ಲಿ ವಿವರಿಸಹೋರಟಿಲ್ಲ.

ಪ್ರತೀಂದ್ರ, ಸಾಮಾನಿಕ, ಆದಿದೇವರುಗಳು ಇಂದ್ರರ ಪ್ರಧಾನಪರಿವಾರಕ್ಕೆ ಸೇರಿದವರಾಗಿದ್ದಾರೆ. ಇವರಲ್ಲದೆ ಬೇರೆಯವರೂ ಕೂಡ ಅಪ್ರಧಾನ ಪರಿವಾರರೂಪ ದೇವರಾಗುವುದರಿಂದ ಅವರನ್ನು ಅಸಂಖ್ಯಾತರು ಎಂದು ಹೇಳಲಾಗಿದೆ.

## ಮಾನಸಿಕ ಆಹಾರದ ವರ್ಣನೆ

ಇಂದ್ರ, ಪ್ರತೀಂದ್ರ ಮುಂತಾದ ದೇವತೆ ಮತ್ತು ಅವರ ರಾಣಿಯರದು ಅತಿಸ್ನಿಗ್ಧ-ಅನುಪಮ-ಅಮೃತಮಯ-ಆಹಾರವಾಗಿದೆ. ಚಮರ ಮತ್ತು ವೈರೋಚನ ಇಂದ್ರರಿಗೆ ೧೦೦೦ ವರ್ಷಕ್ಕೊಮ್ಮೆ ಆಹಾರಗ್ರಹಣವಾಗುತ್ತದಂತೆ! ಭೂತಾನಂದ ಮೊದಲಾದ ಆರು ಇಂದ್ರರಿಗೆ $12\frac{1}{2}$ ದಿನಕ್ಕೊಮ್ಮೆ ಆಹಾರಗ್ರಹಣ. ಜಲಪ್ರಭ ಮೊದಲಾಗಿ ಆರು ಇಂದ್ರರಿಗೆ ೧೨ ದಿನಗಳಿಗೊಮ್ಮೆಯೂ, ಅಮಿತಗತಿಯೇ ಮೊದಲಾದ ಆರು ಇಂದ್ರರಿಗೆ $7\frac{1}{2}$ ದಿನಗಳಿಗೊಮ್ಮೆಯೂ ಆಹಾರಗ್ರಹಣ. ಹತ್ತು ಸಹಸ್ರವರ್ಷಗಳ ಜಘನ್ಯ (ಬಹುಕಾಲ) ಆಯುಷ್ಯವಿರುವ ದೇವತೆಗಳಿಗೆ ಎರಡು ದಿನಗಳಿಗೊಮ್ಮೆಯೂ, ಪಲ್ಯೋಪಮ ಆಯುಷ್ಯವಿರುವ ದೇವತೆಗಳಿಗೆ ಐದುದಿನಗಳಿಗೊಮ್ಮೆಯೂ ಭೋಜನದ ಅವಕಾಶದೊರೆಯುತ್ತದಂತೆ. ಈ ದೇವತೆಗಳ ಮನಸ್ಸಿನಲ್ಲಿ ಭೋಜನದ ಇಚ್ಛೆಯಾದೊಡನೆಯೇ ಅವರ ಕಂಠದಿಂದ ಅಮೃತ ಒಸರುತ್ತದೆ; ತೃಪ್ತಿ ತರುತ್ತದೆ! ಈ ಕಾರಣ ಇದಕ್ಕೆ ಮಾನಸಿಕ ಆಹಾರ ಎನ್ನಲಾಗಿದೆ.

## ಉಚ್ಛ್ವಾಸ

ಚಮರ ಮತ್ತು ವೈರೋಚನ ಇಂದ್ರರು ಹದಿನೈದುದಿನಗಳಿಗೊಮ್ಮೆ ಉಚ್ಛ್ವಾಸಿಸುತ್ತಾರೆ. ಭೂತಾನಂದ ಮೊದಲಾಗಿ ಆರು ಇಂದ್ರರು ಹನ್ನೆರಡೂವರೆ ಮುಹೂರ್ತಗಳಿಗೊಮ್ಮೆಯೂ, ಜಲಪ್ರಭಾ ಮೊದಲಾಗಿ ಆರು ಇಂದ್ರರು ಆರೂವರೆ ಮುಹೂರ್ತಗಳಿಗೊಮ್ಮೆಯೂ, ಹತ್ತು ಸಹಸ್ರವರ್ಷ ಆಯುಷ್ಯವಿರುವವರು ಏಳು ಮುಹೂರ್ತಗಳಿಗೊಮ್ಮೆಯೂ ಮತ್ತು ಪಲ್ಯೋಪಮ-ಆಯುಷ್ಯದ ದೇವತೆಗಳು ಐದು ಮುಹೂರ್ತಗಳಿಗೊಮ್ಮೆಯೂ ಉಚ್ಛ್ವಾಸಿಸುತ್ತಾರೆ.

## ಶರೀರ ವರ್ಣನೆ

ಅರಸುಕುಮಾರರ ಶರೀರದ ವರ್ಣ ಕಪ್ಪು, ನಾಗಕುಮಾರರ ವರ್ಣ ಇನ್ನೂ ಹೆಚ್ಚು ಕಪ್ಪು. ಗರುಡ ಮತ್ತು ದ್ವೀಪಕುಮಾರರೂ ಕಪ್ಪೆ. ದಿಕ್ಕುಮಾರರು ಕಪ್ಪೇ ವಿದ್ಯುತ್ಕುಮಾರರ ಬಣ್ಣ ಮಿಂಚಿನಂತಹುದು. ಅಗ್ನಿಕುಮಾರರದು ಅಗ್ನಿಕಾಂತಿಯಂತೆ. ವಾಯುಕುಮಾರರದು ನೀಲಕಮಲ ಸದೃಶವಾದ ನೈಬಣ್ಣ.

# ಇಂದ್ರರ ವೈಭವ

ಮೇಲೆ ಹೇಳಿದ ಇಂದ್ರರು ಭಕ್ತಿಯಿಂದ ಪಂಚಕಲ್ಯಾಣದ ನಿಮಿತ್ತ ಎರಡೂವರೆ ದ್ವೀಪಗಳಿಗೂ, ಜಿನೇಂದ್ರ ಭಗವಾನರ ಪೂಜೆಯ ನಿಮಿತ್ತ ನಂದೀಶ್ವರದ್ವೀಪ ಮುಂತಾದ ಪವಿತ್ರಸ್ಥಾನಗಳಿಗೂ ಹೋಗುತ್ತಾರೆ.

ಅಸುರಕುಮಾರ ಮುಂತಾದ ದೇವತೆಗಳು ಬೇರೆಯವರ ಸಹಾಯವಿಲ್ಲದೆ ಸ್ವತಃ ಈಶಾನಸ್ವರ್ಗದತನಕ ಹೋಗಬಲ್ಲರು; ಅನ್ಯದೇವತೆಗಳ ಸಹಾಯದಿಂದ ಅಚ್ಯುತ ಸ್ವರ್ಗದತನಕ ಕೂಡಾ ಹೋಗಬಲ್ಲರು. ಈ ದೇವತೆಗಳು ಶರೀರದ ನಿರ್ಮಲಕಾಂತಿ, ಅನುಪಮರೂಪು, ಸುಗಂಧಿತ ಶ್ವಾಸೋಚ್ಛ್ವಾಸ ಮತ್ತು ಸಮಚತುರಸ್ರ ದೇಹದಿಂದ ಕೂಡಿದವರಾಗಿದ್ದಾರೆ. ಇವರಿಗೆ ಸಮಾನರಾಗಿ ಇವರ ದೇವಿಯರೂ ಸಹಾ ಅಂತಹುದೇ ಗುಣಗಳಿಂದ ಕೂಡಿರುತ್ತಾರೆ.

ಈ ದೇವದೇವಿಯರಿಗೆ ರೋಗ, ವೃದ್ಧಾವಸ್ಥೆ ಮುಂತಾದುವುಗಳು ಇರುವುದೇ ಇಲ್ಲ. ಅನುಪಮಬಲಶಾಲಿಗಳಾಗಿರುತ್ತಾರೆ. ಅವರಿಗೆ ಮರಣವೆಂದೂ ಇಲ್ಲ. ಅವರ ಶರೀರದಲ್ಲಿ ಮಲ, ಮೂತ್ರ, ಮಾಂಸ, ಮೇದಾ, ರಕ್ತ, ಮಜ್ಜಾ, ವಸಾ, ಶುಕ್ರ ಮೊದಲಾದ ಧಾತುಗಳೇ ಇರುವುದಿಲ್ಲ. ಈ ದೇವಗಣ ಶರೀರವು ಪ್ರವೀಚಾರದಿಂದ ಯುಕ್ತವಾಗಿದೆ. ಅಂದರೆ ಮಾನಸಿಕವಾಗಿ ಯಾವುದೇ ಒಂದು ಅಪೇಕ್ಷೆಯು ಉದಿಸಿತೆಂದರೆ ಮನುಷ್ಯರುಗಳ ಸಮಾನ ಕಾಮಸುಖದ ಅನುಭವವನ್ನೂ ಪಡುತ್ತಾರೆ.

ಈ ಇಂದ್ರ ಪ್ರತೀಂದ್ರರಿಗೆ ವಿವಿಧಪ್ರಕಾರದ ಛತ್ರಾದಿ ವಿಭೂತಿಗಳು ಪ್ರಾಪ್ತವಾಗುತ್ತವೆ. ಪ್ರತೀಂದ್ರ ಮೊದಲಾದ ದೇವತೆಗಳ ಸಿಂಹಾಸನ, ಛತ್ರ, ಚಾಮರಗಳು ಅವರವರ ಇಂದ್ರರದಕ್ಕಿಂತ ಚಿಕ್ಕವಾಗಿರುತ್ತವೆ.

ಅಸುರಕುಮಾರ ಮೊದಲಾದ ಹತ್ತು ಪ್ರಕಾರ ಭವನವಾಸಿದೇವತೆಗಳ ಭವನಗಳಲ್ಲಿ ಓಲಗ ಶಾಲೆಯಮುಂದೆ ವಿವಿಧ ಪ್ರಕಾರದ ರತ್ನಗಳಿಂದ ನಿರ್ಮಿತವಾದ ಚೈತ್ಯವೃಕ್ಷಗಳಿರುತ್ತವೆ. ಅರಳಿ, ಸಪ್ತವರ್ಣ, ಶಾಲ್ಮಲಿ, ನೇರಳೆ, ವೇತಸ, ಕದಂಬ, ಪ್ರಿಯಂಗು, ಶಿರೀಷ, ಪಲಾಶ ಮತ್ತು ರಾಜದೃಮವೆಂಬ ಈ ಹತ್ತೂ ಚೈತ್ಯವೃಕ್ಷಗಳು. ಇವು ಕ್ರಮವಾಗಿ ಅಸುರಾದಿಕುಲಗಳ ಗುರುತಿನರೂಪಗಳು. ಪ್ರತಿಚೈತ್ಯವೃಕ್ಷದ ಮೂಲಭಾಗದಲ್ಲಿ ನಾಲ್ಕುಕಡೆಯೂ ಪಲ್ಯಂಕಾಸನದ ರಮಣೀಯವಾದ ಐದೈದು ಜಿನ-ಪ್ರತಿಮೆಗಳು ವಿರಾಜಮಾನವಾಗಿವೆ. ಈ ಎಲ್ಲಾ ಪ್ರತಿಮೆಗಳಮುಂದೆ ರತ್ನಮಯವಾದ ೨೦ ಮಾನಸ್ತಂಭಗಳಿವೆ. ಒಂದೊಂದು ಮಾನಸ್ತಂಭದ ಮೇಲೂ ನಾಲ್ಕು ದಿಕ್ಕುಗಳಲ್ಲೂ ಸಿಂಹಾಸನದಿಂದ ಶೋಭಾಯಮಾನವಾದ ೨೮ ಜಿನಪ್ರತಿಮೆಗಳಿವೆ. ಈ ಪ್ರತಿಮೆಗಳ ಹತ್ತಿರ ಛತ್ರ, ಚಾಮರ ಮುಂತಾದ ವಿಭೂತಿಗಳು ಶೋಭಾಯಮಾನವಾಗಿವೆ.

ಚಮರೇಂದ್ರನು ಸೌಧರ್ಮೇಂದ್ರನಿಂದ ದ್ವೇಷಿಸಲ್ಪಡುತ್ತಾನೆ! ವೈರೋಚನ ಈಶಾನರು, ವೇಣುಭೂತಾನಂದರು ಮತ್ತು ವೇಣುಧಾರೀ ಧರಣಾನಂದರು ಪರಸ್ಪರ ಅಸೂಯಾ ಪಡುತ್ತಾರಂತೆ! ಪರರ ನಾನಾಪ್ರಕಾರದ ವಿಭೂತಿಗಳನ್ನು ನೋಡಿ ಮಾತ್ಸರ್ಯಪಡುತ್ತಾರೆ. ಅಸೂಯಾ ಪರಬುದ್ಧಿ ಅಲ್ಲಿಯೂ ಮನೆಮಾಡಿದೆ!

## ದೇವತೆಗಳ ಆಯುಷ್ಯ

| | | |
|---|---|---|
| ಚಮರ, ವೈರೋಚನರದು | – | 1 ಸಾಗರೋಪಮ |
| ಭೂತಾನಂದ, ಧರಣಾನಂದರದು | – | 3 ಪಲ್ಯೋಪಮ |
| ವೇಣು, ವೇಣುಧಾರಿಗಳದು | – | $2\frac{1}{2}$ ಪಲ್ಯೋಪಮ |
| ಪೂರ್ಣ, ವಸಿಷ್ಠರದು | – | $2\frac{1}{2}$ ಪಲ್ಯೋಪಮ |
| ಜಲಪ್ರಭಾಮೊದಲಾದ ಉಳಿದವರದು | – | $1\frac{1}{2}$ ಪಲ್ಯೋಪಮ |

## ದೇವಿಯರ ಆಯುಷ್ಯ

| | | | | |
|---|---|---|---|---|
| ಚಮರೇಂದ್ರನ | ದೇವಿಯರ ಆಯುಷ್ಯ | – | $2\frac{1}{2}$ | ಪಲ್ಯೋಪಮ |
| ವೈರೋಚನ. | ,, | – | $3\frac{1}{2}$ | ,, |
| ಭೂತಾನಂದ | ,, | – | $\frac{1}{8}$ | ,, |
| ಧರಣಾನಂದ | ,, | – | ಸ್ವಲ್ಪಹೆಚ್ಚು $\frac{1}{8}$ | ,, |
| ವೇಣು | ,, | – | ೩ | ಪೂರ್ವಕೋಟಿ |
| ವೇಣುಧಾರಿ | ,, | – | ಸ್ವಲ್ಪಹೆಚ್ಚು ೩ | ,, |

ಉಳಿದ ದಕ್ಷಿಣೇಂದ್ರರ ದೇವಿಯರ ಆಯುಷ್ಯ ಮೂರುಕೋಟಿವರ್ಷ. ಉತ್ತರೇಂದ್ರರ ದೇವಿಯರ ಆಯುಷ್ಯ ಮೂರುಕೋಟಿವರ್ಷಗಳಿಗಿಂತ ಸ್ವಲ್ಪಹೆಚ್ಚು. ಅಸುರ ಮೊದಲಾದ ಹತ್ತುವಿಧ ದೇವತೆಗಳಲ್ಲಿ ನಿಕೃಷ್ಟದೇವತೆಗಳ ಜಘನ್ಯ ಆಯುಷ್ಯಪ್ರಮಾಣ ಹತ್ತು ಸಹಸ್ರವರ್ಷಗಳು.

## ಶರೀರ ಪ್ರಮಾಣ

| | | |
|---|---|---|
| ಅಸುರಕುಮಾರ ಎತ್ತರ | – | ೨೫ ಧನುಃ |
| ಉಳಿದವರ ಎತ್ತರ | – | ೧೦ ಧನುಃ |

ಅಲ್ಲದೆ ವಿಕ್ರಿಯೆಯಿಂದ ತಾಳುವ ಶರೀರದ ಎತ್ತರ ಅನೇಕಪ್ರಕಾರವಾಗಿರುತ್ತದೆ.

## ಅವಧಿಜ್ಞಾನ

ಅವರವರ ಭವನದಲ್ಲಿರುವ ಭವನವಾಸಿ ದೇವತೆಗಳ ಅವಧಿಜ್ಞಾನವು ಊರ್ಧ್ವ ದಿಕ್ಕಿನಲ್ಲಿ ಉತ್ಕೃಷ್ಟರೂಪದಿಂದ ಮೇರುಪರ್ವತ ಶಿಖರವನ್ನು ಸ್ಪರ್ಶಿಸಬಲ್ಲದು. ಅಸುರ ಕುಮಾರರೇ ಮೊದಲಾದ ಹತ್ತು ವಿಧದ ಭವನವಾಸಿದೇವತೆಗಳು ಅನೇಕ ರೂಪಗಳ ವಿಕ್ರಿಯೆ ಮಾಡುತ್ತಾ ಅವರವರ ಅವಧಿ ಜ್ಞಾನಕ್ಷೇತ್ರದ ಕೊನೆಗೆ ತಲುಪಬಲ್ಲರು.

## ಜನ್ಮದ ಕಾರಣ

ಸಂಶಯದಿಂದ ಕೂಡಿದ ಮನುಷ್ಯನು ಕ್ಲೇಶ ಮತ್ತು ಮಿಥ್ಯಾಭಾವವನ್ನು ಹೊಂದುತ್ತಾನೆ ಇಂಥ ಜೀವಿಗಳೂ, ಕಲಹಪ್ರಿಯರೂ, ಅವಿನಯಸ್ವಭಾವಿಗಳೂ, ಜಿನಸೂತ್ರದಿಂದ ವಂಚಿತರೂ, ತೀರ್ಥಂಕರ ಮತ್ತು ಸಂಘದ ಆರಾಧನೆಮಾಡದವರೂ, ದುರ್ಮಾರ್ಗಿಗಳೂ, ಮತ್ತು ಮಿಥ್ಯಾತಪಸ್ವಿಗಳೂ ಭವನವಾಸೀದೇವತೆಗಳಾಗಿ ಜನ್ಮ ತಾಳುತ್ತಾರೆ.

ಸಮ್ಯಕ್ತ್ವದಿಂದ ಕೂಡಿದ ಜೀವಿಗಳು ಮರಣಾನಂತರ ಭವನವಾಸೀ ದೇವತೆಗಳಲ್ಲಿ ಹುಟ್ಟಲಾರರು. ಜಾತಿಸ್ಮರಣೆ, ದೇವಶಾಸ್ತ್ರದರ್ಶನ, ಜಿನಬಿಂಬ-ದರ್ಶನ, ಧರ್ಮಶ್ರವಣದ ಕಾರಣ ಈ ದೇವತೆಗಳು ಸಮ್ಯಕ್ತ್ವವನ್ನು ಹೊಂದು-ವರು. ಈ ಭವನವಾಸೀದೇವತೆಗಳಿಂದ ಹೊರಡುವ ಹೊರಟ ಜೀವ ಕರ್ಮ-ಭೂಮಿಯಲ್ಲಿ ಮನುಷ್ಯಗತಿ ಅಥವಾ ತಿರ್ಯಂಚಗತಿಯನ್ನು ಪಡೆಯುತ್ತದೆ. ಆದರೆ ಇದು ಸುಜ್ಞಾನಿಯಾಗಲಾರದು.

## ಜನ್ಮಸ್ಥಾನ

ಈ ದೇವತೆಗಳ ಭವನದೊಳಗೆ ಉತ್ತಮವಾದ ಕೋಮಲಸ್ಥಳ (ಉಪಪಾದ ಶಾಲೆ) ಇದೆ. ಅಲ್ಲಿ ದೇವಗತಿ ಎಂಬ ಹೆಸರಿನ ಕರ್ಮದ ಉದಯದಿಂದ ದೇವತೆಗಳು ಹುಟ್ಟುತ್ತಾರೆ. ಹೀಗೆ ಹುಟ್ಟುವ ಜೀವ ಅಂತರ್ಮುಹೂರ್ತಮಾತ್ರದಲ್ಲಿ ಆರು ಪರ್ಯಾಪ್ತಿಯನ್ನು ಪೂರ್ಣಮಾಡಿ ಹದಿನಾರುವರ್ಷದ ಯುವಕನ ಸಮಾನವಾದ ಶರೀರ ವನ್ನು ಪಡೆಯುತ್ತದೆ ಈ ಶರೀರದಲ್ಲಿ ಮಲ-ಮೂತ್ರ-ಚರ್ಮ-ಮೂಳೆ-ಮಾಂಸ ಮುಂತಾದುವುಗಳು ಇರುವುದಿಲ್ಲ; ದಿವ್ಯವಾದ ವೈಕ್ರಿಯಕದಂತಹ ಶರೀರವಾಗಿರುತ್ತದೆ. ಆ ಕಾರಣ ಈ ದೇವತೆಗಳಿಗೆ ರೋಗಗಳೇ ಇರುವುದಿಲ್ಲ.

ದೇವಭವನದಲ್ಲಿ ಜೀವವು ಜನ್ಮವೆತ್ತಿದೊಡನೆಯೇ ಭವನದ ಅನುದ್ಘಾಟಿತ ಎರಡು ಬಾಗಿಲುಗಳು ತೆರೆಯುತ್ತವೆ ಆನಂದದ ಭೇರಿ ಶಬ್ದಗಳಾಗುತ್ತವೆ. ಈ ಶಬ್ದ

ಕೇಳಿದ ಪರಿವಾರ ದೇವದೇವತೆಯರು ಜಯಜಯಕಾರಮಾಡುತ್ತಾ ಬರುತ್ತಾರೆ. ಜಯ ಘಂಟೆ-ನಗಾರಿ ಮುಂತಾದ ವಾದ್ಯಗಳು ಮೊಳಗುತ್ತವೆ. ಸಂಗೀತ-ನಾಟ್ಯಗಳೊನೆ ಚತುರರಾದ ಮಾಗಧದೇವರು ಮಂಗಳಗೀತಹಾಡುತ್ತಾರೆ. ಈ ದೃಶ್ಯವನ್ನು ನೋಡಿದ ನವಜಾತದೇವನು ಆಶ್ಚರ್ಯಚಕಿತನಾಗಿ ಯೋಚಿಸುತ್ತಾನೆ; ಅಂದರೆ ಅವನಿಗೆ ಕೂಡಲೇ ಅವಧಿಜ್ಞಾನವು ಲಭ್ಯವಾಗುತ್ತದೆ! ಈ ಸಮಯಕ್ಕೆ ಅಭಂಗಾವಧಿ ಎಂದು ಹೇಳ ಲ್ಪಟ್ಟಿದೆ. ಹೀಗೆ ಹೊಸದಾಗಿ ಹುಟ್ಟುವ ದೇವನಿಗೆ ಸಮ್ಯಕ್ತ್ವ ಉಂಟಾಗುವ ಸಮಯ ವನ್ನು ಸುಅವಧಿ (ಒಳ್ಳೆ ಸಮಯ)ನೆಂದೂ ಕರೆಯಲಾಗಿದ.

ಈ ದೇವಗಣಗಳಿಗೆ ಪೂರ್ವಸ್ಮರಣೆಯುಂಟು. ಇದರಿಂದ ತಾವು ಹಿಂದೆ ಸಮ್ಯಕ್ತ್ವ ಶೂನ್ಯವಾದ ಧರ್ಮಧಾರಣೆಮಾಡಿಯೂ, ಅನೇಕ ದುರ್ಮಾರ್ಗಾವಲಂಬನೆಮಾಡಿದು ದರಿಂದಲೂ ಕೆಳದೇವತೆಗಳ ಯೋನಿಯಲ್ಲಿ ಹುಟ್ಟಿರುವುದನ್ನೂ ಅರಿಯುತ್ತಾರೆ. ಸಮಸ್ತ ಕರ್ಮಗಳನ್ನೂ ನಾಶಗೊಳಿಸುವ ಒಂದೇ ಒಂದು ಅದ್ವಿತೀಯ ಸಾಧನ ಜಿನಪೂಜೆ ಎಂಬ ಭಾವನೆಯೂ ಮೂಡುತ್ತದೆ. ಪರಿಣಾಮವಾಗಿ ಅಭಿಷೇಕ ಯೋಗ್ಯದ್ರವ್ಯಗಳಿಂದ ಭಕ್ತಿ ಪೂರ್ಣರಾಗಿ ಜಿನಭವನದಲ್ಲಿರುವ ಪ್ರತಿಮೆಗಳನ್ನು ಪೂಜಿಸುತ್ತಾರೆ. ಮಿಥ್ಯಾದೃಷ್ಟಿ ದೇವತೆಗಳೂ ಸಹ ಇವರ ಪ್ರಭಾವದಿಂದ ಇವರನ್ನು ಕುಲದೇವತೆಗಳೆಂದು ಗೌರವಿಸು ತ್ತಾರೆ. ಈ ದೇವತೆಗಳು ತಮ್ಮ ತಮ್ಮ ಭವನದಲ್ಲ ಸಿಂಹಾಸನಾರೂಢರಾಗುತ್ತಾರೆ. ಈ ದೇವಗಣ ದಿವ್ಯರೂಪುಲಾವಣ್ಯದಿಂದ ಕೂಡಿ ಅನೇಕ ಪ್ರಕಾರದ ವಿಕ್ರಿಯಾಸ್ವಭಾಂ ಗಳಿಂದ ಪ್ರಸನ್ನಮುಖವುಳ್ಳ ದೇವಿಯರೊಡನೆ ಸುಖಿಸುತ್ತಾರೆ. ದ್ವೀಪ, ಕುಲಾಚಲ, ಭೋಗಭೂಮಿ ನಂದನವನ ಮೊದಲಾದ ಉತ್ತಮೋತ್ತಮಸ್ಥಾನಗಳಲ್ಲಿ ಕ್ರೀಡಿಸು ತ್ತಾರೆ. ಸಮ್ಯಕ್ತ್ವ ಪೂರ್ಣರಾದವರು ಮರಣಾನಂತರ ಉತ್ತಮಮನುಷ್ಯಜನ್ಮವನ್ನು ಪಡೆಯುತ್ತಾರೆ. ಮಿಥ್ಯಾತ್ವ ಪ್ರಭಾವದಿಂದ ಇಡೀ ಜೀವನವನ್ನು ವಿಷಯಭೋಗದಲ್ಲೇ ಕಳೆದವರು ಆರುತಿಂಗಳ ಮೊದಲೇ ತನ್ನ ಅಂತಿಮಕಾಲವನ್ನು ತಿಳಿದು ದುಃಖಿಸುತ್ತಾರೆ. ಸಂಕ್ಲೇಶಪರಿಣಾಮದಿಂದ ಮರಣಹೊಂದಿ ಏಕೇಂದ್ರಿಯಜೀವಿಯಾಗಿಭೂಚರ ಅಥವಾ ಜಲಚರ ಇಲ್ಲವ ಸಸ್ಯಕ್ಕೆ ಬರುವ ಕೀಟವಾಗಿ ಉದಿಸುತ್ತಾರೆ. ಏಕೇಂದ್ರಿಯ ಪರ್ಯಾಯದಿಂದ ಪುನಃ ಉತ್ತಮಪರ್ಯಾಯಕ್ಕೆ ಸ್ಥಳಾಂತರಗೊಳ್ಳುವುದು ಅತ್ಯಂತಕಠಿಣ.

ವಿಷಯಾಸಕ್ತಿಯ ದುಷ್ಪರಿಣಾಮವು ಈ ದೇವತೆಗಳೂ ಸಹ ಏಕಜೀವಾಣುವಾಗಿ ಜನ್ಮತಾಳುವಂತೆ ಮಾಡುತ್ತದ! ಇದನ್ನು ತಿಳಿದೂ ಮಿಥ್ಯಾಮಾರ್ಗ ಹಿಡಿದವರ ಗತಿ ಊಹಾತೀತ!

(ಮುಂದುವರಿಯುವುದ)

---

ತಿದ್ದುಪಡಿ—ಏಪ್ರಿಲ್ ತಿಂಗಳ ಸಂಚಿಕೆಯಲ್ಲಿ—ಇದೇ ಲೇಖದ ೧೨-೧೩ನೇ ಪಂಕ್ತಿಯಲ್ಲಿ ಉದ್ದೇಶವಾಗಿರಬಹುದು ಎಂಬುವನ್ನು ಉದ್ದೇಶವಾಗಿದೆ ಎಂದ ಓದಿಕೊಳ್ಳಬೇಕು.

## ಶ್ರುತಪಂಚಮಿ ಪೂಜಾಮಹೋತ್ಸವ

ಮತ್ತು

## ಸಾಮೂಹಿಕ ಧರ್ಮೋಪದೇಶ [ವ್ರತಸ್ವೀಕಾರ]

ಪರಮಪೂಜ್ಯ ಜಗದ್ಗುರು ಸ್ವಸ್ತಿ ಶ್ರೀ ಶ್ರೀ

ಶ್ರೀಮದಭಿನವ ದೇವೇಂದ್ರಕೀರ್ತಿ ಭಟ್ಟಾರಕ

ಮಹಾಸ್ವಾಮಿಗಳವರ ದಿವ್ಯ ನೇತೃತ್ವದ

ಶ್ರೀ ಹೊಂಬುಜ ಅತಿಶಯ ಮಹಾಕ್ಷೇತ್ರದಲ್ಲಿ ದಿ. ೪-೬-೧೯೮೪ ನೇ ಸೋಮವಾರದಂದು ನೆರವೇರಿಸಲು ನಿಶ್ಚಯಿಸಿರುತ್ತದೆ. ತಾವೆಲ್ಲರೂ ಈ ಧರ್ಮಕಾರ್ಯಗಳಲ್ಲಿ ಭಾಗವಹಿಸಿ ಪುಣ್ಯ ಭಾಗಿಗಳಾಗಬೇಕಾಗಿ ಅಪೇಕ್ಷಿಸುತ್ತೇವೆ.

ಕಾರ್ಯಕ್ರಮಗಳು :–ದಿ. ೪-೬-೮೪ ನೇ ಸೋಮವಾರ ಪೂರ್ವಾಹ್ನ ಗಂಟೆ ೯ ರಿಂದ ನಡೆಯುತ್ತೆ ಮತ್ತೆ ಸಾಯಂಕಾಲ ೭ ರಿಂದ ಪೂಜಾದಿಗಳು ನೆರವೇರುತ್ತವೆ.

ವಿ. ಸೂ:– ಸಾಮೂಹಿಕ ಧರ್ಮೋಪನಯನ (ವ್ರತಸ್ವೀಕಾರ) ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಇಚ್ಛಿಸುವ ಬಾಲಕ ಬಾಲಕಿಯರು ದಿ. ೩೦-೫-೮೪ರ ಒಳಗಾಗಿ ಶ್ರೀಮಠಕ್ಕೆ ತಿಳಿಸತಕ್ಕದ್ದು. ಮತ್ತು ದಿ. ೩-೬-೮೪ ರಂದು ಸಾಯಂಕಾಲ ೫ ಗಂಟೆ ಒಳಗಾಗಿ ಶ್ರೀಮಠದಲ್ಲಿ ಹಾಜರಿರಬೇಕಾಗಿ ವಿನಂತಿ.

ಇತೀ, ತಮ್ಮ ಆಗಮನಾಭಿಲಾಷಿಗಳು
ವ್ಯವಸ್ಥಾಪಕರು, ಶ್ರೀಹೊಂಬುಜ ಜೈನಮಠ.

---

### ಸುಭಾಷಿತ

ಜ್ಞಾನಚಾರಿತ್ರಯುಕ್ತೋಯಃ ಗುರುಧರ್ಮೋಪದೇಶಕಃ।
ನಿರ್ಲೋಭಸ್ತಾರಕೋ ಭವ್ಯಾಃ ಸ ಸೇವ್ಯಃ ಸ್ವಹಿತೈಷಿಣಾ॥

–ಮಲ್ಲಿಷೇಣಾಚಾರ

ಯಾವಾತಜ್ಞಾನಚಾರಿತ್ರಯುಕ್ತನೋ ಮತ್ತೆ ಅತ ಏವ ಯಾವಾತ ಧರ್ಮೋಪ ದೇಶಕನಾದ ಗುರುವೋ ಮತ್ತೆ ಪರಸ್ಪದಲ್ಲಿ ಆಶಾರಹಿತನೋ ಹಾಗೂ ಭವ್ಯನನ್ನು ಸಂಸಾರಸಾಗರದಿಂದ ದಾಟಿಸಬಲ್ಲ ಶಕ್ತಿಯುಳ್ಳವನೋ ಅಂತಹ ಗುರುವನ್ನು ಆತ್ಮ ಹಿತೈಷಿಯಾದವನು ಆಶ್ರಯಿಸಬೇಕು.

-ರಾಮುಪ್ರಿಯ.

ಶ್ರೀಃ

ಶ್ರೀಶುಭಚಂದ್ರಾಚಾರ್ಯವಿರಚಿತಃ

# ಜ್ಞಾನಾರ್ಣವಃ

(ಭಾವಕಲಸ್ಪರ್ಶಿನ್ಯಾಖ್ಯಕರ್ಣಾಟಕಭಾಷಾನುವಾದಯುತಃ)

ಕಳೆದ ಸಂಚಿಕೆಯಿಂದ ಮುಂದುವರೆದುದು

ಇಲ್ಲಿಯುವರೆವಿಗೆ—ಮುಕ್ತಿಯ ಹಿರಿಮೆ, ಅದನ್ನು ಸಾಧಕಗೊಳಿಸುವ ಪಂಥದಲ್ಲಿ ಮಾನವಕರ್ತವ್ಯ, ಅಲ್ಲಿ ಯೋಗದರ್ಶನದ ವೈವಿಧ್ಯತೆ, ಜೈನ-ವೈದಿಕ- ಯೋಗಗಳ ಸಾಮರಸ್ಯ, ಯೋಗಮಾರ್ಗದಲ್ಲಿ ಜೈನ-ಜೈನೇತರರ ಸಾಮ್ಯ- ವೈಷಮ್ಯಗಳು, ಜೈನರ ಅಸಂದೃಷ್ಟಿ, ವೈದಿಕರ ಅಷ್ಟಾಂಗಯೋಗ, ಜೈನ- ಯೋಗಪ್ರತಿಪಾದನೆಯಲ್ಲಿ ಜ್ಞಾನಾರ್ಣವದ ಸ್ಥಾನ, ಶ್ರುತಸಮನ್ವಯದ ಸಾರಿಯಲ್ಲಿ ವ್ಯಾಖ್ಯೆಯ ರಚನೆಯ ಕೌತುಕ, ಯೋಗಶಬ್ದಾರ್ಥ, ಅಲ್ಲಿ ಮನಸ್ಸಿನ ಸ್ಥಾನ, ವೈದಿಕದರ್ಶನದಲ್ಲಿ ಯೋಗಶಬ್ದಾರ್ಥ- ಪಾತಂಜಲ- ಯೋಗಸ್ಥಾನಗಳಾದ ಯಮ-ನಿಯಮಾದಿಗಳ ಸ್ವರೂಪವಿವೇಚನಂ, ಮತಾ ನ್ತರದಲ್ಲಿ ಯಮನಿಯಮಗಳಂ ಬಿಟ್ಟು ಷಟ್-ಯೋಗಸ್ಥಾನಗಳ ವಿವೇಚನೆ, ಇದಲ್ಲದೆ ಉತ್ಸಾಹಾದಿಗಳಿಂದ ಯೋಗಸಿದ್ಧಿಯ ದಾರಿಯ ವಿವೇಚನೆಯಲ್ಲಿ ಉತ್ಸಾಹ-ನಿಶ್ಚಯಾದಿಗಳ ಪಾತ್ರ, ಯಮ-ನಿಯಮಾದ್ಯಭ್ಯಾಸದಿಂದ ಆಗುವ ಮನೋವಶತೆ,ಅಷ್ಟಾಂಗಗಳ ಮುಕ್ತಿಬೀಜತಾಕರಣ,ಉಕ್ತಾರ್ಥೇ ಪ್ರಮಾಣ, ಚಿತ್ತರೋಧವಿಲ್ಲದ ಇಂದ್ರಿಯಸ್ತಂಭನದ ಹಾಸ್ಯಪರತೆ ಮನಃ ಕಲಂಕವಿಲಯದಿಂಲೇ ಸ್ವಾರ್ಥಸಿದ್ಧಿ, ನಿರ್ಣಾಯಕವಾಕ್ಯ, ಮನಃಕಲಂಕ ವಿಲಯದಿಂದೊದಗುವ ಆತ್ಯಂತಿಕಫಲ, ಆಚಾರ್ಯರ ಕಿವಿಮಾತು,ಪ್ರಸಂಗಾತ್ ಮೂಢಾದ್ಯವಸ್ಥಾವರ್ಣನ ಮನಃಕಲಂಕ ನಿವಾರಣಫಲ, ಸಂಸಾರದನಶ್ವರ ಸುಖಕ್ಕಿಂತಲೂ ಆತ್ಮಸುಖದ ಶಾಶ್ವತಫಲತೆ-ತಿಳಿದಾಯಿತು. ಇನ್ನು ಮುಂದೆ ತಿಳಿಯುವಾ.

ಏಕ ಏವ ಮನೋರೋಧಃ ಸರ್ವಾಭ್ಯುದಯಸಾಧಕಃ।
ಯಮೇವಾಲಂಬ್ಯ ಸಂಪ್ರಾಪ್ತಾ ಯೋಗಿನಸ್ತತ್ತ್ವನಿಶ್ಚಯಮ್ ॥೭೨॥

ಪೃಥಕ್ಕರೋತಿ ಯೋ ಧೀರಃ ಸ್ವಪರಾವೇಕತಾಂ ಗತೌ।
ಸ ಚಾಪಲಂ ನ ಗೃಹ್ಣಾತಿ ಪೂರ್ವಮೇವಾನ್ತರಾತ್ಮನಃ ॥೭೩॥

---

ಮನೋನಿರೋಧದಿಂದ ಯೋಗಸಿದ್ಧಿಯನ್ನು ಪಡೆದ ಯೋಗಿಗಳನ್ನು ಪ್ರಮಾಣವಾಗಿ ಆಚಾರ್ಯರು ಗುರುತಿಸಿ ತಿಳಿಸುತ್ತಾರೆ-

ಏಕ ಏವ ಮನೋರೋಧಃ ಇತ್ಯಾದಿಯಾಗಿ. ಆತ್ಯಂತಿಕದುಃಖನಿವೃತ್ತಿದ್ವಾರಾ ನಿತ್ಯಮುಕ್ತಿಯನ್ನು ಎಂದರೆ ಆತ್ಯಂತಿಕಆತ್ಮಸುಖವನ್ನು ಪಡೆಯುವುದೇ ಎಲ್ಲಕ್ಕಿಂತ ಮಿಗಿಲಾದ ಜೀವಿಲಭ್ಯವಾದ ಉತ್ತುಂಗಅಭ್ಯುದಯ. ಇದಕ್ಕಿಂತ ಮಿಗಿಲಾದ ಅಭ್ಯುದಯ ಮತ್ತೊಂದಿಲ್ಲ. ಈ ಅಭ್ಯುದಯ ಮನೋರೋಧದಿಂದ ಮಾತ್ರ ಸಾಧ್ಯ. ಮನನಶೀಲರು ಯೋಗಿಗಳು. ಇವರು ಮನೋನಿರೋಧದಿಂದ ಮನಃಕಶ್ಮಲವನ್ನು ದೂರೀಕರಿಸಿ ಆತ್ಮತತ್ತ್ವನಿಶ್ಚಯವನ್ನು ತಿಳಿದವರು. ಇದಕ್ಕೆ ಕಾರಣ: ಆ ಮನವನ್ನೇ ಅವಲಂಬಿಸಿ ಅವರು ಮುನ್ನಡೆದು ಮುಕ್ತಿಕಾಂತೆಯ ಕರಗ್ರಹಮಾಡಿದವರು. ಆದ್ದರಿಂದ ದುರ್ಲಭವಾದ ಮಾನವಜನ್ಮವನ್ನು ಆಕಸ್ಮಿಕವಾಗಿ ಪೂರ್ವ-ಪುಣ್ಯವಿಶೇಷದಿಂದ ಪಡೆದ ಮಾನವಜೀವಿ ತನ್ನ ಜನ್ಮವನ್ನು ಸಾರ್ಥಕಪಡಿಸಿಕೊಂಡು ಆತ್ಮಮಂಗಳವನ್ನು ಹೊಂದಲು ಮನೋರೋಧವನ್ನು ಮಾಡಬೇಕೆಂಬುದು ತಾತ್ಪರ್ಯ.

ಮನಸ್ಸಂಸ್ತಂಭನ ಯೋಗಸಿದ್ಧಿಗೆ ಹೆದ್ದಾರಿ ಅಹುದು. ಆದರೆ- ಆ ಭಾವನೆ ಯುಂಟಾಗಬೇಕಾದುದು ಜೀವಿಗೆ. ಜೀವಿಯೋ ಶರೀರದ್ವಾರಾ ಕರ್ಮಬಂಧಬಂಧಿತ. ಅವನು ಹೇಗೆತಾನೇ ಮನವನ್ನು ನಿರೋಧಿಸಿ ಸ್ವವಶದಲ್ಲಿ ಅದನ್ನು ಇಟ್ಟುಕೊಂಡಾನೆಂಬ ಆಕಾಂಕ್ಷೆಯುಂಟಾಗುತ್ತದೆ. ಅದನ್ನು ಆಚಾರ್ಯರಿಂದು ಪರಿಹರಿಸುತ್ತಾರೆ-

ಪೃಥಕ್ಕರೋತಿ ಇತ್ಯಾದಿಯಾಗಿ. ಧೀರನಾದ ವೀರವರ ವಿಚಾರಪರನಾಗಬೇಕು. ಆಗ ಆತ ತನ್ನ ಮನ ಮತ್ತು ಈ ಶರೀರ ಬೇರೆ. ಈ ದೇಹ ಆತ್ಮನ ಭೋಗಾಯತನ ಈ ಆಯತನ ಕಾಲದೇಶಕರ್ಮವಶದಿಂದ ಜೀರ್ಣವಾಗುವುದು ಸಹಜ. ಆಗ ಈ ಆತ್ಮ ನಿರಾಶ್ರಯಿಯಾಗಿ ಬೇರೊಂದುಗೂಡನ್ನು ಹುಡುಕಬೇಕು. ಅವನವನ ಕರ್ಮಾನುಗುಣವಾಗಿ ಆಗ ಆತ ಗರ್ಭಜನ್ಮಾದ್ಯವಸ್ಥೆಗಳಿಗೆ ಈಡಾಗಬೇಕಾಗುತ್ತದೆ. ಈ ದುಃಖಪರಿಹಾರಕ್ಕೆನುಪಾಯ ?- ಎಂದು ಪರಿಚಿಂತಿಸಬೇಕು. ಆಗ ತನ್ನ ಮನಸ್ಸು ಸುಸ್ಥಿರವಾದರೆ ಆಗ ತನ್ಮೂಲಕ ಆತ್ಮಧ್ಯಾನತತ್ಪರನಾಗಿ ಮುಕ್ತಿಕಾಂತೆಯ ಕರಗ್ರಹಮಾಡ

ಮನಶ್ಶುದ್ಧ್ಯೈವ ಶುದ್ಧಿಃ ಸ್ಯಾತ್ ದೇಹಿನೋ ನಾತ್ರಸಂಶಯಃ।
ವೃಥಾ ತದ್ವ್ಯತಿರೇಕೇಣ ಕಾಯಸ್ಯೈವ ಕದರ್ಥನಮ್ ॥೧೪॥

ಧ್ಯಾನಶುದ್ಧಿಂ ಮನಶ್ಶುದ್ಧಿಃ ಕರೋತ್ಯೇವ ನ ಕೇವಲಮ್।
ವಿಚ್ಛಿನತ್ತ್ಯಪಿ ನಿಶ್ಶಙ್ಕಂ ಕರ್ಮಜಾಲಾನಿ ದೇಹಿನಾಮ್ ॥೧೫॥

---

ಬಹುದೆಂಬ ಭಾವನೆ ಆತನಲ್ಲಿ ಉದಯಿಸೀತು. ಆಗ ಆ ಆತ್ಮ ಆತ್ಮಸುಖದ ಹೆದ್ದಾರಿಯಲ್ಲಿ ಹೋಗಬಲ್ಲ. ಆಗಲೀಗ ತನ್ನ ತನ್ನ ಶರೀರದ ತನ್ನ ತನ್ನ ಮನದ ವಿಭಿನ್ನತೆಯ ನಿಶ್ಚಿತಜ್ಞಾನವನ್ನು ಯಾವಾತ ಪಡೆಯುವನೋ ಆಗಲೀಗ ಆತ ಮನಶ್ಚಾಪಲ್ಯವನ್ನು ನಿಗ್ರಹಿಸಬಲ್ಲ. ಯಾವಾಗ ಮನಶ್ಚಾಪಲ್ಯ ನಿಗೃಹೀತವಾಗುತ್ತದೆಯೋ ಆಗ ಮನೋಪರೋಧ ಅತಿ ಸುಲಭ. ಈ ಮನೋಪರೋಧ ಯೋಗಸಿದ್ಧಿಗೆ ಸುಲಭ ಮಾರ್ಗ ಪ್ರದರ್ಶಕ. ಅತ್ತ ಮನಹರಿಸಿ ; ಎಂದು ಆಚಾರ್ಯರು ಈ ಕಾರಿಕೆಯಲ್ಲಿ ಉಪದೇಶಿಸಿದ್ದಾರೆ.

ಮನಸ್ಸಂಸ್ತಭನ-ಮನಃಕಶ್ಮಲನಾಶಗಳಿಂದ ಮನಸ್ಸು ಪರಿಶುದ್ಧವಾಗುತ್ತದೆ. ಆದರಿಂದ ಆತ್ಮಧ್ಯಾನಾದಿಗಳತ್ತ ಜೀವಿ ತಿರುಗುತ್ತಾನೆ. ಒಪ್ಪೋಣ ! ಆದರೆ– ಮನಶ್ಶುದ್ಧಿಯಲ್ಲದ ಬೇರೊಂದು ಸಾಧನ ಆತ್ಮಸಾಧನೆಗೆ ಕಲ್ಪಿಸಬಹುದಲ್ಲಾ ! ಮನಶ್ಶುದ್ಧಿಯೇ ಏಕೆ ಬೇಕು ?– ಎಂದು ಸಂಶಯ ಕಾಡಿದಾಗ ಅದನ್ನು ಆಚಾರ್ಯರು ಇಂತು ಪರಿಹರಿಸುತ್ತಾರೆ–

ಮನಶ್ಶುದ್ಧ್ಯೈವ ಇತ್ಯಾದಿಯಾಗಿ. ಈ ಜೀವ ದೇಹವನ್ನು ಹೊಂದಿದೆ. ಈ ಪಾಂಚಭೌತಿಕದೇಹಶುದ್ಧಿಯಿಂದ ಆತ್ಮ ಶುದ್ಧವಾಗಲಾರದು. ದೇಹುಶುದ್ಧಿಯಿಂದ ದೇಹದ ಕೊಳೆ ಹೊರದೂಡಲ್ಪಡುತ್ತದೆಯೇ ವಿನಃ ಮನಸ್ಸಿನ ಕೊಳೆಯು ಹರಿಯುವುದಿಲ್ಲ. ಆದ್ದರಿಂದ ಮನಶ್ಶುದ್ಧಿ ಅತ್ಯಾವಶ್ಯಕ. ಆದ್ದರಿಂದ ಮನಶ್ಶುದ್ಧಿಯಿಂದ ಮಾತ್ರವೇ ಆತ್ಮಸಿದ್ಧಿಯೇವಿನಃ ಇನ್ನಾತರಿಂದಲೂ ಅದು ಸಾಧ್ಯವಿಲ್ಲ. ಆದರೆ ವಿಪರೀತ-ಗ್ರಾಹಿಗಳಾದ ಜನ ದೇಹವನ್ನು ಉಪವಾಸಾದಿಗಳಿಂದ ಕೃಶೀಕರಿಸಿ ಲಂಗುಲಗಾಮಿಲ್ಲದೆ ಮನವನ್ನು ಹರಿಯಬಿಡುತ್ತಾರೆ. ಇದರಿಂದ ಪುರುಷಾರ್ಥವೂ ಇಲ್ಲ. ಅದು ಕೇವಲ ದೇಹವನ್ನು ಮಾತ್ರ ದಂಡಿಸುವ ಅದನ್ನು ಕೃಶಗೊಳಿಸುವ ನಿಷ್ಫಲಕಾರ್ಯ. ಆದ್ದರಿಂದ ವಿವೇಕಿಯು ಆತ್ಮಸಾಧನೆಯ ಆರಂಭದಲ್ಲಿ ಮನಶ್ಶುದ್ಧಿಯನ್ನು ಪಡೆಯಬೇಕೆಂಬುದ ಈ ಕಾರಿಕೆಯ ತಾತ್ಪರ್ಯ.

ಮನಶ್ಶುದ್ಧಿಯಿಂದ ಒದಗುವ ಧ್ಯಾನಶುದ್ಧಿಯನ್ನು ಅದರಿಂದಾಗುವ ಕರ್ಮಬಂಧ ನಿವೃತ್ತಿಕ್ರಮವನ್ನು ಆಚಾರ್ಯರಿಂತು ವಿವರಿಸುತ್ತಾರೆ–

ಪಾದಪಙ್ಕಜಸಂಲೀನಂ ತಸ್ಯೈತದ್ಭುವನತ್ರಯಮ್ ।
ಯಸ್ಯ ಚಿತ್ತಂ ಸ್ಥಿರೀಭೂಯ ಸ್ವಸ್ವರೂಪೇ ಲಯಂ ಗತಮ್ ॥೧೬॥
ಮನಃ ಕೃತ್ವಾ ವಶೇ ನಿಸ್ಸಂಗಂ ನಿಶ್ಶೇಷವಿಷಯಚ್ಯುತಮ್ ।
ಮುನಿಭೃಂಗೈಸ್ಸಮಾಲೀಢಂ ಮುಕ್ತೇರ್ವದನಪಙ್ಕಜಮ್ ॥೧೭॥

---

ಧ್ಯಾನಶುದ್ಧಿಂ ಇತ್ಯಾದಿಯಾಗಿ. ಮನಶ್ಶುದ್ಧಿಯು ಮನಸ್ಸಂಸ್ತಂಭನದಿಂದ ಒದಗುತ್ತದೆ. ಈ ಮನಶ್ಶುದ್ಧಿ ಎಂದಾಗುವುದೋ ಆಗಲೇ ಸಮಸ್ತಕ್ಲೇಶಗಳೂ ದೂರೀಭವಿಸುವುವು. ಕ್ಲೇಶಗಳೆಲ್ಲಾ ಧಾವಿಸಿದಾಗ ಧ್ಯಾನಿಸುವುದು ಪರಮಾತ್ಮನನ್ನೇ. ಇದೇ ಧ್ಯಾನಶುದ್ಧಿ, ಮನಶ್ಶುದ್ಧಿಯು ಧ್ಯಾನಶುದ್ಧಿಯನ್ನು ಉಂಟುಮಾಡುವ ವೇಳೆಗಾಗಲೇ ಈ ಮಾನವನ ಕರ್ಮಜಾಲಗಳನ್ನು ಕೂಡ ಬೇರುಸಹಿತ ಕಿತ್ತೊಗೆಯುತ್ತದೆ. ಇವರಲ್ಲಿ ಯಾವ ಸಂಶಯವೂ ಇಲ್ಲ,

ಸ್ಥಿರಮನಸ್ತತ್ತ್ವಸಾಧನೆಯ ಫಲವನ್ನು ಆಚಾರ್ಯರು ಇಂತು ವಿವರಿಸುತ್ತಾರೆ—

ಪಾದಸಂಕಜಸಂಲೀನಂ ಇತ್ಯಾದಿಯಾಗಿ. ಚಂಚಲವಾದುದು ಮನ. ಅದು ಪ್ರಮಾದಕಾರಕ. ಮತ್ತೆ ಅದು ಮಹಾಬಲಿಶಾಲಿ; ಹಾಗೂ ದೃಢಾಧ್ಯವಸಾಯವುಳ್ಳದ್ದು. ಆದ್ದರಿಂದಲೇ ಅದು ಎತ್ತ ನುಸುಳುವುದೋ ಅದು ಒಳ್ಳೆಯದಿರಲಿ ಕೆಟ್ಟದಿರಲಿ ಅದನ್ನು ಸಾಧಿಸಿಬಿಡುತ್ತದೆ. ಆದ್ದರಿಂದ ಪ್ರತಿಶರೀರವುಳ್ಳ ಬುದ್ಧಿಮದ್ವಿವೇಕಿಯು ಅದನು ಸನ್ಮಾರ್ಗದತ್ತ ಒಯ್ಯಲು ಸ್ಥಿರಸಂಕಲ್ಪನಾಗಬೇಕು. ಈ ಸಂಕಲ್ಪ ಮನಸ್ಸ್ಥೈರ್ಯದಿಂದ್ದ ಮಾತ್ರ ಸಾಧ್ಯ. ಈ ಮನಸ್ಸ್ಥೈರ್ಯ ಹೋದತ್ತ ಚಲಿಸುವ ಅದನ್ನು ಒಂದೆಡೆ ಸಂಸ್ತಂಭಿಸಬೇಕು. ತದನಂತರ ಹುಚ್ಚಾಟವನ್ನಡಗಿಸಿ ಅದರಲ್ಲಿ ಅಡಗಿರುವ ಕಶ್ಮಲವನ್ನು ದೂರೀಕರಿಸಬೇಕು. ಇಂತಹ ಒಂದು ಪರಿಸ್ಥಿತಿಯೊದಗಿದಾಗ ಆ ಮನಸ್ಸು ತನ್ನತ್ತ ತಾನೇ ಸ್ಥಿರೀಭವಿಸುತ್ತದೆ. ಆಗಲೀಗ ಯಾವಾತ ಆತ್ಮಧ್ಯಾನತತ್ಪರನಾಗುವನೋ ಅವನ ಮನಸ್ಸು-ಬುದ್ಧಿ-ಪ್ರಯತ್ನ-ಅಧ್ಯವಸಾಯ-ಇವುಗಳೆಲ್ಲಾ ಸ್ವಸ್ವರೂಪದಲ್ಲೇ ಒಗ್ಗೂಡಿ ಅಲ್ಲೇ ಲೀನವಾಗುತ್ತದೆ. ಈ ಬಗೆಯಲ್ಲಿ ಯಾವಾತನಿಗಾಗುತ್ತದೆಯೋ ಆತನು ಈ ಮೂರುಲೋಕವೂ ಆಜ್ಞಾಧಾರಕವಾಗಿ ಅವನ ಅಡಿದಾವರೆಗಳ ಸೇವಕನಾಗಿ ನಿಲ್ಲುತ್ತದೆ. ಆದ್ದರಿಂದ ಜೀವಿಯು ತನ್ನ ಮನಸ್ಸನ್ನು ವಿಷಯವಸ್ತುಗಳಿಗೆ ಗುಲಾಮನಾಗದಂತೆ ಸುಸ್ತಂಭಿಸಿ ಕಶ್ಮಲವನ್ನು ದೂರೀಕರಿಸಿ ಸ್ವಾತ್ಮನಲ್ಲಿ ಆದನ್ನು ಲೀನಗೊಳಿಸಿ ಯೋಗಸಿದ್ಧಿಯನ್ನು ಪಡೆಯಬೇಕೆಂದು ಆಚಾರ್ಯರ ಅಂತರ್ಯಭಾವ !

ಈವರೆವಿಗೆ ವಿವರಿಸಿದ ಮನಃ-ಸ್ತಂಭನ-ಕಶ್ಮಲ-ನಿವಾರಣಗಳಿಂದ ಆತ್ಮಸಾಧನನಿರತನಾದವನಿಗೆಒದಗುವ ಸತ್ಫಲವನ್ನು ಉದಾಹರಣದ್ವಾರಾ ಆಚಾರ್ಯರು ಸ್ಥಿರೀಕರಿಸಿ ಉತ್ತರಿಸುತ್ತಾರೆ—

† ಯಥಾ ಯಥಾ ಮನಶ್ಶುದ್ಧಿಃ ಮುನೇಸ್ಸಾಕ್ಷಾತ್ಪ್ರಜಾಯತೇ।
ತಥಾ ತಥಾ ವಿವೇಕಶ್ರೀಃ ಹೃದಿ ಧತ್ತೇಸ್ಥಿರಂ ಪದಮ್ ॥೧೮॥

---

ಮನಃಕೃತ್ವಾ ತು ಇತ್ಯಾದಿಯಾಗಿ. ವಿಷಯುವಸ್ತುಗಳಾದ ಭೋಗ-ಭೋಗೋಪ-ಕರಣ-ಭೋಗಸ್ಥಾನಗಳಲ್ಲಿ ಯಾವಾತ ಸಂಗರಹಿತನಾಗುತ್ತಾನೆಯೋ ಅಂತಹ ಸತ್ಪುಷನೆಂಬ ಸುಖಕರ ಸ್ವಾತ್ಮಧ್ಯಾನತತ್ಪರನಾಗಿಅಂತ್ಯದಲ್ಲಿ ಕರ್ಮಬಂಧವನ್ನು ಕಿತ್ತೊಗೆದು ಮುಕ್ತಿಕಾಂತೆಯ ವದನಾರವಿಂದವನ್ನು ಸಂಸ್ಪರ್ಶಿಸುತ್ತಾನೆ- ಎಂದರೆ ಸ್ವಾತ್ಮನಲ್ಲಿ ಸ್ವಾತ್ಮನನ್ನು ಧ್ಯಾನಿಸಿ ಶಾಶ್ವತವಾದ ಮುಕ್ತಿಯನ್ನು ಹೊಂದಿ ಅನಿರ್ವಚನೀಯವಾದ ಆತ್ಮಾನಂದವನ್ನು ಹೊಂದುತ್ತಾನೆಂಬುದು ಆಚಾರ್ಯರ ಹೃದ್ಗತವಾದ ಭಾವ.

ಮನಶ್ಶುದ್ಧಿಯಿಂದ ಆಗುವ ಪರಿಣಾಮವೇನೆಂದು ಉದ್ಭವಿಸುವ ಪ್ರಶ್ನೆಯನ್ನು ಇಂತು ಶ್ರೀ ಶುಭಚಂದ್ರರು ಸಮಾಧಾನಪಡಿಸುತ್ತಾರೆ-

ಯಥಾ ಯಥಾ ಮನಶ್ಶುದ್ಧಿಃ ಇತ್ಯಾದಿಯಾಗಿ. ಮನಸ್ಸು ವಿಷಯಗಳಿಂದ ದೂರವಾದಾಗ ಮುಕ್ತಿಶ್ರೀಯು ಕೈಗೆಟಕುವುದು ಸೂರ್ಯಚಂದ್ರರ ಇರುವಿಕೆಯಷ್ಟೇ ಸತ್ಯ. ಆದರೆ ಉತ್ತುಂಗಸ್ಥಿತಿಯು ಉದಯಿಸುವುದು ವಿವೇಕಜ್ಞಾನೋದಯವಾದಾಗ ಮಾತ್ರ ಉಂಟಾಗುತ್ತದೆ. ಸ್ವರ್ಣಾದಿಲೋಹಗಳ ಮೇಲಿನ ಕಶ್ಮಲವು ಶೋಧನೆಯ ಮೂಲಕ ಕ್ರಮಕ್ರಮವಾಗಿ ದೂರಸರಿದು ಆ ಲೋಹಸ್ವಸ್ವರೂಪದಲ್ಲಿ ಹೊಳೆಯುತ್ತದೆ ಮನದಲ್ಲಿನ ಕಶ್ಮಲಕ್ರಮಕ್ರಮವಾಗಿ ದೂರ ಸರಿಯುತ್ತಾ ಸರಿಯುತ್ತಾ ವಿವೇಕಲಕ್ಷ್ಮಿಯು ಹೃದಯದಲ್ಲಿ ಸ್ಥಿರಸ್ಥಾನವನ್ನು ಪಡೆಯುತ್ತಾಳೆ. ಆಗ ಅದರಿಂದ ಶುದ್ಧಜ್ಞಾನದಿಂದ ಎಂದೂ ಯಾವಾಗಲೂ ಆತ್ಮ ಪೂರ್ವಾವಸ್ಥೆಗೆ ಮರಳುವುದೇ ಇಲ್ಲ. ಆದ್ದರಿಂದ ವಿವೇಕಶ್ರೀಯನ್ನು ಹೊಂದಲು ಪ್ರತ್ಯಾತ್ಮನೂ ಮನಶ್ಶುದ್ಧಿಯತ್ತ ಉದ್ಯೋಗಶೀಲನಾಗಬೇಕೆಂದು ಆಚಾರ್ಯರ ಒತ್ತಾಯಪೂರ್ವಕವಾದ ಅನುಶಾಸನವಚನವಿದು.

---

ಭಗವದ್ಗೀತೆಯಲ್ಲಿಯೂ–

" ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ । "

ಭಗವದ್ಗೀತೆ– ಅಧ್ಯಾಯ–೨ ಶ್ಲೋಕ–೬೫

ಅದರ ರಾಮಾನುಜ ಭಾಷ್ಯದಲ್ಲಿಯೂ–

" ಪ್ರಸನ್ನಚೇತಸಃ– ಆತ್ಮಾವಲೋಕನವಿರೋಧಿದೋಷರಹಿತಮನಸಃ ತದಾನೀಂ ಏವ ಹಿ ವಿವಿಕ್ತಾತ್ಮವಿಷಯಾ ಬುದ್ಧಿಃ ಪರ್ಯವತಿಷ್ಠತೇ । ಅತಃ ಮನಃ ಪ್ರಸಾದೇ ಸರ್ವದುಃಖಾನಾಂ ಹಾನಿಃ ಭವತ್ಯೇವ ।"

–ರಾಮಾನುಜಭಾಷ್ಯ

# ಚಂದ್ರಪ್ರಭಾ ಟ್ರಸ್ಟ್

## ಜಿನವಾಣಿ ಕಾರ್ಯಾಲಯ

ನಂ ೬೩. ಡಿ. ಬನುಮಯ್ಯರಸ್ತೆ, ಮೈಸೂರು.

ಜಿನವಾಣಿ REG. NO. K.R.N.N. 17

೧೩) ಎ. ಸಿ. ಎ. ದೇವೇಂದ್ರಪ್ಪನವರು, ಮೈಸೂರು
೧೪) ಪಾರ್ಶ್ವನಾಥಯ್ಯನವರು, ಬೆಂಗಳೂರು
೧೫) ಬಿ. ಜೆ. ಸುರೇಂದ್ರಕುಮಾರ್,
೧೬) ಎಂ. ಕೆ. ಅನಂತಯ್ಯನವರು, ವೈನಾಡು
೧೭) ಶ್ರೀಮತಿ ಚಂದ್ರಮತಿ ಅಮ್ಮನವರು, ವೈನಾಡು
೧೮) ಪಿ. ಡಿ. ಚಂದ್ರಪ್ರಭ, ಹಾಡಿಕೆರೆ
೧೯) ಎಸ್. ಎಸ್. ಡಿ. ನಾಗರಾಜಯ್ಯನವರು, ಶ್ರವಣಬೆಳಗೊಳ
೨೦) ಶ್ರೀ ಚಂದ್ರಪ್ರಭ ಕರೀಗುತ್ತಿ

卐卐卐卐卐卐卐卐卐卐卐卐卐卐卐卐卐卐卐卐卐卐卐卐卐

BOOK POST

To

ಜಿನವಾಣಿ ಕಾರ್ಯಾಲಯ

ನಂ 67. ಡಿ. ಸುಬ್ಬಯ್ಯ ರಸ್ತೆ, ಮೈಸೂರು-೫೭೦೦೦೧




The Jinavani, the monthly Kannada Mag[illegible] an
Published by Sri M C. Padmanabhasham[illegible] B V.
Alahiyamanavalan, Propritor, Sri Vijaya[illegible] 5 D.
subbiah Road MYSORE 1

ಜೈನಸಾಹಿತ್ಯಪ್ರಚಾರಸಂಘದ ಜೈನಧಾರ್ಮಿಕ ಕನ್ನಡ ಮಾಸಿಕ ಮುಖಪತ್ರಿಕೆ

# ಜಿ ನ ವಾ ಣಿ




ಜೂನ್ 10 1984

ಅನಂತಕೃತಜ್ಞತಾಭಿನಂದನಗಳು

ಜಿನವಾಣೀರಜತೋತ್ಸವ ಸ್ಮಾರಕವಾದ

ಶ್ರೀ ಮಹಾವೀರಸ್ವಾಮಿಯ

೨೫೦೦ ನೇ ವೀರನಿರ್ವಾಣವಿಶೇಷಸಂಚಿಕೆಯಲ್ಲಿನ

ಜಿನವಾಣೀಸಂಪಾದಕನ

ಎಂ. ಸಿ. ಪದ್ಮನಾಭ ಶರ್ಮನಾದ ನನ್ನ

ವಿಶೇಷ ನಿವೇದನಪ್ರಾರ್ಥನಾನುಸಾರ

೧೯೭೪ ನೇ ಜ್ಯೂನ್ ಸಂಚಿಕೆಯ

ಸಂಪೂರ್ಣ ಪ್ರಕಟಣಾದಿಗಳಿಗೆ

ಸಹಕರಿಸಿದ

ಶಾಂತಶಮದಮಾದ್ಯನಂತ ಪರಿಭೂಷಿತರೂ, ದಾನಿಗಳೂ, ಪರೋಪಕಾರಿಗಳೂ ಆದ

ವೈನಾಡಿನ ಹಿರಿಯ ಧರ್ಮಾತ್ಮರಾದ

ಸನ್ಮಾನ್ಯಶ್ರೀ ವಿ.ಕೆ. ವರ್ಧಮಾನಗೌಡರವರಿಗೆ

ಅನಂತಪ್ರತ್ಯಪೂರ್ವಕಕೃತಜ್ಞತಾಯುಕ್ತವಾದ ಧನ್ಯವಾದಗಳನ್ನು ಅರ್ಪಿಸುವೆವು

ಈ ಔದಾರ್ಯ ವಾತ್ಸಲ್ಯಗಳೇ ನಮ್ಮ ರಕ್ಷಾಕವಚ !!

ಇದೇ ಈ ಸಂಚಿಕೆಯ

ಮುದ್ರಣಪ್ರಕಟಣಾದಿಗಳಿಗೆ ಆಧಾರ!!!

ಇಂತು ಕೃತಜ್ಞ

ಎಂ. ಸಿ ಪದ್ಮನಾಭಶರ್ಮ

ಸಂಪಾದಕ, ಜಿನವಾಣಿ

ಮೈಸೂರು

೧೦-೬-೭೪

||ಓಮ್||

|| ಓಮ್ ನಮಸ್ಸಿದ್ಧೇಭ್ಯಃ ||

# ಜಿನವಾಣಿ

# JINAVANI

ಜೈನಸಾಹಿತ್ಯ ಪ್ರಚಾರಸಂಘದ ಮುಖಪತ್ರಿಕೆ

## ಜೈನ ಧಾರ್ಮಿಕ

## ಕನ್ನಡ ಮಾಸಪತ್ರಿಕೆ

## KANNADA MONTHLY MAGAZINE

ಸತ್ವೇಷು ಮೈತ್ರೀಂ ಗುಣಿಷು ಪ್ರಮೋದಂ ಕ್ಲಿಷ್ಟೇಷು ಜೀವೇಷು ಕೃಪಾಪರತ್ವಮ್
ಮಾಧ್ಯಸ್ಥಭಾವಂ ವಿಪರೀತವೃತ್ತೌ ಸದಾ ಮಮಾತ್ಮಾ ವಿದಧಾತು ದೇವ ! ||

-ಅಮಿತಗತಿ|

ಎಲೈ ! ದೇವನೇ ! ಪ್ರಾಣಿಗಳಲ್ಲಿ ಸ್ನೇಹವನ್ನೂ, ಗುಣವಂತರಲ್ಲಿ ಸಂತೋಷವನ್ನೂ, ಕಾಯಕ್ಲೇಶ-ಮನಃಕ್ಲೇಶಗಳಲ್ಲಿ ತೊಳಲಾಡುವ ಪ್ರಾಣಿಗಳಲ್ಲಿ ದಯೆಯನ್ನೂ, ಶಾಸ್ತ್ರಾಗಮಾಪ್ತವ್ಯತಿರೇಕಮಾರ್ಗಾಶ್ರಯಿಗಳಲ್ಲಿ ಮಾಧ್ಯಸ್ಥಭಾವನೆಯನ್ನೂ ನನಗೆ ಉಂಟುಮಾಡು.

ಅನುವಾದ- M.P.A. ತಿಲಕ್, M.A., ಮೈಸೂರು.

---

ಮಂಡಲ ೩೩-೩೪) ಮೈಸೂರು ೧೧ನೆಯ ಜೂನ್ ೧೯೫೪ (ಕಿರಣ- ೮
(ಗೊಮ್ಮಟ-ಚಾವುಂಡರಾಯ ಶಕ- ೧೦೦೩)

---

## ಋಷಭನಾಥ ತೀರ್ಥಂಕರ ಸ್ತುತಿ

ನತಾಖಂಡಲಮೌಲೀನಾಂ ಯತ್ಪಾದ ನಖಮಂಡಲಮ್ ।
ಖಂಡೇಂದು ಶೇಖರೀಭೂತಂ ನಮಸ್ತಸ್ಮೈ ಸ್ವಯಂಭುವೇ ||

-ಸ್ವಾಮಿಸಮಂತಭದ್ರರು.

ಶ್ರೀ ಋಷಭನಾಥನೇ ಆದಿನಾಥ. ಆತನೇ ತನ್ನ ಕರ್ಮಮಲವನ್ನು ಕಳೆದು ಪರಮಾತ್ಮನಾದ. ಆ ಪುಣ್ಯಪುರುಷನ ಚರಣಾರವಿಂದಗಳಲ್ಲಿ

ನತಮಸ್ತಕ-ದೇವೇಂದ್ರ, ಅದೂ ಸ್ವಸ್ಥಾನದ ಸುಸ್ಥಿತಿಗಾಗಿ. ಅಂತಹ ಒಂದು ದಿವ್ಯ ಸನ್ನಿವೇಶ ಆಶ್ಚರ್ಯಕರ. ರತ್ನ ಖಚಿತವಾದ ದೇವೇಂದ್ರ ಕಿರೀಟದಿಂದ ಹೊರಹೊರಟ ರತ್ನಪ್ರಭಾ ಕಿರಣಗಳು ಶ್ರೀ ಆದಿತೀರ್ಥಂಕರರ ದಿವ್ಯ ಚರಣಗಳ ಅಂಗುಲಗಳ ನಖಮಂಡಲದಲ್ಲಿ ಬೆಳಗಿ ಅಲ್ಲೇ ಚಂದ್ರನು ನಿವಾಸಮಾಡುತ್ತಿರುವನೋ ಎಂಬಂತೆ ಗೋಚರವಾಗುತ್ತದೆ. ಇಂಥಹ ಆ ತೀರ್ಥಂಕರ ಸ್ವಯಂಭು ಎಂದರೆ- ತನಗೆ ತಾನೇ ಕರ್ಮನಿರ್ಜರೆಯನ್ನು ಪಡೆದು ಪರಮಾತ್ಮತ್ವವನ್ನು ಪಡೆದವನು ಎಂದರ್ಥ. ಇಂತಹ ಪರಮಾತ್ಮನಿಗೆ ಆತ್ಮಾತ್ಮೀಯ ಸಮರ್ಪಣರೂಪವಾದ ನಮಸ್ಕಾರವಿರಲಿ.

ಸಿಂಹವಾಣಿ




## ಜ್ಯೇಷ್ಠ ಶುದ್ಧ ಪಂಚಮಿಯು ಶ್ರುತಪಂಚಮಿಯಾದ ಬಗೆ

### ಶ್ರುತವಾದ ಶಾಸ್ತ್ರವು ಲಿಪಿಬದ್ಧವಾದ ಬಗೆಯ ಹಿನ್ನೆಲೆ-

ಶ್ರುತ ಎಂದರೆ ಶಾಸ್ತ್ರವೆಂದು ಹೆಸರು. ಈಗ್ಗೆ ಧರಸೇನಾಚಾರ್ಯರು ತಮ್ಮ ಅವಸಾನ ಕಾಲವು ಸಮೀಪಿಸುತ್ತಿರುವುದನ್ನು ತಿಳಿದು ಭೂತಬಲಿ-ಪುಷ್ಪದಂತರೆಂಬ ನಿಪುಣ ವಿಧ್ಯಾರ್ಥಿಗಳನ್ನು ಮುನಿಸಂಘದಿಂದ ಕರೆಸಿಕೊಂಡು ಅವರಿಗೆ ತಮ್ಮ ಎಲ್ಲಾ ವಿದ್ಯೆಗಳನ್ನು ಉಪದೇಶಿಸಿ ಅವರುಗಳನ್ನು ಬೇರೊಂದು ಸಂಘಕ್ಕೆ ಕಳುಹಿಸಿದರು. ಅನಂತರ ಧರಸೇನಾಚಾರ್ಯರು ಸಮಾಧಿಮರಣದಿಂದ ಶರೀರ ತ್ಯಾಗ ಮಾಡಿದರು. ಭೂತಬಲಿ-ಪುಷ್ಪದಂತರು ತಮ್ಮ ಗುರುಗಳು ಉಪದೇಶಿಸಿದ ಶಾಸ್ತ್ರವು ಜೀವಿಯ ಮನಸ್ತತ್ವದಲ್ಲಿನ ನ್ಯೂನತೆಯನ್ನು ಕಂಡು ಕಾಲಕ್ರಮದಲ್ಲಿ ಶಾಸ್ತ್ರವೇ ನಶಿಸಿಹೋಗಬಹುದೆಂದು ಭಾವಿಸಿ ಅವುಗಳನ್ನು ಆಚಂದ್ರಾರ್ಕ ಸ್ಥಾಯಿಯಾಗುವಂತೆ ಮಾಡಲು ನಿರ್ಧರಿಸಿ ಜೈನಶಾಸ್ತ್ರವನ್ನು ಲಿಪಿಬದ್ಧವಾಗಿ ಮಾಡಿದರು. ಲಿಪಿಬದ್ಧವಾದ ಶಾಸ್ತ್ರವನ್ನು ಅಲಂಕರಿಸಿ ಪೂಜಿಸಿ ಸರ್ವರಿಗೂ ಇದರ ಮಹತ್ವವನ್ನು ತಿಳಿಸಿಕೊಟ್ಟರು. ಶಾಸ್ತ್ರ ಲಿಪಿಬದ್ಧವಾಗಿ ೨೦೦೦ ವರ್ಷವಾಗುತ್ತಾ ಬಂದಿದೆ

ಈ ಮೊದಲು ಶಾಸ್ತ್ರವನ್ನು ಒಬ್ಬರಿಗೆ ಮತ್ತೊಬ್ಬರು ಉಪದೇಶ ನೀಡುತ್ತಿದ್ದರು. ಆದ್ದರಿಂದ ಶ್ರುತಿ- ಎಂದರೆ ಕಿವಿಯಿಂದ ಕಿವಿಗೆ ಹರಿದುದು ಎಂದು ಪ್ರಸಿದ್ಧವಾಗಿತ್ತು. ಆದರೆ ಶಾಸ್ತ್ರಸಂರಕ್ಷಣ ದೃಷ್ಟಿಯಿಂದ ಲಿಪಿಬದ್ಧವಾಗಿಸಬೇಕಾದುದು ಅನಿವಾರ್ಯವಾಗಿ ಆ ರೀತಿಯೇ ಅದನ್ನು ಘೋಷಣೆ ಮಾಡುತ್ತಾ ಬಂದರು. ಆದ್ದರಿಂದ ಅದನ್ನು ಶ್ರುತಾವತಾರ ಎನ್ನಲಾಯಿತು ಈ ರೀತಿ ಆರಂಭವಾದ ದಿನ ಜ್ಯೇಷ್ಠಶುದ್ಧಪಂಚಮಿಯಾದ್ದರಿಂದ ಶ್ರುತಪಂಚಮಿ ಎಂದು ಪ್ರಸಿದ್ಧಿ ಪಡೆದಿದೆ.

ದ್ವಾದಶಾಂಗ ಶಾಸ್ತ್ರವಿಭಾಗೌಚಿತ್ಯ-

ದ್ವಾದಶಾಂಗಶಾಸ್ತ್ರವು ೫ನೇ ಸ್ವರ್ಗದ ಬ್ರಹ್ಮಸ್ವರ್ಗದಲ್ಲಿ ಸಾರಸ್ವತಾದಿ ೮ ವಿಧಧ ದೇವತೆಗಳಿಂದ ಸಂರಕ್ಷಿಸಲ್ಪಟ್ಟು ಅಧ್ಯಯನ ಮಾಡಲ್ಪಡುತ್ತಾ ಇರುವುದರಿಂದ ಅಪೌರುಷೇಯವೆಂದು ಹೇಳುತ್ತಾರೆ ಮೊದಲು ಹಂಸದಂತೆ ಸ್ವಚ್ಛವಾದ ಒಂದೇ ಶಾಸ್ತ್ರವಿದ್ದರೂ ವಿಷಯಗಳ ದುರವಗಾಹತೆಯನ್ನು ಹೋಗಲಾಡಿಸಲು ಈ ಶಾಸ್ತ್ರವನ್ನು ೧೨ ವಿಭಾಗ ಮಾಡಿ ಅಧ್ಯಯನೋಪಯೋಗವಾಗುವಂತೆ ಮಾಡಿದುದು ಅತ್ಯುತ್ತಮ ಶಾಸ್ತ್ರರಕ್ಷಣ ಕೈಂಕರ್ಯ ಈ ಶಾಸ್ತ್ರ ಉತ್ಸರ್ಪಿಣಿ-ಅವಸರ್ಪಿಣಿಗಳಲ್ಲಿ ೨೪ ೨೪ ಮಂದಿ ತೀರ್ಥಂಕರರುಗಳು ಕೇವಲಜ್ಞಾನ ಪಡೆದ ಮೇಲೆ ದೇವೇಂದ್ರನ ಆಜ್ಞೆಯಂತೆ ಕುಬೇರನು ೧೨ ವಿಧದ ಸಮವಸರಣ ಸಭೆಗಳನ್ನು ರಚಿಸಿ ಕೇವಲಿಗಳು ದಿವ್ಯಧ್ವನಿ ಮೂಲಕವಾಗಿ ಈ ಶಾಸ್ತ್ರವನ್ನು ಉಪದೇಶಿಸುವುದಕ್ಕೆ ಅವಕಾಶ ಮಾಡುತ್ತಾರೆ ಇದನ್ನು ಗಣಧರರು ವ್ಯಾಖ್ಯಾನ ಮಾಡಿ ಭವ್ಯ ಜೀವಿಗಳಿಗೆ ಉಪದೇಶ ನೀಡುತ್ತಾರೆ ತೀರ್ಥಂಕರ ಕೇವಲಿಗಳು ಉಪದೇಶಿಸುವುದರಿಂದ ಈ ಶ್ರುತವು ಪೌರುಷೇಯವೆಂದು ಹೇಳಲ್ಪಟ್ಟದೆ

ದ್ವಾದಶಾಂಗ ಶಾಸ್ತ್ರದ ಭೇದ ವಿಚಾರ-

ಈ ದ್ವಾದಶಾಂಗವು ಆಚಾರಾಂಗ ಮೊದಲಾದ ೧೨ ಅಂಗಗಳು ೧೪ ಚತುರ್ದಶ ಪೂರ್ವಗಳಿಂದ ಕೂಡಿರುತ್ತದೆ ದ್ವಾದಶಾಂಗದ ವಿಸ್ತಾರವರ್ಣನೆಯು ಗೋಮಟಸಾರ ಜೀವಕಾಂಡದಲ್ಲಿ ಜ್ಞಾನಮಾರ್ಗಣೆಯಲ್ಲಿ ಜ್ಞಾನ ಭೇದಗಳು ಅವುಗಳ ಸ್ವರೂಪ ಆದರ ಮಹತ್ವಗಳನ್ನು ವಿಸ್ತಾರವಾಗಿ ವರ್ಣಿಸಿದ್ದಾರೆ

ಶ್ರುತಾವತಾರದ ಮಹಿಮೆಯರಿತವರಿಗೊಂದು ಕಿವಿಮಾತು-

ದಕ್ಷಿಣ ಭಾರತದಲ್ಲಿ ಗ್ರಂಥಪ್ರಕಾಶನ ಕಾರ್ಯಮಾಡುವ ಒಂದು ಸಂಸ್ಥೆಯೂ ಇಲ್ಲದಾಗಿದೆ ಶ್ರೀಮಂತರುಗಳು ಕಡಿಮೆಯಿಲ್ಲ ಆದರೆ ಅವರಿಗೆ ಶಾಸ್ತ್ರಸಂರಕ್ಷಣೆ

ಕಡೆಗೆ ಗಮನವಿಲ್ಲ ಆದ್ದರಿಂದ ಇಂಥಾ ಪವಿತ್ರ ದಿನಗಳಲ್ಲಾದರೂ ಎಲ್ಲಾ ಮಠಾಧಿಪತಿಗಳೂ ತಮ್ಮ ತಮ್ಮ ಶಾಸ್ತ್ರ ಗ್ರಂಥ ಸಂರಕ್ಷಣೆ ಪ್ರಕಟನೆಗೆ ಪ್ರಯತ್ನಿಸಬೇಕಾಗಿ ನಿವೇದಿಸಿಕೊಳ್ಳುತ್ತೇನೆ

ಸಂಪಾದಕ, ಜಿನವಾಣಿ.

ಶ್ರುತಾವತಾರವನ್ನು ಸಾರ್ಥಕಪಡಿಸಲು ಬೇಡಿಕೆ-

ಪ್ರತಿವರ್ಷವೂ ಜ್ಯೇಷ್ಠಶುದ್ಧಪಂಚಮಿ ಬರುತ್ತದೆ; ಹೋಗುತ್ತದೆ. ಈ ಮಹಾಪರ್ವದಲ್ಲಿ ಜಿನೇಶ್ವರನ ವಚನರೂಪವಾದ ಶಾಸ್ತ್ರವನ್ನು ಸಂರಕ್ಷಿಸಿ ಪ್ರಕಾಶಪಡಿಸಿ ಅಜ್ಞಾನಿಗಳನ್ನು ಜ್ಞಾನವಂತರನ್ನಾಗಿ ಮಾಡುವ ಮಹಾಕಾರ್ಯ ಮಾಡಬೇಕೆಂಬುದನ್ನು ಜ್ಞಾಪಿಸುವುದು ಆಚರಣೆಯ ಉದ್ದೇಶವಾಗಿದೆ.

ಜಗತ್ತಿನಲ್ಲಿ ಜೈನರಾಗಿ ಶ್ರೀಮಂತರಾಗಿ ಮಾಡಬೇಕಾದ ಗ್ರಂಥಪ್ರಕಾಶನ ಕಾರ್ಯ ಅದೆಷ್ಟು ಮಂದಿ ಮಾಡುತ್ತಿದ್ದಾರೆಂದು ಕೇಳಿದರೆ ಏನೂ ಉತ್ತರ ಹೇಳುವ ಸ್ಥಿತಿಯಲ್ಲಿ ನಾವಿಲ್ಲ. ಅದರಲ್ಲೂ ದಕ್ಷಿಣ ಭಾರತದಲ್ಲಿ ಸಂಸ್ಕೃತ ಮತ್ತು ಕನ್ನಡ ವಿದ್ವಾಂಸರುಗಳು ಬಹಳ ಕಡಿಮೆ. ಅವರುಗಳು ತಮ್ಮ ತಮ್ಮ ಜೀವನೋಪಾಯ ನಿಮಿತ್ತವಾಗಿ ತಮ್ಮ ತಮ್ಮ ಕೆಲಸದಲ್ಲಿ ನಿರತರಾಗಿರುತ್ತಾರೆ. ಗ್ರಂಥ ರಾಶಿಗಳು ಬಹಳವಾಗಿವೆ. ಅದನ್ನು ನೋಡುವ ಮತ್ತು ರಕ್ಷಿಸುವ ಹವ್ಯಾಸಕ್ಕೆ ಹೋಗುತ್ತಿಲ್ಲ; ಕಾರಣ: ನಮಗೆ ಜ್ಞಾನಶ್ರದ್ಧೆ ಇದ್ದರೆ ತಾನೇ ಆ ಕಾರ್ಯದಲ್ಲಿ ನಿರತರಾಗುತ್ತೇವೆ. ಗ್ರಂಥರಾಶಿಗಳು ಕೇವಲ ಹುಳುವಿನ ಪಾಲಿಗೆ ಸೇರಿದಂತಾಗಿದೆ. ಅನೇಕರಿಗೆ ಅನುಕೂಲವಿದ್ದರೂ ಹೇಳಿಕೆ-ಕೇಳಿಕೆ ಮಾತಿನಿಂದ ಮಾಡುವ-ಪ್ರಾರಂಭಿಸಿದ ಕಾರ್ಯಗಳನ್ನೇ ಮರೆತು ಬಿಡುತ್ತಾರೆ ನಮ್ಮಲ್ಲಿ ಶ್ರೀಮಂತರನೇಕರಿದ್ದರೂ ಅವರು ಶಾಸ್ತ್ರಶ್ರವಣ ರಕ್ಷಣಾದಿಗಳ ಸಹವಾಸಕ್ಕೇ ಹೋಗುವುದಿಲ್ಲ. ಎಲ್ಲಾ ಮಠಗಳಲ್ಲಿ ಗ್ರಂಥರಾಶಿಗಳಾಗಿವೆ ಅವುಗಳು ಪ್ರಕಾಶಕ್ಕೆತ್ತಿ ಬರಲು ಸತತ ಪ್ರಯತ್ನ ನಡೆಯಬೇಕು ಈಗ ಅನೇಕ ಜನರು ಸಾಕಷ್ಟು ಅನುಕೂಲ ಸ್ಥಿತಿಯಲ್ಲಿದ್ದಾರೆ. ಒಬ್ಬೊಬ್ಬರು ಒಂದೊಂದು ಪುಸ್ತಕ ಪ್ರಕಾಶನ ಕಾರ್ಯಕ್ಕೆ ಪ್ರಾರಂಭ ಮಾಡಿ ಉದಾರವಾಗಿ ಸಹಾಯ ನೀಡಿದರೆ ಜೈನರ ಸ್ವರ್ಣಯುಗ ಉದಯಿಸುತ್ತದೆ ಮಹಾ ಜೈನ ಮಹಾಜನರು ಈಗಲಾದರೂ ಈ ಜಾಗತಿಕ ಲೋಕದಲ್ಲಿ ಮೌನ

ಧರಿಸಿ ನಮಗೆ ಸಬಂಧಪಟ್ಟದ್ದಲ್ಲವೆಂದು ಭಾವಿಸಿ ಕಾಲಕಳೆಯುವುದು ಸರಿಯಲ್ಲ ಹೊಂಬುಜ ಮತ್ತು ಶ್ರವಣಬೆಳಗೊಳ ಮೂಡಬಿದ್ರೆ; ಈ ಸ್ಥಳದ ಮಠಾಧಿಪತಿಗಳು ಹೀಗೆ ಗ್ರಂಥ ಪ್ರಕಾಶನಕ್ಕೆ ಜೈನ ಸಮಾಜವೂ ತನುಮನಧನದಿಂದ ಮುಕ್ತ ಹಸ್ತದಿಂದ ನೆರವು ನೀಡಿ ಜಿನವಾಣಿ ಶಾಸ್ತ್ರವನ್ನು ಸಂರಕ್ಷಿಸಬೇಕೆಂದು ಕಳಕಳಿಯಿಂದ ಪ್ರಾರ್ಥಿಸುವೆವು

ಸಜ್ಜನವಿಧೇಯ,

**ಸಂಪಾದಕ,**

**ಜಿನವಾಣಿ.**



# ಬೃಹತ್ ಅದ್ಭುತ ಶಾಸ್ತ್ರದಾನ ಸಮಾರಂಭ

## ಶ್ರವಣಬೆಳ್ಗೊಳದ ಜೈನ ಪೀಠಾಧಿಪತಿಗಳಾದ ಸ್ವಸ್ತಿಶ್ರೀ

## ಚಾರುಕೀರ್ತಿವರ್ಯ ಮಹಾಸ್ವಾಮಿಗಳಿಂದ ಶಾಸ್ತ್ರದಾನ

ಹಾಸನ ಜಿಲ್ಲೆಯಲ್ಲಿರುವ ಶ್ರವಣಬೆಳಗೊಳದ ಶ್ರೀ ಜೈನಮಠದಲ್ಲಿ ಪ್ರತಿ ವರ್ಷವೂ ನಡೆಯುವ ಭಗವಾನ್ ನೇಮಿನಾಥ ತೀರ್ಥಂಕರರ (ಪಂಚಕಲ್ಯಾಣ] ವಾರ್ಷಿಕ ಪಂಚಕಲ್ಯಾಣ ಮಹೋತ್ಸವದಲ್ಲಿ ಮೈಸೂರು ಶ್ರೀ ಜೈನಸಾಹಿತ್ಯ ಪ್ರಚಾರ ಸಂಘದ ಸನ್ಮತಿ ಗ್ರಂಥಮಾಲೆಯ ೨೨ ವಿಧದ ಗ್ರಂಥಗಳ ಎಂದರೆ ಪಾರ್ಶ್ವನಾಥ ಪುರಾಣ, ಮುನಿಸುವತ ಕಾವ್ಯ, ಭರತ-ಬಾಹುಬಲಿ ಸಮ್ಯಕ್ತ್ವಸಾರ, ಭದ್ರಬಾಹು ಚರಿತೆ ಮುಂತಾದ ೨೨ ಗ್ರಂಥ ರಾಶಿಯನ್ನು ಪಂಚಕಲ್ಯಾಣಕ್ಕೆ ಬಂದಿದ್ದ ಎಲ್ಲಾ ಎಲ್ಲಾ ಭವ್ಯ-ಬಾಂಧವರಿಗೆ ಸ್ವಸ್ತಿಶ್ರೀ ಚಾರುಕೀರ್ತಿಪಂಡಿತಾಚಾರ್ಯವರ್ಯ ಮಹಾಸ್ವಾಮಿಗಳವರು ತಮ್ಮ ಅಮೃತಹಸ್ತದಿಂದ ಬೃಹತ್-ಶಾಸ್ತ್ರದಾನ ಮಹೋತ್ಸವವನ್ನು ವೈಭವದಿಂದ ನೆರವೇರಿಸಿ ಶಾಸ್ತ್ರದಾತೃಗಳಲ್ಲಿ ಅಗ್ರಗಣ್ಯರೆನಿಸಿ ಎಲ್ಲರ ಕೃತಜ್ಞತೆಗೆ ಪಾತ್ರರಾದರು ಮತ್ತೆ ಜೈನ ಸಮಾಜದ ಅನೇಕ ಭವ್ಯ ಸ್ತ್ರೀ-ಪುರುಷರುಗಳು ಉದಾರವಾಗಿ ಶಾಸ್ತ್ರ-ಗ್ರಂಥಗಳನ್ನು ಪ್ರಕಟಪಡಿಸಿ ಇಂತಹ ಮಹಾದಾನಕ್ಕೆ ...ರ್ಪ ಡಿಸಲು ಸಹಕಾರಿಗಳಾದರು ಅದರ ಫಲವೇ ಇಂದು ಮೈಸೂರು ಜೈನಸಾಹಿತ್ಯ

ಪ್ರಚಾರಸಂಘವ ಮಹಾಗ್ರಂಥಗಳ ಮಹೋನ್ನತ ದಾನಕ್ಕೆ ಕಾರಣವಾದುದು ಸ್ತುತ್ಯಾರ್ಹವಾದುದಾಗಿದೆ ಇದು ಸರ್ವಾದರಣೀಯವಾಗಿದೆ

ಹೀಗೆ ಮುಂದೆ ಎಲ್ಲ ಭವ್ಯರೂ ನೆರವಿತ್ತು ಮುಂದೆಯೂ ಅನೇಕ ಗ್ರಂಥಗಳನ್ನು ಪ್ರಕಟಮಾಡಿಸಿ ಇಂತಹ ಅಪೂರ್ವ ಶಾಸ್ತ್ರದಾನ ಪ್ರಸಂಗವು ನಡೆಯಲು ಮೈಸೂರಿನ ಜೈನಸಾಹಿತ್ಯಪ್ರಚಾರಸಂಘಕ್ಕೆ ನೆರವಾಗಬೇಕೆಂದು ಪ್ರಾರ್ಥಿಸುವ,

ಸಂಪಾದಕ, ಜಿನವಾಣಿ.



ಭಗವಜ್ಜಿನಸೇನರ ಮಹಾಪುರಾಣದ

## ಕನ್ನಡ ಭಾವಾನುವಾದ ಮಹಾಸಾಹಸಕಾರ್ಯ ನಿರ್ಮಾತೃ

## ಪಂಡಿತರತ್ನಂಶ್ರೀ ಎ. ಶಾಂತಿರಾಜಶಾಸ್ತ್ರಿಗಳು

ಕನ್ನಡನಾಡು ಅಸಮಸಾಹಸಿಗಳ ಉತ್ತಮೋತ್ತಮ ಪಂಡಿತರ ತೌರೂರು. ಇವರಲ್ಲಿ ಜೈನಸಾಹಿತ್ಯ.ಧರ್ಮಗಳಿಗೆ ಕೊಡುಗೆಯಿತ್ತವರು ಅನೇಕರಿರುತ್ತಾರೆ. ಅವರಲ್ಲಿ ಧ್ರುವತಾರೆಯಂತೆ ಬೆಳಗುವವರು ಪಂಡಿತರತ್ನಂ ಎ. ಶಾಂತಿರಾಜಶಾಸ್ತ್ರಿಗಳವರು.

ಶ್ರೀಯುತ ಶಾಸ್ತ್ರಿಗಳವರು ದಕ್ಷಿಣ ಕನ್ನಡದ ಜಿಲ್ಲೆಯ ಕಾರ್ಕಳದ ಸಮೀಪದ ವರ್ತೂರು ಗ್ರಾಮವಾಸಿಗಳು ಇವರು ಮತ್ತಿವರ ಪೂರ್ವಜರು ಪರಂಪರೆಯಿಂದ ರತ್ನತ್ರಯಾರಾಧಕರಾಗಿ ಜಿನಧರ್ಮಾಚಾರಸಂಪನ್ನರು.

ಶ್ರೀಯುತ ಶಾನ್ತಿರಾಜಶಾಸ್ತ್ರಿಗಳು ತಮ್ಮ ೨೫ನೇ ವಯಸ್ಸಿನ ವೇಳೆಗೆ ಸಾಮಾನ್ಯ ವಿಧ್ಯಾಭ್ಯಾಸ ಮುಗಿಸಿ ಜತೆಯಾಗಿ ಕೀರ್ತಿಶೇಷರಾದ ಮತ್ತು ಉದ್ಭಟ ವಿದ್ವಾಂಸರಾದ ಸ್ವಸ್ತಿಶ್ರೀ ನೇಮಿಸಾಗರ ಸ್ವಾಮಿವರ್ಯರ ಔದಾರ್ಯದಿಂದ ಅನುಗ್ರಹದಿಂದ ಗ್ವಾಲಿಯರ್‌ನ ಮೋರೇನಾ ಜೈನ ಸಿದ್ಧಾಂತ ಮಹಾ ವಿದ್ಯಾಲಯದಲ್ಲಿ ಜೈನ ನ್ಯಾಯ-ವ್ಯಾಕರಣ-ಕಾವ್ಯ- ಧರ್ಮಸಿದ್ಧಾನ್ತಗಳಲ್ಲಿ ಅದ್ಭುತ ಪಾಂಡಿತ್ಯವನ್ನು ಸಂಪಾದಿಸಿದರು.

ಅಲ್ಲಿಂದ ಮುಂದೆ ಮೈಸೂರು ಮಹಾನಗರಿಯಲ್ಲಿರುವ ಶ್ರೀ ಎಂ. ಎಲ್. ಜೈನ ವಿದ್ಯಾರ್ಥಿನಿಲಯದಲ್ಲಿ ನೆಲೆನಿಂತು ಜೈನ ಕಾವ್ಯ-ಸಾಹಿತ್ಯ-ವ್ಯಾಕರಣ-ಧರ್ಮ ಪ್ರವಚನ ಮಾಡುತ್ತಾ ನೂರಾರು ಜನರನ್ನು ಜೈನವಿದ್ಯಾಪಾರಂಗತರನ್ನಾಗಿ ಮಾಡಿ ತಮ್ಮ ವಿದ್ಯಾಗುರುಗಳ ಋಣವನ್ನು ತೀರಿಸಿ ಮೆರೆದರು.

ನಂತರದ ಕಾಲದಲ್ಲಿ ಜೈನ ಧರ್ಮವನ್ನು ವಿಶ್ವವ್ಯಾಪಿಯಾಗಿ ಮಾಡಿ ಸಂಸಾರದಲ್ಲಿ ತೊಳಲಾಡುವ ಜೀವಿಗಳಿಗೆ ಆತ್ಮದರ್ಶನವನ್ನು ಮಾಡಿಸಬೇಕೆಂಬ ಉತ್ಕಟೇಚ್ಛೆಯಿಂದ ಮುದ್ರಣಾಲಯವನ್ನು ಸ್ಥಾಪಿಸಿ ಜೈನಧರ್ಮ ಪ್ರಚಾರಕ್ಕಾಗಿ ಅಹರ್ನಿಶಿ ದುಡಿಯಲಾರಂಭಿಸಿದರು.

ಈ ವೇಳೆಗಾಗಲೇ ಧರ್ಮದಲ್ಲಿ ಅಭಿರುಚಿಯುಳ್ಳ ಧರ್ಮಶ್ರದ್ಧಾಭಕ್ತಿಸಮನ್ವಿತರಾದ ದಿವಂಗತ ಎಂ. ಕೆ. ಕೃಷ್ಣೇಗೌಡರ ಧರ್ಮಾನುಬಂಧ ವಿಶ್ವಾಸಗಳು ಇವರೊಡನೆ ಬೆಳೆಯಿತು ಸ್ವಾಭಾವಿಕವಾಗಿ ಜೈನಧರ್ಮ ಪ್ರಚಾರದಲ್ಲಿ ಅಭಿರುಚಿಯುಳ್ಳ ಉದಾರಹೃದಯರಾದ ಕೃಷ್ಣೇಗೌಡರವರ ಕುಮಾರರಾದ ಮಾನ್ಯ ಧರ್ಮಕಾರ್ಯಪ್ರವರ್ತಕ ಎ. ಕೆ. ಸುಬ್ಬೇಗೌಡರು ತಮ್ಮ ತಂದೆಯವರ ಮನೋಭೀಷ್ಟದಂತೆ ಧರ್ಮ ಪ್ರಚಾರ ಕಾರ್ಯದಲ್ಲಿ ಬದ್ಧಮನಸ್ಕರಾಗಿದ್ದರು ಈ ಒಂದು ಸಂದರ್ಭದಲ್ಲಿ ಮೈಸೂರಿನ ಸುಪ್ರಸಿದ್ಧ ಜೈನಜ್ಯೋತಿಷ ವಿದ್ಯಾವಾಚಸ್ಪತಿಗಳಾದ್ದ ನಮ್ಮ ಪೂಜ್ಯಶ್ರೀ ಪಿತಲವರ್ಯರಾದ ಚೆಂದಪ್ಪ ಪಂಡಿತರ ಪ್ರೇರಣೆ ಇವರ ಮೇಲೆ ಬಿತ್ತು ತಮ್ಮ ಅಸಮಸಾಹಸದಿಂದ ಏಕಾಂಗಸಾಹಸಿಯಾದ ಚಂದಪ್ಪ ಪಂಡಿತರು ಮಾನ್ಯ ದಾನಶಿರೋಮಣಿ ಸುಬ್ಬೇಗೌಡರಿಗೆ ಜಿನಸೇನಾಚಾರ್ಯರ ಮಹಾಪುರಾಣವನ್ನು ಕನ್ನಡದಲ್ಲಿ ಪ್ರಕಟಿಸಿ ಅಶಕ್ತರಿಗೆ ಮತ್ತೆ ವಿದ್ಯಾವತಿಯರಲ್ಲದ ಹೆಂಗಳೆಯರಿಗೆ ಜಿನಧರ್ಮಪುರಾಣಗಳನ್ನು ಅಭ್ಯಸಿಸಲು ಅನುವಾಗಬೇಕೆಂದು ಪ್ರೇರಿಸಿದರು.

ಅವರ ಪ್ರೇರಣೆ ಮತ್ತು ಪ್ರಾರ್ಥನೆಗೆ ಮನಸೋತ ಸುಬ್ಬೇಗೌಡರು ಜಿನಸೇನರ ಮಹಾಪುರಾಣ ಪ್ರಕಟನಕಾರ್ಯವನ್ನು ವಹಿಸಿದರು

ನಂತರ ಅವರಿಬ್ಬರೂ ಸೇರಿ ಎ. ಶಾಂತಿರಾಜಶಾಸ್ತ್ರಿಗಳೇ ತಮ್ಮ ಪಾಂಡಿತ್ಯವನ್ನು ಕನ್ನಡದಲ್ಲಿ ಎರಕ ಹೊಯ್ಯುವಂತೆ ಅನುವಾದಿಸಲು ಒಪ್ಪಿಸಿದರು.

ನಂತರದ ಕಾಲದಲ್ಲಿ ಆಶರೀರಪಾತಪರ್ಯಂತ ಶಾಂತಿರಾಜಶಾಸ್ತ್ರಿಗಳು ಗ್ರಂಥನಿರ್ಮಾಣಚತುರ್ಮುಖರಾಗಿ ಮಹಾಪುರಾಣವನ್ನು ರಚಿಸಿ ಪ್ರಕಟಿಸಿ ಜೈನಸಮಾಜಕ್ಕೆ ಮಹಾಸಹಾಯ ಮಾಡಿರುತ್ತಾರೆ.

ಇಂತಹ ಸಮಾಜೋಪಕಾರಕ ಜೈನಗ್ರಂಥ ಪ್ರಕಾಶನದ್ವಾರಾ ಕರ್ನಾಟಕ ದಲ್ಲಿ ಅಜ್ಞಾನಧ್ವಾಂತವನ್ನು ಹೋಗಲಾಡಿಸಿದ ಜೈನಸಿಧ್ಧಾಂತ ಭಾಸ್ಕರರಾದ ಶ್ರೀ ಶಾನ್ತಿರಾಜಶಾಸ್ತ್ರಿಗಳು ೧೯೫೩ನೇ ಕ್ರಿಸ್ತಾಬ್ದದಲ್ಲಿ ಅಸ್ತಂಗತವಾಗಿ ಜೈನಸಮಾಜವನ್ನು ಕೈಬಿಟ್ಟು ಹೋದದ್ದು ಸಮಾಜಕ್ಕೆ ತುಂಬಲಾರದ ನಷ್ಟ.

ಇಂದಿನ ನಮ್ಮ ಸಮಾಜ ಇಂತಹ ಮಹಾಪುರುಷರನ್ನು ನೆನೆಸುವುದಲ್ಲದೆ ಅವರು ತೋರಿದ ಮಾರ್ಗದಲ್ಲಿ— ಜೈನಶಾಸ್ತ್ರಾಧ್ಯಾಯಿಗಳಾಗಿ ಗ್ರಂಥಪ್ರಕಾಶಕರಾಗಿ ಶಾಸ್ತ್ರಶ್ರವಣಧಾರಣ-ಮನನ-ನಿದಿಧ್ಯಾಸುಗಳಾಗಿ ಆದರೆ ಆ ಮಹಾಪುರುಷ ಮಾಡಿದ ಶಾಸ್ತ್ರಜ್ಞಾನದಾನ ಸಾರ್ಥಕವಾದೀತು

ಇಂತಹ ಮಹಾವ್ಯಕ್ತಿಗಳ ಧರ್ಮಶ್ರದ್ಧಾಭಕ್ತಿಯುತರಾದ ಕುಮಾರರು 'ಆತ್ಮಾ ವೈ ಪುತ್ರನಾಮಾಸಿ' ಎನ್ನುವುದಕ್ಕೆ ಅನುರೂಪರಾಗಿ ತಮ್ಮ ಪೂಜ್ಯ ಪಿತೃವರ್ಯರಂತೆಯೆ ಉತ್ತಮಶ್ರದ್ಧಾಳುಗಳಾಗಿ ಜೈನಧರ್ಮಪ್ರಚಾರ ಕಾರ್ಯದಲ್ಲಿ ನೆರವೀಯುವವರಾಗಿದ್ದಾರೆ ಅವರ ದಿವ್ಯ ನಾಮಧೇಯ ಎಸ್. ನಾಗಕುಮಾರ್, ಎಸ್. ಜಿನೇಂದ್ರಕುಮಾರ್, ಎ. ಪ್ರಸನ್ನಕುಮಾರ್, ಎಸ್. ಗುಣಪಮ೯— ಎಂದು. ಅವರ ನಾಮಧೇಯಗಳಿಗೆ ಉತ್ತಮ ಗುಣಗಣಪರಿಭೂಷಿತರಾಗಿ ತಮ್ಮ ಪೂಜ್ಯ ಪಿತೃವರ್ಯರಿಗೆ ಒಳ್ಳೆಯ ಕೀರ್ತಿ ಯನ್ನು ತಂದುಕೊಡುವಂತೆ ವರ್ತಿಸುತ್ತಿರುವುದು ನಮ್ಮ ಸಮಾಜದ ಭಾಗ್ಯವೆನ್ನಲಡ್ಡಿ ಯಿಲ್ಲ ಇವರೆಲ್ಲ ಸೇರಿ ನಮ್ಮ ಜಿನವಾಣಿಯ ಒಂದು ತಿಂಗಳ ಪ್ರಕಟನೆಯ ಸಂಪೂ -ರ್ಣ ಹೊರೆಯನ್ನು ಹೊತ್ತು ಸಹಕರಿಸುವುದಾಗಿ ಒಪ್ಪಿರುವುದು ಒಂದು ಮಹಾ ಸಾರ್ಥಕ ಕಾರ್ಯವಾಗಿದೆ.

ಅವರ ಧರ್ಮ ಶ್ರದ್ಧಾದಿಗಳಿಗೆ ಅನುಗುಣವಾಗಿ ಜಿನೇಂದ್ರನು ಹಾಗೂ ಶಾಸನ ದೇವತೆಗಳು ಅವರಿಗೆ ಭೂತ-ಭವಿಷ್ಯತ್-ವರ್ತಮಾನ ಕಾಲದಲ್ಲಿ ಸರ್ವಾರಿಷ್ಟಗಳನ್ನು ಪರಿಹರಿಸಿ ಇತೋಪ್ಯತಿಶಯವಾದ ಆಯುರಾರೋಗ್ಯೈಶ್ವರ್ಯಾದಿಗಳನ್ನು ಅನುಗ್ರಹಿಸಿ ಅನವರತವೂ ಪ್ರಾರ್ಥಿಸುತ್ತಿರುವ,

ಎಂ. ಸಿ. ಪದ್ಮನಾಭಶರ್ಮ, ನ್ಯಾಯತೀರ್ಥ,
ಸಂಪಾದಕ, ಜಿನವಾಣಿ.

*ಚಿತ್ತಶುದ್ಧಿಮನಾಸಾದ್ಯ ಮೋಕ್ತುಂ ಯಃ ಸಮ್ಯಗಿಚ್ಛತಿ ।
ಮೃಗತೃಷ್ಣಾತರಙ್ಗಿಣ್ಯಾಂ ಸ ಪಿಬತ್ಯಂಬು ಕೇವಲಮ್ ॥ ೧೯ ॥

---

ಚಿತ್ತಶುದ್ಧಿಗೂ ಮುಕ್ತಿಗಾಗಿ ಪಡುವ ಕಾಯಕ್ಲೇಶ-ಮನಃಕ್ಲೇಶ ರೂಪವಾದ ಆತ್ಮಧ್ಯಾನಾತ್ಮಕ ತಪಸ್ಸಿಗೂ ನಂಟೇನೆಂಬ ಶಂಕೆಯನ್ನು ಉದಾಹರಣಪೂರ್ವಕವಾಗಿ ಆಚಾರ್ಯ ಇಂತು ವರ್ಣಿಸುತ್ತಾರೆ–

ಚಿತ್ತಶುದ್ಧಿಮನಾಸಾದ್ಯ ಇತ್ಯಾದಿಯಾಗಿ. ಲೋಕದಲ್ಲಿನ ಜೀವ ಸಾಮಾನ್ಯಕ್ಕೆ ಶ್ರಮವಿಲ್ಲದ ಸುಖಸಾಧನೆಯ ಹುಚ್ಚು ಹೆಚ್ಚು. ಅಂತೆಯೇ ಆ ಜೀವಿಗಳಿಗೆ ಚಿತ್ತಶುದ್ಧಿಯ ಸಾಧನೆಯಂತಹ ಕಷ್ಟಕರ್ಮವೆ ಬೇಡ ಕೇವಲ ಆತ್ಮಧ್ಯಾನವನ್ನೇ ಮಾಡಿ ಮುಕ್ತಿಯನ್ನು ಸಾಧಿಸುವಾ ! ಎಂಬ ಶ್ರಮವಿಲ್ಲದ ಹಂಬಲವೇ ಅವುಗಳ ತಾರಕ ಮಂತ್ರ. ಇಂತಹವರೇ ಲೋಕದಲ್ಲಿರತಕ್ಕ ಜನ. ಆದರಿದು ಫಲವನ್ನು ನೀಡದ ಕನ್ನಡಿಯಲ್ಲಿನ ಗಂಟನಂತೆ ಕೈಗೆಟಕುದುದು. ಬಿಸಿಲ್ಗುದುರೆಯನ್ನೇ ದಾಹವನ್ನು ಪರಿಹರಿಸುವ ಶುದ್ಧೋದಕವೆಂದು ಭ್ರಮಿಸಿ ಬೆಂಬತ್ತುವ ಶ್ರಾಂತನಿಗೆ ಎಷ್ಟೇ ಓಟ ಓಡಿದರೂ ಹತ್ತಿರದಲ್ಲೆ ಅಸತ್ಯವಾದ ಸರೋವರದ ನೋಟ ಕಣ್ಣಿಗೆ ಕಾಣುತ್ತಲೇ ಇರುತ್ತದೆಯೋ ವಿನಹ ಅಸ್ತಿತ್ವದಲ್ಲೇ ಇಲ್ಲದ ಆ ಭ್ರಾಮಕಸರೋವರ ಕೈಗೆಟುಕಲಾರದಲ್ಲವೆ ? ಅಂತೆಯೆ ವಿಷಯವಿಮುಖನಾಗದೆ ದೇಹವನ್ನು ಶೋಷಿಸುವವನ ಆತ್ಮಧ್ಯಾನಾದಿರೂಪತಪಸ್ಸಿನಿಂದ ಮುಕ್ತಿ ಕಾಂತೆಯು ಕರತಲಾಮಲಕವಾಗುತ್ತಿರುವಂತೆ ಕಾಣುತ್ತದೆಯೋ ವಿನಹ ಅದು ಕೈಗೆಟಕುವುದೇ ಇಲ.

---

†ಎಂದರೆ– ಪ್ರಸನ್ನಮನಸ್ಕನಿಗೆ ತತ್ ಕ್ಷಣದಲ್ಲಿಯೇ ಬುದ್ಧಿಯು ಸುಸ್ಥಿತಿಯಲ್ಲಿ ನೆಲೆನಿಲ್ಲುತ್ತದೆ ಯಾವಾಗ ಆತ್ಮಾವಲೋಕನಕ್ಕೆ ವಿರೋಧಭೂತವಾದ ಕಶ್ಮಲದಿಂದ ನಿರ್ಮುಕ್ತವಾದ ಅಚ್ಛಾಚ್ಛಸ್ವಚ್ಛವಾದ ಮನಸ್ಸಿನಲ್ಲಿ ಆತ್ಮವಿಷಯವಾದ ಬುದ್ಧಿಯು ಯಾವಾಗ ಸುಸ್ಥಿತಿಯಲ್ಲಿ ನೆಲೆನಿಲ್ಲುತ್ತದೆಯೋ ಆಗಲೀಗ ಮನಃಪ್ರಸನ್ನವಾದಾಗ ಸರ್ವದುಃಖಗಳ ಹಾನಿಯು ಆಗಿಯೇ ಆಗುತ್ತದೆ.

ಬುದ್ಧಿಯು ಪ್ರಸನ್ನವಾದಾಗ ಮನ ಆತ್ಮಚಿಂತನೆಯತ್ತ ಸರಿದು ಅದು ಪ್ರಚ್ಛನ್ನವಾಗಿ ತನ್ಮೂಲಕ ಆ ಜೀವಿ ಮುಕ್ತಿಪಥದತ್ತ ಸರಿಯುತ್ತಾನೆ. ಇದು ಆಚಾರ್ಯರ ಅಂತರ ಭಾವ.

*ಈ ವಿಷಯದಲ್ಲಾಗುವ ಅನರ್ಥ ಪರಂಪರೆಯನ್ನು–

ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥

ಭಗವದ್ಗೀತೆ– ಅಧ್ಯಾ-೨ ಶ್ಲೋ- ೬೭

*ತದ್ಧ್ಯಾನಂ ತದ್ಧಿ ವಿಜ್ಞಾನಂ ತದ್ಧ್ಯೇಯಂ ತತ್ತ್ವಮೇವ ವಾ ।
ಯೇನಾವಿದ್ಯಾಮತಿಕ್ರಮ್ಯ ಮನಸ್ತತ್ತ್ವೇ ಸ್ಥಿರೀಭವೇತ್ ॥ ೨೦ ॥

---

ಆದ್ದರಿಂದ ಚಿತ್ತಶುದ್ಧಿಯಿಲ್ಲದ ಫಲವನ್ನೇ ನೀಡದ ಅವನನ್ನೇ ಎತ್ತೆತ್ತಲೊ ಒಯ್ಯುವ ಕೇವಲಧ್ಯಾನದಲ್ಲಿ ಜೀವಿಯೂ ನಿರತನಾಗಬಾರದೆಂಬುದು ಆಚಾರ್ಯರ ಕಠೋರಸತ್ಯವಾದ ಮಾತಾಗಿದೆ.

ಮನಸ್ಸು ಆತ್ಮತತ್ತ್ವದಲ್ಲಿಯೇ ಸ್ಥಿರವಾಗಲು ಯಾವುದನ್ನು ಜಯಿಸಬೇಕು? ಅದಕ್ಕೆ ಮಾಡಬೇಕಾದುದು' ಅರಿಯಬೇಕಾದುದು ಯಾವುದೋ ?- ಎಂಬೀ ಸಂಶಯ ವನ್ನು ಆಚಾರ್ಯರಿಂತು ಪರಿಹರಿಸುತ್ತಾರೆ-

ತದ್ಧ್ಯಾನಂ ಇತ್ಯಾದಿಯಾಗಿ. ಚಿತ್ತವನ್ನು ನಿರೋಧಿಸಬಹುದು. ಮನಃ ಕಶ್ಮಲಗಳನ್ನು ಬಡಿಗೊತ್ತಬಹುದು ಆದರೆ- ಅದೆಲ್ಲಾ ಅವಿದ್ಯೆಯನ್ನು ಜಯಿಸುವುದರಿಂದ ಮಾತ್ರ ಸಾಧ್ಯ. ಅವಿದ್ಯೆಯೋ ಜನ್ಮಜನ್ಮಾಂತರಗಳಿಂದ ಅಂಟಬಂದುದು. ಅದೋ ಅಜ್ಞಾನ ಮೂಲ. ಶುದ್ಧವಾದ ಮನವನ್ನು ಆಕ್ರಮಿಸಲು ಹೊಂಚುಹಾಕುವ ಈ ಅಜ್ಞಾನವನ್ನು ಬಡಿದೋಡಿಸಬೇಕು. ಅದೋ ಕಾಯಕ್ಲೇಶಮನಃಕ್ಲೇಶರೂಪವಾದ ತಪಸ್ಸಿನಿಂದ ಸಾಧ್ಯ. ತಪಸ್ಸೋ ಆತ್ಮಧ್ಯಾನಸಾಧಕ. ಅದಕ್ಕೆ ವಿಶೇಷವಾದ ಆಧ್ಯಾತ್ಮಜ್ಞಾನ ಅಂದರೆ- ವಿಜ್ಞಾನ ಕೈದೀವಿಗೆ ಅದರಿಂದ ಧ್ಯೇಯವಾದ ಆತ್ಮ ದರ್ಶನ ಲಭಿಸುತ್ತದೆ. ಅದೇ ತತ್ತ್ವವೂ ಅಹುದು. ಆದ್ದರಿಂದ ಮನೋಜಯವನ್ನು ಪಡೆದ ಆತ್ಮಜ್ಞಾನ ಅವಿದ್ಯಾಮೂಲವಾದ ಅಜ್ಞಾನವನ್ನು ಜಯಿಸಿ ವಿಜ್ಞಾನದೀವಿಗೆಯ ಮೂಲಕ ಆತ್ಮಧ್ಯಾನರೂಪ ತಪವನ್ನಾಚರಿಸುತ್ತಾ ಧ್ಯೇಯವಾದ ಆತ್ಮದರ್ಶನ ವನ್ನು ಪಡೆದು ತತ್ತ್ವನಿಶ್ಚಿತ ಸ್ವರೂಪವನ್ನುಪಡೆಯಬೇಕೆಂಬುದೇ ಆಚಾರ್ಯರ ಭಾವ.

---

ಭಗವದ್ಗೀತೆಯೂ ತದ್ವ್ಯಾಖ್ಯಾನವು

"ಪುನರಪಿ ಉಕ್ತೇನ ಪ್ರಕಾರೇಣ ಇಂದ್ರಿಯನಿಯಮನಂ ಅಕುರ್ವತಃ ಅನರ್ಥಮಾಹ- + + ಮನಃ ಏಕಾತ್ಮಪ್ರವಣಾಂ ಪ್ರಜ್ಞಾಂ ವಿಷಯಪ್ರವಣತಾಂ ಕರೋತೀತ್ಯರ್ಥಃ —ರಾಮಾನುಜಭಾಷ್ಯ

ಎಂದರೆ- ಇಂದ್ರಿಯದಮನವನ್ನು ಮಾಡದಿರುವನಿಗೆ ಒದಗುವ ಪರಂಪರೆಯನ್ನು ವರಿಸುತ್ತಾ ಲಂಗುಲಗಾಮಿಲ್ಲದ ಮನ ಆತ್ಮೋಪಾಸನ ಪ್ರವಣವಾದ ಮನಸ್ಸನ್ನು ವಿಷಯಗಳಿಗೆ ದಾಸನಾಗುವಂತೆ ಮಾಡುತ್ತದೆ. ಆದ್ದರಿಂದ ಮನೋನಿಯಮನ ಆತ್ಯಾವಶ್ಯಕ- ಎಂದು ಒತ್ತಿ ಹೇಳುತ್ತದೆ

*ಜೈನಯೋಗದಲ್ಲಿ ಧ್ಯಾನ ನಾಲ್ಕು ವಿಧ. ಆರ್ತ-ರೌದ್ರ-ಧರ್ಮ-ಶುಕ್ಲಗಳೇ ಅವು. ಆರ್ತರೌದ್ರಗಳು ಮನುಜನ ಪತನಕ್ಕೆ ಹೇತುವಲ್ಲದೆ ಕರ್ಮಬಂಧದಿಂದ ಮತ್ತಷ್ಟು

+ವಿಷಯಗ್ರಾಸಲುಬ್ಧೇನ ಚಿತ್ತದೈತ್ಯೇನ ಸರ್ವಥಾ ।
ವಿಕ್ರಮ್ಯ ಸ್ವೇಚ್ಛಯಾಜಸ್ರಂ ಜೀವಲೋಕಃ ಕದರ್ಥಿತಃ ॥೨೧॥

---

ಸ್ವಚ್ಛಂದ ಪರಿಣಾಮಿಯಾಗಿ ಆತ್ಮತತ್ತ್ವವಿವೇಕವನ್ನು ಪಡೆಯಲು ಮನವನ್ನು ಬಿಟ್ಟಾಗ ಅದರಿಂದಾಗುವ ದಾಂಧಲೆಯನ್ನಿಂತು ಶ್ರೀಶುಭಚಂದ್ರರು ಮನಮುಟ್ಟುವಂತೆ ವರ್ಣಿಸುತ್ತಾರೆ.–

ವಿಷಯಗ್ರಾಸಲುಬ್ಧೇನ ಇತ್ಯಾದಿಯಾಗಿ. ಯದ್ಯಪಿ ಪರಿಶುದ್ಧ ಮನಸ್ಸು ಧ್ಯಾನ-ಧ್ಯೇಯ--ತತ್ತ್ವಗಳನ್ನು ಸಾಕ್ಷಾತ್ಕರಿಸುವುದರಲ್ಲಿ ಸಂಶಯವಿಲ್ಲ. ಆದರೆ ಅದೇ ಮನಸ್ಸು ವಿಷಯಾಂತರದತ್ತ ಹರಿದಲ್ಲಿ ಮಹದಾಪತ್ತು ಕಟ್ಟಿಟ್ಟ ಬುತ್ತಿ. ಕಾರಣ: ಮನ ತನ್ನನ್ನು ತಣಿಸಿ ತೃಪ್ತಿಪಡಿಸಲು ಸ್ರಕ್-ಚಂದನ-ವನಿತಾ-ಅಲಂಕರಣಾದಿಗಳೇ ಸರಿ; ಎಂದು ತಿಳಿದಿರುತ್ತದೆ. ಆದ್ದರಿಂದ ಆ ವಿಷಯವಸ್ತುಗಳು ಮನನೆಂಬ ರಾಕ್ಷಸನಿಗೆ ತತ್‌ಕ್ಷಣದಲ್ಲಿ ಕಬಳಿಸಲು ಹತ್ತಿರದಲ್ಲೇ ಎಟಕುವ ಮಹಾಗ್ರಾಸ. ಆ ಮನ ಅದರಲ್ಲಿ ಲುಬ್ಧ-ಆಶಾಪರ- ಎಂದರೆ ಪ್ರಿಯಹಿತವೆಂದು ಬಗೆದುದು. ಒಮ್ಮೆ ಆ

---

ಆವರಿಸಲ್ಪಡಲು ಕಾರಣ. ಹಾಗೆಯೇ ಧರ್ಮ-ಶುಕ್ಲಧ್ಯಾನಗಳು ಆಧ್ಯಾತ್ಮಿಕಭಾವವು ಉದಯಿಸಲು ಮತ್ತೆ ಮನಸ್ತತ್ತ್ವದ ದೃಢತೆಯುಂಟಾಗಲು ಮೂಲಹೇತು, ಜೈನರ ಶುಕ್ಲಧ್ಯಾನವೂ ಹಿಂದೂ ದರ್ಶನದಲ್ಲಿ ಕಾಣಬರುವ ಸಾತ್ವಿಕವೃತ್ತಿಯೂ ಒಂದೇ. ನಾಮ ಮಾತ್ರ ಭೇದ. ಹೀಗೆ ಒದಗಿಬಂದ ಧ್ಯಾನದಿಂದ ಆತ್ಮಜ್ಞಾನವು ಅಭಿವೃದ್ಧವಾಗಿ ದುಃಖರೂಪಕರ್ಮಬಂಧಕ್ಕೆ ಅಂತ್ಯವು ಉಂಟಾಗುತ್ತದೆ. ಆದ್ದರಿಂದಲೇ ಸಮ್ಯಗ್ದರ್ಶನ-ಜ್ಞಾನ-ಚಾರಿತ್ರಗಳು ಮುಕ್ತಿಗೆ ಪ್ರಧಾನ ಸಾಧನಗಳು ಆದ್ದರಿಂದ ಸತ್ಯವನ್ನು ಸಂಪೂರ್ಣವಾಗಿ ಅರಿಯಲು ಅದರ ವಾಸ್ತವಿಕ ಸ್ವರೂಪವನ್ನು ಹೃದಯಂಗಮವಾಗುವಂತೆ ಅನುವು ಮಾಡದಿದ್ದರೆ ಮತ್ತೆ ಅನುಕೂಲವಾದ ಆಚರಣೆಯನ್ನು ಮಾಡದಿದ್ದರೆ ಮತ್ತೆ ಅದಕ್ಕೆ ಅನುಕೂಲವಾದ ಆಚರಣೆಯನ್ನು ಮಾಡದಿದ್ದರೆ ಆತ್ಮಜ್ಞಾನವಾಗಲಿ ತದ್ದ್ವಾರಾ ಮೋಕ್ಷವಾಗಲಿ ಸಂಭವಿಸುವುದಿಲ್ಲ. ಇದು ಜೈನದರ್ಶನ ಸಾರ ವಿವರಗಳಿಗೆ ಮಾಘಣಂದಿಗಳ ಪದಾರ್ಥಸಾರವನ್ನು ನೋಡಿರಿ.

+ 'ಭಗವದ್ಗೀತೆಯಲ್ಲಿ ಭಗವಾನ್ ಶ್ರೀಕೃಷ್ಣನು—

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ ॥

ಮನ ಅತ್ತ ವಾಲಿದರೆ ಸಾಕು. ಈ ಸಮಸ್ತ ಜೀವಲೋಕವೂ ಅದರ ಕಾಲ್ತುಳಿತಕ್ಕೆ ಸಿಕ್ಕು ದಾಸವಾಗಿ ಪೀಡಿಸಲ್ಪಡುತ್ತದೆ; ಎಂದರೆ- ತಾನೂ ನಾಶವಾಗಿ ಪರರನ್ನೂ "ಸ್ವಯಂ ನಷ್ಟಃ ಪರಾ‌ನ್ ನಾಶಯತಿ" ನಾಶಗೊಳಿಸುತ್ತದೆ; ಎಂದು ಆಚಾರ್ಯ ಶುಭ ಚಂದ್ರರ ಪ್ರಾಮಾಣಿಕವಾದ ಭಾವ.

---

ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ಸ್ಮೃತಿವಿಭ್ರಮಃ ।
ಸ್ಮೃತಿಭ್ರಂಶಾದ್ಬುದ್ಧಿನಾಶಃ ಬುದ್ಧಿನಾಶಾತ್ಪ್ರಣಶ್ಯತಿ ॥

ನಿಷ್ಕಲ್ಮಷವಾದ ಮನಸ್ಸಿನ ಮುಂದೆ ವಿಷಯ ವಸ್ತುಗಳು ಸುಳಿದಾಗ ಆತ್ಮನಿಗೆ ಅದರಲ್ಲಿ ಅಭಿರುಚಿ ಅನಿಸುತ್ತದೆ. ನಂತರ ತದ್ದ್ವಾರಾ ಅದರ ಸಂಗ, ಅದರಿಂದ ಅದನ್ನು ಹೊಂದಿಯೇ ಬಿಡಬೇಕೆಂಬ ರಾಜಸೇಚ್ಛೆ. ಅದು ಕೈಗೆಟುಕದಿದ್ದರೆ ಅದಕ್ಕಾಗಿ ಕ್ರೋಧ, ಕ್ರೋಧ ಉತ್ಕಟಾವಸ್ಥೆಗೇರಿದಾಗ ಸಂಮೋಹ...... ಏನನ್ನೂ ಮಾಡಲು ಹಿಂಜ ರಿಯದ ಭಂಡತನದ ಅಮಲು, ಅದರಿಂದ ಕಾರ್ಯಾಕಾರ್ಯವಿವೇಕಜ್ಞಾನಹೀನತೆ, ಮತ್ತೆ ಅದರಿಂದ ಬುದ್ಧಿಯ ವಿನಾಶ, ಅದರಿಂದ ಸಂಪೂರ್ಣ ನಾಶವಾಗುತ್ತದೆ. ಆದ್ದರಿಂದ ನಿಷ್ಕಲ್ಮಶ ಮನಸ್ಸಿನಲ್ಲಿ ಮತ್ತೇನೂ ಮುದ್ರೆಯೊತ್ತದಂತೆ ಆತ್ಮದರ್ಶನಕ್ಕೆ ಅದನ್ನು ಮೀಸಲಾಗಿಡಬೇಕು ; ಎಂದು ಉಸುರಿದ್ದಾನೆ. ಇದನ್ನೇ—

ಸ್ವಾಮಿ ಶಂಕರರು– ಇದೇ ಗೀತಾವ್ಯಾಖ್ಯಾನದಲ್ಲಿ – ಅಥೇದಾನಿ ಇತ್ಯಾರಭ್ಯ ಬುದ್ಧಿನಾಶಾತ್ಪುನರಪಿ ಸಂಸಾರೇ ನಿಮಗ್ನೋ ವಿನಷ್ಟೋ ಭವತಿ ಇತ್ಯಂತ್ಯ ಭಾಗವಲ್ಲಿ- ಸಕಲ ಮನಃಕಶ್ಮಲಗಳನ್ನು ದೂರೀಕರಿಸಿದಾಗ ಅವುಗಳ ಸಹಯೋಗವಿಲ್ಲದ ಮನ ಆ ವಿಷಯವಸ್ತುಗಳನ್ನೇ ಧ್ಯಾನಿಸಿ ಧ್ಯಾನಿಸಿ ಅವುಗಳಲ್ಲಿ ಆಸಕ್ತಿಯನ್ನೂ ನಂತರ ಪ್ರೀತಿ ಯನ್ನೂ ತದನಂತರ ಅದನ್ನು ಅನುಭವಿಸುವ ಆಶೆಯನ್ನು ಅದು ನೆರವೇರದಿದ್ದಾಗ ಕ್ರೋಧವನ್ನೂ ಹೊಂದುತ್ತಾನೆ. ಅದರಿಂದ ಅವನ ಅವಿವೇಕ ಹೆಚ್ಚಿ ಕ್ರೋಧಕ್ಕೆ ತುತ್ತಾದ ಆತ "ಕ್ರುದ್ಧೋ ಹನ್ಯಾದ್ಗುರೂನಪಿ"- ಎಂಬಂತೆ ಕೋಪಕ್ಕೆ ವಶವಾದ ವನು ತನ್ನ ಅಜ್ಞಾನವನ್ನು ನೀಗಿದ ಗುರುವನ್ನೂ ಕೊಲ್ಲಲು ಹಿಂಜರಿಯಲಾರ. ಈ ಒಂದು ಸಮ್ಮೋಹ ಶಾಸ್ತ್ರವೇನು ಆಚಾರ್ಯರೇನು ಇವರ ಉಪದೇಶದಿಂದ ಆದ ಸಂಸ್ಕಾ ರದಿಂದ ಉಂಟಾವ ಬುದ್ಧಿಯ ವಿಭ್ರಮಕ್ಕೆ ಕಾರಣವಾಗುತ್ತದೆ. ಈ ಬಗೆಯುಲ್ಲುಂ- ಟಾದ ಸ್ಮೃತಿಭ್ರಂಶ ಆಯಾಯಾ ವ್ಯಕ್ತಿಯ ಬುದ್ಧಿನಾಶಕ್ಕೆ ಹೇತು ಬುದ್ಧಿನಷ್ಟವಾ ದಾಗ ಈಚಿನ ಪುನಃ ಸಂಸಾರನಲ್ಲಿ ಬಿದ್ದು ಒದ್ದಾಡಿ ನಾಶಹೊಂದುತ್ತದೆ" ಎಂದುಸಿ ರಿದ್ದಾರೆ

# ಚಂದ್ರಪ್ರಭಾ ಟ್ರಸ್ಟ್

## ಜಿನವಾಣಿ ಕಾರ್ಯಾಲಯ

ನಂ ೬೩. ಡಿ. ಬನುಮಯ್ಯರಸ್ತೆ, ಮೈಸೂರು.

ಜಿನವಾಣಿ **REG. NO. K.R.N.N. 17**

೧೩) ಎ. ಸಿ. ಎ. ದೇವೇಂದ್ರಪ್ಪನವರು, ಮೈಸೂರು
೧೪) ಪಾರ್ಶ್ವನಾಥಯ್ಯನವರು, ಬೆಂಗಳೂರು
೧೫) ಬಿ ಜೆ. ಸುರೇಂದ್ರಕುಮಾರ್,
೧೬) ಎಂ. ಕೆ. ಅನಂತಯ್ಯನವರು, ವೈನಾಡು
೧೭) ಶ್ರೀಮತಿ ಚಂದ್ರಮತಿ ಅಮ್ಮನವರು, ವೈನಾಡು
೧೮) ಪಿ. ಡಿ. ಚಂದ್ರಪ್ರಭ, ರಾಡಿಕೆರೆ
೧೯) ಎಸ್. ಎಸ್. ಡಿ. ನಾಗರಾಜಯ್ಯನವರು, ಶ್ರವಣಬೆಳಗೊಳ
೨೦) ಶ್ರೀ ಚಂದ್ರಪ್ರಭ ಕರಿಂಗುತ್ತಿ

To

**BOOK POST**

S. Nagakumar
Puthurtail

Mepadi P.O.

Wynad
Kerala

**ಜಿನವಾಣಿಕಾರ್ಯಾಲಯ**

ನಂ. 67. ಡಿ. ಬನುಮಯ್ಯ ರಸ್ತೆ, ಮೈಸೂರು-೫೭೦೦೦೧

The Jinavani, the monthly Kannada Magazine is Edited an Published by Sri M C. Padmanabhasharma & Printed by B V. Alahiyamanavalan, Propritor, Sri Vijayalakshmi Press, 355, D. subbiah Road MYSOR 1

ಜೈನಸಾಹಿತ್ಯಪ್ರಚಾರಸಂಘದ ಜೈನಧಾರ್ಮಿಕ ಕನ್ನಡ ಮಾಸಿಕ ಮುಖಪತ್ರಿಕೆ

# ಜಿನವಾಣಿ




ಜುಲೈ 10 1984

## ಅನಂತಕೃತಜ್ಞತಾಭಿನಂದನಗಳು

**ಜಿನವಾಣೀರಜತೋತ್ಸವ ಸ್ಮಾರಕವಾದ**

ಶ್ರೀ ಮಹಾವೀರಸ್ವಾಮಿಯ

**೨೫೦೦ ನೇ ವೀರನಿರ್ವಾಣವಿಶೇಷಸಂಚಿಕೆಯಲ್ಲಿನ**

ಜಿನವಾಣೀಸಂಪಾದಕನ

**ಎಂ. ಸಿ. ಪದ್ಮನಾಭ ಶರ್ಮನಾದ ನನ್ನ**

**ವಿಶೇಷ ನಿವೇದನಪ್ರಾರ್ಥನಾನುಸಾರ**

**೧೯೭೪ ನೇ ಜುಲೈ ಸಂಚಿಕೆಯ**

**ಸಂಪೂರ್ಣ ಪ್ರಕಟಣಾದಿಗಳಿಗೆ**

ಸಹಕರಿಸಿದ

ಧರ್ಮಸ್ಥಳದ ಮಹಾಮಾತೆ ಹಿರಿಯ ಧರ್ಮಾತ್ಮರಾದ

**ಶ್ರೀಮತಿ ರತ್ನಮ್ಮ ಆರ್' ಹೆಗ್ಗಡೆರವರಿಗೆ**

ಅನಂತಹೃತ್ಪೂರ್ವಕಕೃತಜ್ಞತಾಯುಕ್ತವಾದ ಧನ್ಯವಾದಗಳನ್ನು ಅರ್ಪಿಸುವೆವು

**ಈ ಔದಾರ್ಯ ವಾತ್ಸಲ್ಯಗಳೇ ನಮ್ಮ ರಕ್ಷಾಕವಚ !!**

**ಇದೇ ಈ ಸಂಚಿಕೆಯ**

**ಮುದ್ರಣಪ್ರಕಟಣಾದಿಗಳಿಗೆ ಆಧಾರ!!!**

ಇಂತು ಕೃತಜ್ಞ

**ಮೈಸೂರು** — **ಎಂ. ಸಿ ಪದ್ಮನಾಭಶರ್ಮ**

೧೫-೨-೭೪ — ಸಂಪಾದಕ, ಜಿನವಾಣಿ

---

**ಜಿನವಾಣಿ ಸಮಾರಾಧಕರಲ್ಲಿ ಫರಿಕೆ**

ನವನೂತನವಧುವಾಗಿ ಕಂಗೊಳಿಸಿ ಹೃನ್ಮನಗಳನ್ನು ತಣಿಸುವ ಜಿನವಾಣಿಗೆ ೧೦೧ರೂಪಾಯಿಗಳನ್ನಿತ್ತು ಸ್ಥಾಯೀಸದಸ್ಯರಾಗಿರಿ ಶಾಸ್ತ್ರದಾನಪುಣ್ಯಫಲ ಪಡೆಯಿರಿ

ಸಂಪಾದಕ, ಜಿನವಾಣಿ

||ಓಮ್||

|| ಓಮ್ ನಮಸ್ಸಿದ್ಧೇಭ್ಯಃ ||

# ಜಿನವಾಣಿ

# JINAVANI

ಜೈನಸಾಹಿತ್ಯ ಪ್ರಚಾರಸಂಘದ ಮುಖಪತ್ರಿಕೆ

ಜೈನಧಾರ್ಮಿಕ

## ಕನ್ನಡಮಾಸಪತ್ರಿಕೆ

KANNADA MONTHLY MAGAZINE

ಸತ್ವೇಷು ಮೈತ್ರೀಂ ಗುಣಿಷು ಪ್ರಮೋದಂ ಕ್ಲಿಷ್ಟೇಷು ಜೀವೇಷು ಕೃಪಾಪರತ್ವಮ್
ಮಾಧ್ಯಸ್ಥಭಾವಂ ವಿಪರೀತವೃತ್ತೌ ಸದಾ ಮಮಾತ್ಮಾ ವಿದಧಾತು ದೇವ ! ||

—ಅಮಿತಗತಿ

ಎಲೈ ! ದೇವನೇ ! ಪ್ರಾಣಿಗಳಲ್ಲಿ ಸ್ನೇಹವನ್ನೂ, ಗುಣವಂತರಲ್ಲಿ ಸಂತೋಷವನ್ನೂ, ಕಾಯಕ್ಲೇಶ-ಮನಃಕ್ಲೇಶಗಳಲ್ಲಿ ತೊಳಲಾಡುವ ಪ್ರಾಣಿಗಳಲ್ಲಿ ದಯೆಯನ್ನೂ, ಶಾಸ್ತ್ರಾಗಮಾಪ್ತವ್ಯತಿರೇಕಮಾರ್ಗಾಶ್ರಯಿಗಳಲ್ಲಿ ಮಾಧ್ಯಸ್ಥಭಾವನೆಯನ್ನೂ ನನಗೆ ಉಂಟುಮಾಡು.

ಅನುವಾದ— M.P.A. ತಿಲಕ್, M.A., ಮೈಸೂರು.

ಮಂಡಲ ೩೩-೩೪) ಮೈಸೂರು ೧೦ನೆಯ ಜುಲೈ ೧೯೪೪೪ (ಕಿರಣ- ೯
(ಗೊಮ್ಮಟ-ಚಾವುಂಡರಾಯ ಶಕ- ೧೦೦೩)

## ಶ್ರೀ ಋಷಭತೀರ್ಥಂಕರರ ಸ್ತುತಿ

ಸ್ವಯಂಭುವಾ ಭೂತಹಿತೇನ ಭೂತಲೇ
ಸಮಂಜಸಜ್ಞಾನವಿಭೂತಿಚಕ್ಷುಷಾ |
ವಿರಾಜಿತಂ ಯೇನ ವಿಧುನ್ವತಾ ತಮಃ
ಕ್ಷಪಾಕರೇಣೇವ ಗುಣೋತ್ಕರೈಃ ಕರೈಃ ||

—ಸ್ವಾಮಿ ಸಮಂತಭದ್ರರು.

ಸಮ್ಯಗ್ದರ್ಶನ-ಜ್ಞಾನ-ಚಾರಿತ್ರಗಳು ಮೋಕ್ಷಕ್ಕೆ ಹೆದ್ದಾರಿ. ಇದನ್ನು ಪಡೆದವರು ಮುಕ್ತರು, ಕೇವಲಿಗಳು ಎನಿಸಲ್ಪಡುವರು. ಕಾರಣ: ಆತ್ಮದರ್ಶನದಿಂದ ಆತ್ಮಜ್ಞಾನ ಲಭಿಸುತ್ತದೆ. ತನ್ಮೂಲಕ ಶಾಸ್ತ್ರೋಕ್ತವಾದ ಅಂಶಗಳನ್ನು ತನ್ನ ತನ್ನ ನಡವಳಿಕೆಗಳಲ್ಲಿ ಅಳವಡಿಸಿಕೊಳ್ಳುತ್ತಾರೆ. ತೇನ ಕರ್ಮಬಂಧ ಕಳಚಿದಾಗ ಪೊರೆ ಕಳಚಿದ ಹಾವಿನಂತೆ ಶುದ್ಧರಾಗಿ ಜೀವಾತ್ಮರುಗಳು ಮುಕ್ತರಾಗುತ್ತಾರೆ. ಈ ನಿತ ಮುಕ್ತರಿಗೆ ಕರತಲಾಮಲಕದಂತೆ ಅವರ ಜ್ಞಾನ ಚಕ್ಷುಸ್ಸಿಗೆ ಜಗತ್ತಿನ ಸಕಲ ವಿಷಯಗಳೂ ಗೋಷ್ಪದಾಕಾರದಂತೆ ಕಂಗೊಳಿಸುತ್ತವೆ ಇಂಥಹ ಉತ್ತಮ ಸ್ಥಿತಿಯನ್ನು ತನಗೆ ತಾನೆ ಪಡೆದ ಆತ ಸ್ವಯಂಭು ಎನಿಸಿಕೊಳ್ಳುವನು ಇವನ ಅಂತರಂಗ ಬಹಿರಂಗಗಳು ಯಾವಾಗಲೂ ಪ್ರಾಣಿಹಿತಕ್ಕೆ ಮೀಸಲು ಆದ್ದರಿಂದಲೇ ಅವರ ಜ್ಞಾನ ತೇಜಃಪುಂಜ ಚಂದಿಜನು ಕತ್ತಲೆಯನ್ನು ಬಡಿದೋಡಿಸುವಂತೆ ಜೀವಿಜಾತದ ಮೇಲೆ ಭೂತದಂತೆ ಆವರಿಸಿರುವ ಅಜ್ಞಾನಾಂಧಕಾರವನ್ನು ಬಡಿದೋಡಿಸುತ್ತದೆ. ಚಂದಿರನ ಉದಯದಿಂದ ಅಂಧಕಾರ ತೊಲಗಲು ಅವನಿಂದ ಹೊರಹೊಮ್ಮುವ ಬೆಳ್ದಿಂಗಳು ; ಕಾರಣವಾದರೆ ಅಜ್ಞಾನಾಂಧಕಾರವನ್ನು ಹೊರದಬ್ಬಲು ಸುಜ್ಞಾನ ದೀಧಿಯೇಸಾಕು ಇಂತಹ ಅಗಣಿತಗುಣಗರಿಮಶಾಲಿಯಾದ ಈ ಶ್ರೀವೃಷಭನಾಥ ತೀರ್ಥಂಕರನಿಗೆ ತೇ ನಮೋಸ್ತು ನಮೋಃಸ್ತು ತೇ ॥ ! !






# ಚಾತುರ್ಮಾಸ್ಯ ಮಹಾ ಸಂಕಲ್ಪದಲ್ಲಿ।

## ಅಷ್ಟಾಹ್ನಿಕ ಮಹಾಪರ್ವಪೂಜೆಯ ಔಚಿತ್ಯ

### ಚಾತುರ್ಮಾಸ್ಯ ಪರ್ವಕಾಲ ಆಗಿನ ವ್ರತಾಚರಣೆಯ ಮಹತ್ವ

ಆಷಾಢ-ಕಾರ್ತಿಕ-ಫಾಲ್ಗುಣ-ಅಶ್ವಯುಜಮಾಸಗಳಲ್ಲಿರುವಶುಕ್ಲಪಕ್ಷದಲ್ಲಿ ಅಷ್ಟಮಿಯಿಂದ ಪೂರ್ಣಿಮೆಯವರೆಗಿನ ದಿನಗಳು ಅಷ್ಟಾಹ್ನಿಕಪರ್ವ ದಿನಗಳಾಗಿವೆ. ಈ ವರ್ಷವೂ ಎಂದಿನಂತೆ ೬-೭-೮೪ ರಿಂದ ೧೪-೭-೮೪ ರವರೆಗೆ ಮತ್ತೆ ಮುಂದಿನ ನಿಗದಿತ ತಿಂಗ

ಳುಗಳಲ್ಲಿ ಅಷ್ಟಮಿಯಿಂದ ಪೌರ್ಣಮಿ ಪರ್ಯಂತದ ದಿನಗಳು ಮಹಾಪರ್ವದಿನಗಳೆಂದು ಪರಿಗಣಿಸಲ್ಪಟ್ಟಿದೆ.

## ನಂದೀಶ್ವರ ದ್ವೀಪ ಅಲ್ಲಿನ ಅಕೃತ್ರಿಮಚೈತ್ಯಾಲಯ ಈ ಪರ್ವದಲ್ಲಿ ದೇವತೆಗಳಿಂದ ಪೂಜೆ

ಈ ಭರತಖಂಡದಲ್ಲಿ ನಾವು ವಾಸಿಸುವ ಜಂಬೂದ್ವೀಪದಿಂದ ಮುಂದೆ ಇದೇ ನಂದೀಶ್ವರ ದ್ವೀಪವಿದೆ. ಈ ದ್ವೀಪದಲ್ಲಿ ಪ್ರತಿ ದಿಕ್ಕಿನಲ್ಲಿ ಅಕೃತ್ರಿಮ ಜಿನ ಚೈತ್ಯಾಲಯಗಳಿವೆ. ನಾಲ್ಕು ದಿಕ್ಕಿನ ಅಪೇಕ್ಷೆಯಿಂದ ೫೨ ಜಿನಬಿಂಬ-ಚೈತ್ಯಾಲಯಗಳಿವೆ ಅಲ್ಲಿಗೆ ಮಾನವರಿಗೆ ಪ್ರವೇಶ ದುಸ್ಸಾಧ್ಯ. ಪ್ರಕೃತಿಯ ದ್ವೀಪಗಳಲ್ಲಿ ೨॥ ದ್ವೀಪಗಳಲ್ಲಿ ಮಾತ್ರ ಮನುಷ್ಯರ ಉತ್ಪತ್ತಿ ಇರುವುದು. ನಂದೀಶ್ವರ ದ್ವೀಪದಲಿ ಸೌಧರ್ಮಾದಿ ಕಲ್ಪವಾಸಿ ದೇವತೆಗಳು ಆಷಾಢಶುದ್ಧ ಅಷ್ಟಮಿಯಿಂದ ಪೌರ್ಣಮಿಯವರೆವಿಗೆ ಅಷ್ಟದ್ರವ್ಯ ಜಲ-ಗಂಧ-ಅಕ್ಷತೆ-ಪುಷ್ಪ-ನೈವೇದ್ಯ-ಧೂಪ-ದೀಪ ಫಲಗಳಿಂದ ಪೂಜಿಸಿ-ಸ್ತುತಿಸಿ ಮಹಾಪುಣ್ಯವನ್ನು ಗಳಿಸುತ್ತಾನೆ. ಇದಲ್ಲದೆ ಜಂಬೂದ್ವೀಪ ಧಾತಕೀಖಂಡ ಪುಷ್ಕರಾರ್ಧದ ಪಂಚಮೇರುಗಳಲ್ಲಿರುವ, ಸ್ವಾಭಾವಿಕವಾಗಿ ಸ್ವಯಂ ವ್ಯಕ್ತವಾಗಿ, ನಿರ್ಮಿತವಾಗಿರುವ, ಜನಬಿಂಬ ಚೈತ್ಯಾಲಯವನ್ನು ಪೂಜಿಸುತ್ತಾ ಬಂದಿರುತ್ತಾರೆ. ಈ ನಾಲ್ಕು ತಿಂಗಳುಗಳಲ್ಲಿ ಎಂಟೆಂಟು ದಿನ ಇದಕ್ಕೆ ಮೀಸಲಾದ್ದರಿಂದ ಇದಕ್ಕೆ ಅಷ್ಟಾಹ್ನಿಕಪರ್ವವೆಂಬ ಅನ್ವರ್ಥನಾಮ ಬಂದಿದೆ. ಈ ಭಾವನೆಯಿಂದಲೇ ಎಂದರೆ ದೇವತೆಗಳು ಅಕೃತ್ರಿಮ ಚೈತ್ಯ ಜಿನ ಬಿಂಬಗಳನ್ನು ಪೂಜಿಸುವ ದಿನಗಳೆಂದೂ ಆ ದಿನಗಳಲ್ಲಿ ನಾವೂ ಪೂಜಿಸಿದರೆ ಮಹಾಪುಣ್ಯ ಬರುವುದೆಂದೂ ಭಾವಿಸಿ ಗೃಹಸ್ಥರು ಅಷ್ಟ ದ್ರವ್ಯಗಳಿಂದ ಜಿನಬಿಂಬವನ್ನು ಪೂಜಿಸಿ, ಅರ್ಚಿಸಿ, ಸ್ತುತಿಸಿ, ಏಕಭುಕ್ತ ಉಪವಾಸವನ್ನು ಆಚರಿಸುತ್ತಾರೆ.

## ಭರತಖಂಡದಲ್ಲಿ ಮಹಾವ್ರತಾಚರಣೆಯ ಸಂಭ್ರಮ

ಇಡೀ ಭಾರತದಲ್ಲಿರುವ ಜೈನರು ಉತ್ತಮ ರೀತಿಯಲ್ಲಿ ಈ ವ್ರತವನ್ನು ಆಚರಿಸಿ ಶಾಸ್ತ್ರ-ಪಠಣ-ಓದುವಿಕೆ-ಅನ್ನದಾನ ಮುನಿಗಳಿಗೆ ತ್ಯಾಗಿಗಳಿಗೆ ಮಾಡುತ್ತಾ ಈ ಎಂಟು ದಿನಗಳನ್ನು ಉತ್ತಮರೀತಿಯಲ್ಲಿ ಈ ಉತ್ತಮ ಸಮಯವನ್ನು ಕಳೆಯುತ್ತಾರೆ.

ಆಷಾಢಾದಿ ಈ ನಾಲ್ಕು ತಿಂಗಳ ಅಷ್ಟಮಿಯಿಂದ ಪೌರ್ಣಮಿಯವರೆಗೆ ಈ ವ್ರತಾಚರಣೆ ನಡೆಯುತ್ತದೆ. ಈ ಕಾಲದಲ್ಲಿ ವ್ರತನಿಯಮಗಳನ್ನು ಆಚರಿಸಿ ಉತ್ತಮ

ಫಲವನ್ನು ಪಡೆಯುತ್ತಾರೆ ಈ ವ್ರತದಿನ ಎಂಟೆಂಟು ದಿನಗಳಾದ್ದರಿಂದ ಅಷ್ಟಾಹ್ನಿಕ ಪರ್ವವೆಂದು ಇದಕ್ಕೆ ಹೆಸರು ಬಂದಿರುವುದು ಎಲ್ಲರಿಗೂ ತಿಳಿದಿದೆ. ಎಲ್ಲಾ ಭವ್ಯ ಬಾಂಧವರೂ ಆತ್ಮರಕ್ಷಣೆಯ ದೃಷ್ಟಿಯಿಂದ ಈ ಪರ್ವವನ್ನು ಆಚರಿಸಬೇಕಾಗಿ ವಿನಂತಿ.

ಸಂಪಾದಕ, ಜಿನವಾಣಿ

## ನಂದೀಶ್ವರಮಂಗಲಂ

ಜಯಮಂಗಲಂ ನಿತ್ಯಶುಭಮಂಗಲಂ । ಜಯ ಮಹಾನಂದೀಶ್ವರಾದ್ರಿ ಜಿನರಿಗೆ ॥ಪ॥ ಮುದದಿ ಜಿನನಿಲಯ ಅಂಜನಾಲ್ಕರೊಳು ನಾಲ್ಕು । ದಧಿಮುಖಗಳೆರೆಂಟು ನಿಲಯವನಿತೇ ॥ ಅದರಿಂದ ಮುಂದೆ ರತಿಕರಕೆ ಮೂವತ್ತೆರಡು । ಸದನದ್ವಾಪಂಚಾಶನ್ನಿಲಯಗಳಿಗೆ ॥ ಜಯ ಮಂಗಲಂ ॥ ೧ ॥

ಮಣಿಮಾಡಗೋಪುರದ್ವಾರ ಮಾನಸ್ತಂಭ । ಗಣನೆಯಿಲ್ಲದ ಧ್ವಜಾವಳಿ ತೋರಣ ॥ ಘನವೆತ್ತವೈದುವಿಧವಾದ್ಯ ಮಂಗಲದ್ರವ್ಯ । ಮಿನುಗು ನಗೆ ಮಿನುಗುತಿಹ ಜಿನವರರಿಗೆ ॥ ಜಯ ಮಂಗಲಂ ॥ ೨ ॥

ಜನನಾತಿಶಯ ಪತ್ತು ಘಾತಿಕ್ಷಯದಿ ಪತ್ತು । ಅನಿಮಿಷರು ರಚಿತಪದಿನಾಲ್ಕತಿಶಯ ॥ ವಿನುತಾಷ್ಟ ಪ್ರಾತಿಹಾರ್ಯಗಳಿಂದ ರಾಜಿಸುವ ಚಿನುಮಯಾತ್ಮಕ ಚಾರುಚರಣಗಳಿಗೆ ॥ ಜಯ ಮಂಗಲಂ ॥ ೩ ॥

ಇಂದು ರವಿಕೋಟಿಕಿರಣವ ಮಿನುಗುಪ ಜಿನಬಿಂಬ । ಅಂದವಡೆದೈನೂರ ಚಾಪೋನ್ನತ ॥ ಮಂದಿರಕೆ ನೂರೆಂಟು ಇಂತು ಐಪಾಸಿರದ । ಮುಂದೆ ಆರುನೂರು ಈರೆಣ್ಬರರಿಗೆ ॥ ಜಯ ಮಂಗಲಂ ॥ ೪ ॥

ಹರಿಯಾದಿಸರ್ವ ವಾಹನವೇರಿ ನಾಲ್ತೆರದ । ಸುರರು ನಂದೀಶ್ವರ ಮಹಾದ್ವೀಪಕೆ ॥ ವರುಷದಾಷಾಢ ಕಾರ್ತಿಕಸುಫಾಲ್ಗುನಮಾಸ । ವರಶುಕ್ಲಪಕ್ಷದಷ್ಟಮಿಯೊಳೈದಿ ಮುದದಿ ॥ ಜಯ ಮಂಗಲಂ ॥ ೫ ॥

ಗಿರಿವಸತಿ ಜಿನದುಗಳ ತ್ರಿಃ ಪ್ರದಕ್ಷಿಣೆಗೊಂಡು । ಸುರರು ಸ್ತುತಿಯಿಸಿ ಮಣಿದೆಂಟು ದಿವಸ ॥ ಪರಿಪರಿ ಯೊಳರ್ಹತಾಪೂಜೆಗಳನೆಸಗಿ ದುರ್ಧರ । ಮರಿತವಂ ಕಳೆದೆಸೆವ ಅರಹಂತ ಜಿನರಿಗೆ ॥ ಜಯ ಮಂಗಲಂ ॥ ೬ ॥

ಇಳೆಗಧಿಕವಾದ ಶ್ರೀ ಬೆಳುಗೊಳದ್ಧ ಪುರಚೈತ್ಯ ನಿಲಯದೊಳು ನಳಿನ ವಿಸ್ತರದಿ ನೆಲಸಿ || ನಲವಿತ್ತು ಅನ್ನುಗಾಲವಡೆಬಿಡದೆ ಸತ್ಪೂಜೆ | ಗೊಳುವ ಶ್ರೀಮಂದರದ ಜಿನವರರಿಂಗೆ || ಜಯ ಮಂಗಲಂ || ೭ ||

# ಜೈನ ವಿವಿಧ ವಾರ್ತೆಗಳು

## ಮತ್ತು

# ಪ್ರಕಟನ ವಿಮರ್ಶಾದಿಗಳು

## ಪರಮಪೂಜ್ಯ ಹೊಂಬುಜ ಶ್ರೀಶ್ರೀಗಳವರ

# ವಿದೇಶ ಪ್ರವಾಸ

ಶ್ರೀ ಹೊಬುಜ ಜೈನ ಮಠದ ಶ್ರೀ ಪೀಠಾಧ್ಯಕ್ಷರಾಗಿರುವ ಪರಮ ಪೂಜ್ಯ ಸ್ವಸ್ತಿಶ್ರೀ ದೇವೇಂದ್ರಕೀರ್ತಿ ಭಟ್ಟಾರಕ ಪಟ್ಟಾಚಾರ್ಯ ಮಹಾಸ್ವಾಮಿಗಳವರ ಜುಲೈ ತಿಂಗಳ ಅಂತಿಮವಾರದಲ್ಲಿ ಧರ್ಮ ಪ್ರಚಾರಕ್ಕಾಗಿ ವಿದೇಶ ಪ್ರವಾಸವನ್ನು ಕೈ ಗೊಳ್ಳಲಿರವರು.

ಜುಲೈ ತಿಂಗಳ ೨೫ನೇ ತಾರೀಖಿನಂದು ಮುಂಬೈಯಿಂದ ತಮ್ಮ ವಿದೇಶಪ್ರವಾಸ ವನ್ನು ಪ್ರಾರಂಭಿಸಲಿರುವ ಪರಮಪೂಜ್ಯ ಮಹಾಸ್ವಾಮಿಗಳವರು ಇಂಗ್ಲೆಂಡ್, ಅಮೇರಿಕಾ, ಮತ್ತು ಕೆನಡಾ ದೇಶಗಳನ್ನು ಸಂದರ್ಶಿಸಿ ವಿವಿಧ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಆಗಸ್ಟ್ ತಿಂಗಳ ಅಂತ್ಯಕ್ಕೆ ಸ್ವದೇಶಕ್ಕೆ ಹಿಂತಿರುಗುವರು.

ಅಮೇರಿಕಾದಲ್ಲಿ ನೆರವೇರಲಿರುವ ಜಾಗತಿಕ ಸಮ್ಮೇಳನದಲ್ಲಿ ಭಾಗವಹಿಸಿ ನಂತರ ಅಮೇರಿಕಾ, ಕೆನಡಾ ಮತ್ತು ಇಂಗ್ಲೆಂಡ್‌ಗಳಲ್ಲಿ ಇತರ ಹಲವಾರು ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವರು.

ಈಗಾಗಲೇ ಏಳು ಬಾರಿ ವಿದೇಶಕ್ಕೆ ಹೋಗಿ ಧರ್ಮಪ್ರಚಾರ ಮಾಡಿ ಅಪೂರ್ವ ದಾಖಲೆಯನ್ನು ಸ್ಥಾಪಿಸಿರುವ ಪರಮಪೂಜ್ಯ ಮಹಾಸ್ವಾಮಿಗಳವರು ಇದೀಗ ತಮ್ಮ ಎಂಟನೆಯ ವಿದೇಶ ಪ್ರವಾಸವನ್ನು ಕೈಗೊಳ್ಳುತ್ತಿದ್ದಾರೆ. ಜೈನ ಇತಿಹಾಸದಲ್ಲಿ ಪ್ರಪ್ರಥಮಬಾರಿಗೆ ದೇಶದ ಗಡಿ ದಾಟಿ ವಿದೇಶಕ್ಕೆ ಪ್ರಯಾಣಮಾಡಿ ಧರ್ಮಪ್ರಚಾರಮಾಡಿದ ಶ್ರೇಯಸ್ಸು ಪೂಜ್ಯ ಮಹಾಸ್ವಾಮಿಗಳವರದ್ದು.

ಪರಮ ಪೂಜ್ಯ ಮಹಾಸ್ವಾಮಿಗಳವರ ಈ ಎಂಟನೆಯ ವಿದೇಶ ಪ್ರವಾಸವು ಯಶಸ್ವಿಯಾಗಿ ನೆರವೇರಲೆಂದು ಎಲ್ಲರೂ ಭಗವಾನ್ ಶ್ರೀಪಾರ್ಶ್ವನಾಥಸ್ವಾಮಿ ಮತ್ತು ಮಹಾಮಾತೆ ಶ್ರೀಮಹಾದೇವಿ ಸನ್ನಿಧಿಯಲ್ಲಿ ಎಲ್ಲರೂ ಪ್ರಾರ್ಥಿಸೋಣ.

ವ್ಯವಸ್ಥಾಪಕರು
ಶ್ರೀ ಹೊಂಬುಜ ಜೈನಮಠ



ಶ್ರೀಕ್ಷೇತ್ರದಲ್ಲಿ ಶ್ರಾವಣಮಾಸದ

## ಸಂಪತ್ ಶುಕ್ರವಾರ ಪೂಜಾ ಮಹೋತ್ಸವಗಳು

ಆತ್ಮೀಯ ಧರ್ಮಬಂಧುಗಳೇ,

ಶ್ರೀ ಹೊಂಬುಜ ಅತಿಶಯ ಮಹಾಕ್ಷೇತ್ರದಲ್ಲಿ ಶ್ರಾವಣಮಾಸದ ಸಂಪತ್ ಶುಕ್ರವಾರದ ಪೂಜಾಮಹೋತ್ಸವಗಳು ದಿ. ೩-೮-೮೪, ದಿ. ೧೦-೮ ೮೪, ದಿ. ೧೭ ೮ ೮೪ ಮತ್ತು ದಿ. ೨೪-೧-೮೪ ನೇ ಶುಕ್ರವಾರಗಳಂದು ನೆರವೇರಲಿವೆ.

ಈ ದಿನಗಳಲ್ಲಿ ಶ್ರೀಮಹಾಕ್ಷೇತ್ರದಲ್ಲಿ ಶ್ರೀಮಠದ ಪರಮಪೂಜ್ಯ ಸ್ವಸ್ತಿಶ್ರೀ ದೇವೇಂದ್ರಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯ ಮಹಾಸ್ವಾಮಿಗಳವರ ಮತ್ತು ಪೆನೆಗೊಂಡೆ ಶ್ರೀಮಠದ ಪರಮಪೂಜ್ಯ ಸ್ವಸ್ತಿಶ್ರೀ ಲಕ್ಷ್ಮೀಸೇನ ಭಟ್ಟಾರಕ ಪಟ್ಟಾಚಾರ್ಯವರ್ಯ ಮಹಾಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ ಭಗವಾನ್ ಶ್ರೀ ೧೦೦೮ ಪಾರ್ಶ್ವನಾಥಸ್ವಾಮಿ ಮತ್ತು ಶ್ರೀಮಹಾದೇವಿ ಸನ್ನಿಧಿಯಲ್ಲಿ ವಿಶೇಷ ಪೂಜೆ ಪುನಸ್ಕಾರ್ಯಗಳೂ ದಾನಧರ್ಮಾದಿ, ವಿನಿಯೋಗಗಳೂ ನೆರವೇರಲಿದೆ.

ಭಕ್ತಾತಿಗಳೆಲ್ಲರೂ ಈ ಪೂಜಾಮಹೋತ್ಸವಗಳಲ್ಲಿ ಭಾಗವಹಿಸಿ ಭಗವಾನ್ ಶ್ರೀ ೧೦೦೮ ಪಾರ್ಶ್ವನಾಥಸ್ವಾಮಿ ಕೃಪೆಗೂ ಮಹಾಮಾತೆ ಶ್ರೀಪದ್ಮಾವತೀ ಅಮ್ಮನವರ

ಅನುಗ್ರಹಕ್ಕೂ, ಪರಮಪೂಜ್ಯ ಮಹಾಸ್ವಾಮಿಗಳವರ ಶುಭಾಶೀರ್ವಾದಗಳಿಗೂ ಪಾತ್ರ ರಾಗಬೇಕಾಗಿ ಅಪೇಕ್ಷಿಸುತ್ತೇವೆ.

ಇತಿ ತಮ್ಮ ಆಗಮನಾಭಿಲಾಷಿಗಳು,
ವ್ಯವಸ್ಥಾಪಕರು,
ಶ್ರೀ ಹೊಂಬುಜ ಜೈನಮಠ

ವಿ. ಸೂ....ದಕ್ಷಿಣ ಕನ್ನಡ ಜಿಲ್ಲೆಯವರಿಗಾಗಿ ಸೋಣ ಶುಕ್ರವಾರ ಪೂಜೆಗಳು ೨. ೧೭ ೮ ೮೪, ೨೪ ೮ ೮೪, ೩೧ ೮ ೮೪, ೭ ೯ ೮೪ ಮತ್ತು ೨. ೧೪ ೯ ೮೪ ರಂದು ನೆರವೇರಲಿದೆ.



## ಶ್ರೀಕ್ಷೇತ್ರದಲ್ಲಿ ಸಾಮೂಹಿಕ ಧರ್ಮೋಪನಯನ ಮತ್ತು ಶ್ರುತಪಂಚಮಿ ಪೂಜಾಮಹೋತ್ಸವ

ಶ್ರೀ ಹೊಂಬುಜ ಅತಿಶಯ ಮಹಾಕ್ಷೇತ್ರದಲ್ಲಿ ದಿ. ೪ ೬ ೮೪ ರಂದು ಸಾಮೂಹಿಕ ಧರ್ಮೋಪನಯನ ಮತ್ತು ಶ್ರುತಪಂಚಮೀ ಪೂಜಾಮಹೋತ್ಸವಗಳು ಪರಮಪೂಜ್ಯ ಸ್ವಸ್ತಿಶ್ರೀ ದೇವೇಂದ್ರಕೀರ್ತಿ ಭಟ್ಟಾರಕ ಮಹಾಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ ವೈಭವದಿಂದ ನೆರವೇರಿತು.

ತದ್ದಿನ ಮುಂಜಾನೆ ನೆರವೇರಿದ ಸಾಮೂಹಿಕ ಧರ್ಮೋಪನಯನದ ಸಮಾರಂಭ ದಲ್ಲಿ ಇಪ್ಪತ್ತು ಮಂದಿ ಬಾಲಕ ಬಾಲಕಿಯರು ಪರಮಪೂಜ್ಯ ಮಹಾಸ್ವಾಮಿಗಳವರಿಂದ ಅಷ್ಟ ಮೂಲಗುಣ ವ್ರತ ಸ್ವೀಕರಿಸಿ ಶ್ರಾವಕ ಶ್ರಾವಕಿಯರಾದರು.

ಅಂದು ರಾತ್ರಿ ಶ್ರುತಪಂಚಮಿ ಪೂಜಾಮಹೋತ್ಸವವು ವೈಭವದಿಂದ ನೆರವೇರಿ ಸಹಸ್ರಾರು ಭಕ್ತಾದಿಗಳು ಈ ಪೂಜಾಮಹೋತ್ಸವಗಳಲ್ಲಿ ಭಾಗವಹಿಸಿ ಪುಣ್ಯಭಾಗಿ ಗಳಾದರು.

ಈ ಎಲ್ಲಾ ಸಮಾರಂಭಗಳಲ್ಲಿ ಪೆನುಗೊಂಡೆ ಮಠದ ಪರಮಪೂಜ್ಯ ಸ್ವಸ್ತಿಶ್ರೀ ಲಕ್ಷ್ಮೀಸೇನ ಭಟ್ಟಾರಕ ಮಹಾಸ್ವಾಮಿಗಳವರೂ, ಕೊಲ್ಲಾಪುರ, ನಾಂದಣಿ ಮಠ ಗಳ ಪರಮ ಪೂಜ್ಯ ಸ್ವಸ್ತಿಶ್ರೀ ಜಿನಸೇನ ಭಟ್ಟಾರಕ ಮಹಾಸ್ವಾಮಿಗಳವರೂ ಭಾಗ

ವಹಿಸಿದ್ದರು- ಕಾರ್ಯಕ್ರಮಗಳ ಅಂಗವಾಗಿ ವಿಶೇಷ ಪೂಜೆಪುನಸ್ಕಾರಗಳೂ, ಧರ್ಮೋಪದೇಶ ಶಾಸ್ತ್ರದಾನ, ಅನ್ನದಾನ, ಮಹಾಸ್ವಾಮಿಗಳವರ ಪಾದಪೂಜೆಯೇ ಮೊದಲಾದ ಧಾರ್ಮಿಕ ವಿನಿಯೋಗಗಳು ವಿಧಿವತ್ತಾಗಿ ನೆರವೇರಿದುವು,

ವ್ಯವಸ್ಥಾಪಕರು,
ಶ್ರೀ ಹೊಂಬುಜಜೈನಮಠ

---

**ಶ್ರೀ ಹೊಂಬುಜ ಜೈನಮಠದ ಸ್ವರ್ಗೀಯ ಸ್ವಾಮಿಗಳ ತಿಥಿಯಾರಾಧನಾ**

ಶ್ರೀ ಹೊಂಬುಜ ಅತಿಶಯ ಮಹಾಕ್ಷೇತ್ರ ಜೈನ ಮಠದ ಶ್ರೀಪೀಠಾಧ್ಯಕ್ಷರಾಗಿದ್ದ ಪರಮಪೂಜ್ಯ ಜಗದ್ಗುರು ಸ್ವರ್ಗೀಯ ಶ್ರೀಮದ್ದೇವೇಂದ್ರಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯ ಮಹಾಸ್ವಾಮಿಗಳವರ ೧೩ನೇ ವಾರ್ಷಿಕ ಪುಣ್ಯತಿಥಿಯ ಸಂದರ್ಭದಲ್ಲಿ ದಿನಾಂಕ ೪ ೮ ೮೪ ರಂದು ಪೂಜ್ಯ ಅಭಿನವ ಮಹಾಸ್ವಾಮಿಗಳವರ ಆದೇಶದಂತೆ ಶ್ರೀಕ್ಷೇತ್ರದಲ್ಲಿ ವಿಶೇಷ ಪೂಜೆಗಳೂ ದಾನಧರ್ಮಾದಿ ವಿನಿಯೋಗಗಳೂ ಕೋಣಂದೂರು ಸರಕಾರೀ ಆಸ್ಪತ್ರೆಯಲ್ಲಿ ರೋಗಿಗಳಿಗೆ ಹಾಲುಹಣ್ಣುಗಳ ವಿತರಣೆಯು ನೆರವೇರಿತು.

## ಪದುಮಾವತಿ ದೇವಿಯೇ

ರಚನೆ: ಶ್ರೀಮತಿ ಕಮಲ

(ಓ ಸಾಥಿರೇ ಎಂಬಂತೆ)

ಓ ದೇವಿಯೇ ಪದುಮಾವತೀ ದೇವಿಯೇ
ಪದುಮಾವತೀ ದೇವಿಯೇ
ಇಹದಲ್ಲಿ ಪರದಲ್ಲಿ
ಹೊಂಬುಜ ಪುರದಲ್ಲಿ
ನೆಲಸಿದ ನೀ ದೇವಿಯೇ
ಪದುಮಾವತೀ ದೇವಿಯೇ
॥ ಓ ದೇವಿಯೇ ॥

ಪಾರ್ಶ್ವ ಜಿನೇಶನ ಯಕ್ಷಿಯೆ ನೀನು
ನಂಬಿದ ಭಕುತರ ಪಾಲಿಸು ನೀ

ಹೊಂಬುಜ ಅತಿಶಯ ಕ್ಷೇತ್ರದ

ಶ್ರೀಜೈನಮಠದ ಪೀಠಾಧಿಪತಿಗಳಾದ



ಸ್ವಸ್ತಿಶ್ರೀ ಶ್ರೀ ಅಭಿನವದೇವೇಂದ್ರಸ್ವಾಮಿಗಳ

# ಅಷ್ಟಮ ವಿದೇಶ ಪ್ರವಾಸ

# ಶುಬಾಶಂಸನಂ

## ಹುಂಚ, ವಿದ್ಯಾರ್ಥಿನಿಲಯ, ಸ್ವಾಮಿಗಳ ವಿದ್ಯಾಭ್ಯಾಸ ಪ್ರಸಂಗಾತ್ ಕುಂದಕುಂದ ವಿದ್ಯಾಭವನ ಸ್ಥಾಪನ ವಿಚಾರ

ಹಿಂದಿನ ದೇವೇಂದ್ರಕೀರ್ತಿಸ್ವಾಮಿಗಳು ಶಿವಮೊಗ್ಗ ವರ್ಧಮಾನ ವಿದ್ಯಾರ್ಥಿ ನಿಲಯದಲ್ಲಿ ಈಗಿನ ಸ್ವಸ್ತಿಶ್ರೀ ಅಭಿನವ ದೇವೇಂದ್ರಕೀರ್ತಿ ಸ್ವಾಮಿಗಳು ವಿದ್ಯಾರ್ಥಿ ಗಳಾಗಿ ವಾಸಮಾಡುತ್ತಾ ಬಿ.ಎಸ್‌ಸಿ.,ಯಲ್ಲಿ ಉತ್ತೀರ್ಣರಾದರು. ಇವರು ಮೂಲತಃ ಕ್ಷತ್ರಿಯರಾಗಿ ಅರಸು ಮಕ್ಕಳಾಗಿ ಅದರ ಮೇಲೆ ವಿದ್ವಾಂಸರಾಗಿ ವಿಶೇಷ ವಾಗಿ ಸಮಾಜಕ್ಕೆ ತಮ್ಮ ಜೀವನವನ್ನೇ ಮುಡಪಾಗಿಟ್ಟ ಮಹಾತ್ಯಾಗಿಗಳಾದರು. ಇವರ ತ್ಯಾಗಜೀವನವನ್ನು ಕಂಡ ಸಮಾಜ ಅವರನ್ನು ಪ್ರಾರ್ಥಿಸಲಿಕ್ಕಾಗಿ ಸಮಾಜದ ಮಾತನ್ನು ನಿರಾಕರಿಸಲಾಗದೆ ಇದೂ ಒಂದು ಮಹಾಸೇವೆ ಎಂಬ ಭಾವದಿಂದ ಹೊಂಬುಜ ಜೈನ ಮಠದ ಪೀಠವನ್ನು ಅಧಿರೋಹಿಸಿ ವಿರಾಜಮಾನರಾದರು.

ಈ ಕ್ಷೇತ್ರ ಹಿಂದೊಮ್ಮೆ ವಿದ್ಯಾನಂದರು ವಾದೀಭಸಿಂಹಸೂರಿಗಳು ಇವರೇ ಮೊದಲಾದ ಮಹಾತ್ಯಾಗಿ ವಿದ್ವಾಂಸರ ನೆಲವೀಡಾಗಿದ್ದುದನ್ನು ಸ್ಮರಿಸಿ ಈ ಪುಣ್ಯ ಕ್ಷೇತ್ರದಲ್ಲಿ ನೆಲೆನಿಂತು ಪದ್ಮಾಂಭಾ ಸೇವಾಪರರಾಗಿ ಜೈನತೀರ್ಥಂಕರರ ಮಹಾ ಸಾನ್ನಿಧ್ಯದಲ್ಲಿ ಜಿನವಾಣಿಯನ್ನು ಬೆಳಗಿಸಲು ಟೊಂಕಕಟ್ಟಿ ಆ ಸಾಧನೆಗೆ ಹಗಲಿ ರುಳೆನ್ನದೆ ಕೈಂಕರ್ಯಪರರಾದರು.

ಇದೇ ಉದಾತ್ತಭಾವನೆಯಿಂದ ಸಮಾಜದಲ್ಲಿ ಸಮಗ್ರ ಭರತಖಂಡದಲ್ಲಿ ಜೈನ ಧರ್ಮದ ವೈಶಿಷ್ಟ್ಯವನ್ನು ಪ್ರಕಾಶಪಡಿಸಲು ಪಣತೊಟ್ಟ ಹಿಂದಿನ ಸ್ವಾಮಿಗಳವರೂ ಕೂಡ ವೈನಾಡಿನ ಶ್ರೀ ಎಂ. ಕೆ. ಜಿನಚಂದ್ರರವರ ಸಹಕಾರದಿಂದ ಸರಸ್ವತೀ ವರಪುತ್ರ ರಾದ ಶ್ರೀ ಕುಂದಕುಂದ ಮಹಾತ್ಯಾಗಿ ವಿದ್ವಾಂಸರ ದಿವ್ಯನಾಮಧೇಯದಲ್ಲಿ ವಿದ್ಯಾ ಭವನವನ್ನು ನಿರ್ಮಾಣಮಾಡಿಸಿ ಅವರ ಕೀರ್ತಿ ಆಚಂದ್ರಾರ್ಕವಾಗಿ ಉಳಿಯುವಂತೆ ಮಾಡಿದರು. ಅವರ ಉದ್ದೇಶ್ಯ ಆ ಮಹಾಪುರುಷರಾದ ಕುಂದಕುಂದರ ನಾಮ ಸ್ಮರಣ ಚರಿತ್ರೆ ಅವರ ವಿದ್ವತ್ತು ಇವುಗಳನ್ನಾದರೂ ಸ್ಮರಿಸಿ ತಾವೂ ಜೈನ ತತ್ವವೇತ್ತ ಗಳಾಗಲು ಶ್ರಮಿಸಿ ತಮ್ಮ ಪೀಳಿಗೆಯೂ ಹಾಗಾಗಲೆಂಬುದೇ ಆಗಿತ್ತು.

## ಈಗಿನ ಅಭಿನವ ದೇವೇಂದ್ರಕೀರ್ತಿಸ್ವಾಮಿಗಳು ಮತ್ತವರ ಉದಾತ್ತ ಸಮಾಜ-ವಿದ್ಯಾಭಿವೃದ್ಧಿ ಕಾರ್ಯಾದಿಗಳು

ಪ್ರಕೃತ ಪೀಠಾಧಿಪತಿಗಳಾದ ಸ್ವಸ್ತಿಶ್ರೀ ಅಭಿನವ ದೇವೇಂದ್ರಕೀರ್ತಿ ಸ್ವಾಮಿ ಗಳವರ ನೇತೃತ್ವದಲ್ಲಿ ಈ ಮಹಾಸಂಸ್ಥೆಯು ಉತ್ತಮ ರೀತಿಯಲ್ಲಿ ನಡೆಯುತ್ತಾ ಬಂದಿರುತ್ತದೆ ಪೂಜ್ಯ ಸ್ವಸ್ತಿಶ್ರೀ ಶ್ರೀ ಅವರು ಮದ್ರಾಸ್ ಯುನಿವರ್ಸಿಟಿಯು

ಎಂ.ಎ., ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಹಾಲಿ ಡಾಕ್ಟರೇಟ್ ಥೀಸಿಸ್ ಸಿದ್ಧಗೊಳಿಸು ತ್ತಿರುವಾಗಲೇ ತಮ್ಮ ಈ ಅಲ್ಪಕಾಲದಲ್ಲಿ ೭ನೆಯ ಬಾರಿ ಜಿನಧರ್ಮ ಪ್ರಭಾವನೆಗಾಗಿ ವಿದೇಶಿಯರಿಂದ ಆಹ್ವಾನಿತರಾಗಿ ಅಮೇರಿಕಾ, ಕೆನಡಾ ಮೊದಲಾದ ಪಶ್ಚಿಮ ದೇಶ ಗಳಲ್ಲಿ ಯಾತ್ರೆಮಾಡಲಿರುವರು. ಇವರು ತಮ್ಮ ಚಿಕ್ಕವಯಸ್ಸಿನಲ್ಲಿಯೇ ಜ್ಞಾನಾರ್ಜನೆ ಮಾಡುತ್ತಾ ಧರ್ಮ ಪ್ರಚಾರಕ್ಕಾಗಿ ವಿದೇಶ ಪ್ರವಾಸಮಾಡುತ್ತಾ ಇದ್ದಾರೆ. ಇವು ಗಳೆಲ್ಲವು ಅವರ ಆದರ್ಶಕಾರ್ಯಗಳಾಗಿವೆ. ಅವರ ಸುಖ ಪ್ರಯಾಣವಾಗಿ ಜಗತ್ತಿನ ಪ್ರಾಣಿಗಳಿಗೆ ಜಿನಧರ್ಮದಲ್ಲಿ ಅಭಿಮಾನ ಆ ಧರ್ಮಾಚರಣೆಯಲ್ಲಿ ಆಸಕ್ತಿ ಮುಂತಾ ದುವುಗಳು ಬೆಳೆಯಲಿ ಮತ್ತೆ ಅವರು ಸುಖವಾಗಿ ಪ್ರಯಾಣಮಾಡಿ ಜಗದ್ವಿಖ್ಯಾತ ಕೀರ್ತಿಯೊಡನೆ ಹಿಂತಿರುಗಿ ನಮ್ಮೆಲ್ಲರ ಶ್ರೇಯಸ್ಸಿಗಾಗಿ ಲೋಕಕಲ್ಯಾಣಕ್ಕಾಗಿ ಇತೋಪ್ಯತಿಶಯುವಾದ ಮಹಾ ಮಹಾಕಾರ್ಯಗಳನ್ನು ನಡೆಸಲಿ! ಅವರ ಕಾರ್ಯಶಕ್ತಿ-ಧೀಶಕ್ತಿ-ಆತ್ಮಶಕ್ತಿಗಳು ಬೆಳಗಲಿ ! ಜಿನಧರ್ಮ ಪ್ರಭಾವನೆಯಾಗಲಿ ! ಎಂದು ಅನ ವರತವೂ ದಯಾಮಯನಾದ ಪಾರ್ಶ್ವನಾಥ ಸ್ವಾಮಿಗಳಲ್ಲಿ ಮತ್ತೆ ಪದ್ಮಾವತೀ ಧರಣೇಂದ್ರರುಗಳಲ್ಲಿ ಪ್ರಾರ್ಥಿಸುತ್ತಿರುವ,

ಎಂ. ಸಿ. ಪದ್ಮನಾಭಶರ್ಮ

---

(ಎಂಟನೆ ಪುಟದಿಂದ)

ನೀವಿಲ್ಲದೇ ನಾವು ಬದುಕಿಲ್ಲ
ಎನುವೆವು
ನಿಮ್ಮಯ ದರುಶನಕೆಂದೇ
ನಿಮ್ಮನೆ ನಂಬಿ ಬಂದೇ
ನಿಮ್ಮನೆ ನಂಬೀ ಬಂದೆ
॥ ಓ ದೇವಿಯೇ ॥

ಲಕ್ಮಿಯ ಮರವು ಮುತ್ತಿನ
ಕೊಳವು
ನಿಮ್ಮಯ ಮಹಿಮೆಯ
ಸಾರುವುದು
ನಿಮ್ಮಯ ಧ್ಯಾನವ
ನಾನೆಂದು ಬಿಡೇನು
ನಿಮ್ಮನೇ ಭಜಿಸೀ ನಿಂದೇ
ನಿಮ್ಮನೆ ನಂಬೀ ಬಂದೇ
ನಿಮ್ಮನೆ ನಂಬೀ ಬಂದೆ
॥ ಓ ದೇವಿಯೇ ॥

# ಶ್ರೀಶುಭಚಂದ್ರಾಚಾರ್ಯವಿರಚಿತಃ

# ಜ್ಞಾ ನಾ ರ್ಣ ವಃ

(ಭಾವತಲಸ್ಪರ್ಶಿನ್ಯಾಖ್ಯಕರ್ಣಾಟಕಭಾಷಾನುವಾದಯುತಃ)

(ಕಳೆದ ಸಂಚಿಕೆಯಿಂದ ಮುಂದುವರೆದುದು)

ಇಲ್ಲಿಯುವರೆವಿಗೆ— ಮನಶ್ಶಕ್ತಿಯ ಹಿರಿಮೆ, ಅದರ ಸಾರ್ಥಕೀಕರಣದಲ್ಲಿ ಮಾನವಕರ್ತವ್ಯ, ಯೋಗದರ್ಶನದ ವೈವಿಧ್ಯತೆ, ಜೈನ-ವೈದಿಕ- ಯೋಗಗಳ ಸಾಮರಸ್ಯ, ಯೋಗಮಾರ್ಗದಲ್ಲಿ ಜೈನ-ಜೈನೇತರರ ಸಾಮ್ಯ ವೈಷಮ್ಯಗಳು, ಜೈನರ ಅಸಂದೃಷ್ಟಿ, ವೈದಿಕರ ಅಷ್ಟಾಂಗಯೋಗ, ಜೈನ ಯೋಗಪ್ರತಿಪಾದನೆಯಲ್ಲಿ ಜ್ಞಾನಾರ್ಣವದ ಸ್ಥಾನ, ಶ್ರುತಸಮನ್ವಯದ ದಾರಿಯಲ್ಲಿ ವ್ಯಾಖ್ಯಾ ರಚನಾಕೌತುಕ, ಯೋಗಶಬ್ದಾರ್ಥ, ಅಲ್ಲಿ ಮನಸ್ಸಿನ ಸ್ಥಾನ, ವೈದಿಕದರ್ಶನದಲ್ಲಿ ಯೋಗಶಬ್ದಾರ್ಥ- ಪಾತಂಜಲ ಯೋಗಸ್ಥಾನಗಳಾದ ಯಮ-ನಿಯಮಾದಿಗಳ ಸ್ವರೂಪವಿವೇಚನಂ, ಮತಾ ನ್ತರದಲ್ಲಿ ಯಮನಿಯಮಗಳಂ ಬಿಟ್ಟು ಷಟ್-ಯೋಗಸ್ಥಾನಗಳ ವಿವೇಚನೆ, ಇದಲ್ಲದೆ ಉತ್ಸಾಹಾದಿಗಳಿಂದ ಯೋಗಸಿದ್ಧಿಯ ದಾರಿಯ ವಿವೇಚನೆಯಲ್ಲಿ ಉತ್ಸಾಹ-ನಿಶ್ಚಯಾದಿಗಳ ಪಾತ್ರ, ಯಮ-ನಿಯಮಾದ್ಯಭ್ಯಾಸದಿಂದ ಒದಗುವ ಮನೋವಶ್ಯತೆ, ಮುಕ್ತಿಬೀಜಕಾಣೀಭೂತಾಷ್ಟಾಂಗ,ಉಕ್ತಾರ್ಥೇ ಪ್ರಮಾಣ, ಚಿತ್ತರೋಧವಿಲ್ಲದ ಇಂದ್ರಿಯಸ್ತಂಭನದ ಹಾಸ್ಯಪರತೆ, ಮನಃ ಕಲಂಕವಿಲಯದಿಂಲೇ ಸ್ವಾರ್ಥಸಿದ್ಧಿ, ನಿರ್ಣಾಯಕವಾಕ್ಯ, ಮನಃಕಲಂಕ ವಿಲಯದಿಂದೊದಗುವ ಆತ್ಯಂತಿಕಫಲ, ಆಚಾರ್ಯರ ಕಿವಿಮಾತು,ಪ್ರಸಂಗಾತ್ ಮೂಢಾದ್ಯವಸ್ಥಾವರ್ಣನ ಮನಃಕಲಂಕನಿವಾರಣಫಲವಾದ ಆತ್ಮಸುಖದ ಹಿರಿಮೆ, ಶರೀರಾತ್ಮಭಾವವನ್ನು ತಿಳಿದವನಿಂದಾಗುವ ಮನೋನಿಗ್ರಹ, ಮನಶ್ಶುದ್ಧಿಹೀನವಾದ ಇಂದ್ರಿಯೋಪರೋಧದ ವ್ಯರ್ಥತೆ, ಧ್ಯಾನಶ್ಶುದ್ಧಿ ಯಿಂದಲೇ ಮನಶ್ಶುದ್ಧಿ, ಧ್ಯಾನಶುದ್ಧಿ-ಮನಶ್ಶುದ್ಧಿಗಳಿಂದ ಆತ್ಮಸ್ವರೂಪ ದೃಢಜ್ಞಾನ, ನಿಸ್ಸಂಗಿ-ಮುನಿಗೆ ಒಲಿಯುವ ಮುಕ್ತಿಕಾಂತೆ, ಮನಶ್ಶುದ್ಧಿ ಯಿಂದಲೇ ಕ್ರಮವಾಗಿ ಪ್ರಾಪ್ತವಾಗುವ ವಿವೇಕಶ್ರೀ ನೀಗಲಾಗದ ಚಿತ್ತ ಶುದ್ಧಿಹೀನನ ಆತ್ಮಜ್ಞಾನಪಿಪಾಸೆ, ಧ್ಯಾನ-ಧ್ಯೇಯ-ತತ್ವಗಳ ಮೂಲವೇ ಮನ, ವಿಷಯವ್ಯಾಮೋಹಿಯಾದ ಮನ, ಎಲ್ಲೆ ಮೀರುವ ಮೊದಲೇ ಮತ್ತೆ ಚಿತ್ತ ಗಜದ ಮರ್ದನಾವಶ್ಯಕತೆ, ವಿಷಯಗಹನಾರಣ್ಯದಲ್ಲಿ ಅಡ್ಡಾ ಡುವ ಚಪಲಮನದ ಸಂರೋಧನಾವಶ್ಯಕತೆ, ಮನವ ಜಯಿಸದವನು ಯೋಗವಾರ್ತೆಯ ಲಜ್ಜಾವಹಸ್ಥಿತಿ, ಮುನಿಗಳಿಗೂ ಕೈಗೆಟುಕಲಾಗದ ಮನಸ್ಸಂರೋಧಿಗಳ ಫಲರೂಢಣೆ, ನಾನಾಜನ್ಮಗಳಿಂದ ಅಂಟಿದ ಕರ್ಮ ಬಂಧವಿಮೋಚನೆಗೆ ಭಾವಶುದ್ಧಿಯ ಕಾರಣ ಮನಃ ಪ್ರಗ್ರಹವಂತನಿಗೆ ಕಾಯದಂಡನೆಯ ಅನಾವಶ್ಯಕತೆ ಇಂತಿಷ್ಟು ತಿಳಿದಾಯ್ತು ಮುಂದೆಓದಿ

+ಭಗವಾನ್ ಶ್ರೀರಾಮಾನುಜರೂ ಕೂಡ- ಇದೇ ಗೀತಾಭಾಷ್ಯದ ಈ ಘಟ್ಟದಲ್ಲಿ-

ಪರಮಾತ್ಮನಲ್ಲಿ ಮನವನ್ನು ನೆಟ್ಟವನೂ ಕೂಡ ಪ್ರಯತ್ನದಿಂದ ಇಂದ್ರಿಯಗಳನ್ನು ಜಯಿಸಹೊರಟಾಗ ಆ ಮನ ಮತ್ತೊಂದೆಡೆ ಹೊರಳಿದ ಸಂದರ್ಭದಲ್ಲಿ ಆತ ನಾಶಹೊಂದುತ್ತಾನೆ.; ಎಂದುಸುರಿದ್ದಾರೆ. ಅದಾಗಿ:

ವಿಷಯವಸ್ತುಗಳಲ್ಲಿ ಅನುರಾಗವನ್ನೇ ಇಡದೆ ಪರಮಾತ್ಮನಲ್ಲಿ ಮನವನ್ನು ನೆಲೆಗೊಳಿಸದೆ ಇಂದ್ರಿಯಗಳನ್ನು ತಡೆಹಿಡಿದಿದ್ದರೂ ಕೂಡ ಸಾಧನೆಯಲ್ಲಿ ವ್ಯವಸ್ಥಿತ ಮನಸ್ಕನಲ್ಲದವನಿಗೂ ಕೂಡ ಅನಾದಿಯಾದ ಪಾಪವಾಸನೆಯಿಂದ ವಿಷಯಧ್ಯಾನ ಅವರ್ಜನೀಯವಾದೀತು. ಆಗಲೀಗ ಆ ಧ್ಯಾನದಿಂದ ಪುನಃ ಸಂಗ ಅತಿ ಪ್ರವೃದ್ಧವಾಗಿ ಇದರಿಂದ ಈ ಸಂಗದ ವಿಪಾಕದೆಶೆ ತನ್ನ ಕೈವಾಡವನ್ನು ತೋರಿಸುತ್ತಾ- ಕ್ರೋಧ ಮೂಲವಾಗುತ್ತದೆ. ಈ ಕ್ರೋಧ ವಿಷಯವಸ್ತ್ವಾಕಾಂಕ್ಷೆಯೊತ್ತಟ್ಟಿಗಿರಲ ಹತ್ತಿರದ ಜನರ ಮೇಲೆ ಈ ನನಗೆ ಬೇಕಾದಂತಹ ವಸ್ತುವಿಷಯಗಳೂ ಹಾಳು ಮಾಡಲ್ಪಟ್ಟವೆಂದು ಅವನ ಕೋಪದ ಬಗ್ಗೆ ಭುಗಿಲೇಳುತ್ತದೆ. ಈ ಕ್ರೋಧದಿಂದ ಸಂಮೋಹವೂ ಅದರಿಂದ ಕೃತ್ಯಾಕೃತ್ಯವಿವೇಕಶೂನ್ಯತೆಯೂ ಉಂಟಾಗುತ್ತದೆ. ನಂತರದ ಸ್ಮೃತಿಭ್ರಂಶ ಬುದ್ಧಿನಾಶಹೇತು. ಬುದ್ಧಿನಾಶವು ಆತ್ಮಜ್ಞಾನದ ತಿಳುವಳಿಕೆಯಲ್ಲಿ ಯಾವ ಯಾವ ವ್ಯವಸಾಯ ಮಾಡಲ್ಪಟ್ಟದೆಯೋ ಅವುಗಳೆಲ್ಲದರ ನಾಶಕ್ಕೆ ಮೂಲ. ನಂತರ ಪುರುಷ ಸಂಸಾರದಲ್ಲಿ ತೊಳಲಾಡಿ, ಮುಳುಗಿ, ತೇಲಾಡಲಸಮರ್ಥನಾಗಿ ನಾಶಹೊಂದುತ್ತಾನೆ.

ಶ್ರೀಮಧಾನಂದತೀರ್ಥಭಗವತ್ಪಾದರೂ ಕೂಡ- ರಾಗದ್ವೇಷಾದಿಗಳ ಪರಿಹಾರಕ್ಕಾಗಿ ಅವುಗಳ ಮೂಲಕಾರಣವನ್ನು ಈ ಗೀತಾಭಾಗ ವಿವರಿಸುತ್ತದೆ- ಕಾಮಾದಿಗಳಿಂದ ಕ್ರಮವಾಗಿ ಸಂಮೋಹವುಂಟಾಗುತ್ತದೆ. ಸಂಮೋಹವೆಂದರೆ- ಅಧರ್ಮಕಾಮಿತೆ. + + + ಬುದ್ಧಿನಾಶದಿಂದ ನರಕಾದ್ಯನರ್ಥಗಳನ್ನು ಜೀವಿ ಹೊಂದುತ್ತಾನೆ; ಎಂದು

ಆದ್ದರಿಂದ ವಿಷಯಃವಸ್ತುಗಳತ್ತ ಮನದ ಚಲನೆಗೆ ಅವಕಾಶವೀಯಬಾರದೆಂದು ಭಾವ. +

---

+ ಮತತ್ರಯ ಗೀತಾಭಾಷ್ಯಂ- ಪ್ರಕಾ. ಆನಂದ ಮುದ್ರಶಾಲಾ, ಮದ್ರಾಸ್- ಪ್ರಥಮಷಟ್ಕ- ಪುಟ- ೧೬೬ ರಿಂದ ೧೬೮.

ಅವಾರ್ಯವಿಕ್ರಮಸ್ಸೋಽಯಂ ಚಿತ್ತದಂತಿ ನಿವಾರ್ಯತಾಮ್ ।
ನ ಯಾವದ್ಧಿಂಸಯತ್ಯೇಷ ಸತ್ಸಂಯಮನಿಕೇತನಮ್ ॥ ೨೨ ॥

* ವಿಭ್ರಮದ್ವಿಷಯಾರಣ್ಯೇ ಚಲಚ್ಚೇತೋ ವಲೀಮುಖಃ ।
ಯೇನ ರುದ್ಧೋ ಧ್ರುವಂ ಸಿದ್ಧಂ ಫಲಂ ತಸ್ಯೈವ ವಾಂಛಿತಮ್ ॥

---

ವಿಪರೀತ ವೃತ್ತಿಯಲ್ಲಿ ಮುನ್ನೆಡದ ಮನ ಈ ಜೀವಿಯನ್ನು ಪೀಡಿಸುವುದಕೆ ಮುನ್ನವೇ ಎಚ್ಚತ್ತುಕೊಳ್ಳುವುದು ಮೇಲೆಂಬುದನ್ನು ಈ ಮುಂದಿನ ಕಾರಿಕೆಯಿಂದ ಶ್ರೀ ಶುಭಚಂದ್ರರಿಂತು ಮನಮುಟ್ಟುವಂತೆ ಬಣ್ಣಿಸುತ್ತಾರೆ–

"ಅವಾರ್ಯವಿಕ್ರಮಃ" ಇತ್ಯಾದಿಯಾಗಿ. ಮನಶ್ಶಕ್ತಿ ವಾಯುವಿನ ಶಕ್ತಿಗಿಂತಲೂ ಮಿಗಿಲಾದುದು. ವಾಯುವು ಒಂದು ನಿಮಿಷದಲ್ಲಿ ಮಾಡುವ ಅನರ್ಥವನ್ನು ಮನ ಒಂದು ಸೆಕೆಂಡಿನಲ್ಲಿ ಮಾಡಬಲ್ಲದು ವಾಯುವಿನಿಂದಾಗುವ ಅನರ್ಥ ಪ್ರಕೃತಿ ಪ್ರಾಣಾಪಿ. ಮನದಿಂದಾಗುವ ಅನರ್ಥ ಶರೀರದ್ವಾರಾ ಆತ್ಮನ ಮೇಲೆ ಆದ್ದರಿಂದ ಇದ ಪರಾಕ್ರಮಕ್ಕೆ ತಡೆಯೇ ಇಲ್ಲ. ಇದೊಂದು ಮದಿಸಿದ ಸಲಗನಂತೆ ಈ ಮತ್ತ ಗಜ ಆತ್ಮಸಂಯಮಕ್ಕೆ ತೌರೂರಾದ ಆತ್ಮನನ್ನೇ ಹಿಂಸಿಸಲ್ಕ ಹವಣಿಸುತ್ತದೆ ಈ ಹವಣಿಕೆ ಕಾರ್ಯರೂಪಕ್ಕೆ ಬರುವ ಮುನ್ನವೇ ಅದರ ದುರಾಕ್ರಮಣಕ್ಕೆ ತಡೆಯೊಡ್ಡಬೇಕಾದುದು ವಿವೇಕಿಯ ಕೆಲಸ. ಆದ್ದರಿಂದ ಪ್ರತಿ ಮಾನವ ತನ್ನ ಮನ ದುರ್ವೃತ್ತದಲ್ಲಿ ತೊಡಗಿ ಉಚ್ಛೃಂಖಲವಾಗಿ ನಡೆದು ಸ್ವಾತ್ಮಪೀಡೆಯನ್ನು ಮಾಡಲು ಉಜ್ಜುಗಿಸುವ ಮೊದಲೇ ಅದನ್ನು ಹಡ್ಡು ಬಸ್ತಿನಲ್ಲಿಡಬೇಕೆಂಬುದು ಆಚಾರ್ಯರ ಹಿತೋಕ್ತಿಯಾಗಿದೆ. ॥೨೨॥

ಚಂಚಲವಾದ ಚಿತ್ತವನ್ನು ನಿರೋಧಿಸಿ ಆತ್ಮಮಂಗಳದತ್ತ ಅದನ್ನು ಹೊರಳಿಸುವುದರಿಂದ ಆಗುವ ಸತ್ಪರಿಣಾಮವನ್ನಿಂತು ಆಚಾರ್ಯ ಶ್ರೀ ಶುಭಚಂದ್ರರು ವರ್ಣಿಸುತ್ತಾರೆ–

"ವಿಭ್ರಮದ್ವಿಷಯಾರಣ್ಯೆ"–ಇತ್ಯಾದಿಯಾಗಿ. ಯಾವ ಚೇತನನೇ ಆಗಲಿ ಆತನಿಗೊದಗುವ ಸಹವಾಸಾನುಗುಣವಾದ ವೃತ್ತಿಯನ್ನು ಆತನು ಆಶ್ರಯಿಸು

---

* ಪತಂಜಲಿಗಳೂ ಕೂಡ–

"ವಿಷಯವತೀ ವಾ ಪ್ರವೃತ್ತಿರುತ್ಪನ್ನಾ ಮನಸಃ ಸ್ಥಿತಿನಿಬಂಧಿನೀ".
(ಪಾತಂಜಲಯೋಗ ಸೂತ್ರ–ಸಮಾಧಿಪಾದ, ಸೂತ್ರ–೩೫)

ಚಿತ್ತಮೇಕಂ ನ ಶಕ್ನೋತಿ ಜೇತುಂ ಸ್ವಾತನ್ತ್ರ್ಯವರ್ತಿ ಯಃ ।
ಧ್ಯಾನವಾರ್ತಾಂ ಬ್ರುವನ್ ಮೂಢಃ ಸ ಕಿಂ ಲೋಕೇ ನ ಲಜ್ಜತೇ ॥೨೪॥

---

ವುದನ್ನು ಈ ಲೋಕದಲ್ಲಿ ನಾವು ಕಾಣುವುದು ಸರ್ವವಿದಿತವೇ ಆಗಿದೆ. ಈ ಬಗೆಯಲ್ಲಿ ನಾವು ವಿಚಾರಿಸಿದಾಗ ಚಿತ್ತವು ವಿಷಯ ವಸ್ತುಗಳೆಂಬ ಗಾಢಾವಾದ ಕಾಡಿನಲ್ಲಿ ಸುತ್ತುತ್ತದೆ ಆದರಿಂದಲೇ ಆ ಮನವು ಚಂಚಲವೆಂಬುದು ಸರ್ವಸಂಪ್ರತಿಪನ್ನ. ಅದರ ವೃತ್ತಿಯೋ ಮಧುಪಾನಮತ್ತವಾದ ಕಪಿಯಂತೆ. ಅದುರಿಂದಲೇ ಅದು ಒಂದೆಡೆ ನಿಲ್ಲದೆ ವಿಷಯವಸ್ತುಗಳೆತ್ತೆತ್ತ ಚಲಿಸುವುವೋ ಆಗ ಅತ್ತತ್ತ ಮುಂದುವರಿಯುತ್ತದೆ. ಇದರಿಂದ ಆಗುವ ಅನರ್ಥಬಹುಮುಖ. ಇದನ್ನು ತಡೆಗಟ್ಟಲು ಚೇತನ ಪ್ರಯತ್ನಿಸಬೇಕು. ಆ ಪ್ರಯತ್ನ ಫಲಿಸಿದಾಗ ಅವನವನ ಇಷ್ಟಾರ್ಥ ನೆರವೇರುತ್ತದೆ. ॥೨೩॥

ಚಿತ್ತವನ್ನು ಜಯಿಸಲಾರದವನ ಲಜ್ಜಾವಹ ಸ್ಥಿತಿಯನ್ನು ಈ ಮುಂದಿನ ಕಾರಿಕೆಯಲ್ಲಿ ಶ್ರೀ ಶುಭಚಂದ್ರರಿಂತು ಬಣ್ಣಿಸುತ್ತಾರೆ-

"ಚಿತ್ತಮೇಕಂ" ಇತ್ಯಾದಿಯಾಗಿ ಚಿತ್ತ ಸ್ವತಂತ್ರವಾದ ನಡವಳಿಕೆಯುಳ್ಳದ್ದು ಆದರದು ಏಕಾಂಗಿ. ಇಂತಹ ಚಿತ್ತವನ್ನು ಚೈತನ್ಯಯುಕ್ತನಾದ ಮಾನವ ಜಯಿಸಲೆ ಸಾಧ್ಯವಿಲ್ಲದಿದ್ದಲ್ಲಿ ಆತನಿಗೆ ಆತ್ಮಧ್ಯಾನವಿಚಾರ ವಿಮರ್ಶೆ ಮಾಡುವ ಅರ್ಹತೆಯೆ ಉಳಿಯಲಾರದು. ಹಾಗೊಂದುವೇಳೆ ಆತ ಆ ವಿಷಯವಾದ ಉಪನ್ಯಾಸಮಾಡವುದಾದಲ್ಲಿ ಆತನ ಆ ವ್ಯವಸಾಯ "ಪರೋಪದೇಶೇ ಪಾಂಡಿತ್ಯಂ''...ಎಂದರೆ- ಅನ್ನುಷ್ಠಾನದಲ್ಲಿ ಅಳವಡಿಸಲಾರದ ವಿದ್ಯಾವಂತ ತನ್ನ ಪಾಂಡಿತ್ಯವನ್ನು ಪರೋಪದೇಶದಲ್ಲಿ ಚುರುಕಾಗಿ ತೋರಿಸುತ್ತಾನೆ; ಎಂಬಂತೆ ಮನೋನಿಗ್ರಹವಿಲ್ಲದವನು ಧ್ಯಾನೋಪದೇಶದಲ್ಲಿ ಹಾಸ್ಯಾಸ್ಪದನಾದಾನು ! ಈತ ಪಂಡಿತನಾದರೂ ಮಂದಮತಿಯೇ ಸರಿ ! ಆತನು ತನ್ನಅನುಷ್ಠಾನದಲ್ಲಿಲ್ಲದುದನ್ನು ಉಪದೇಶಮಾಡುವುದಕ್ಕೆ ಹಿಂಜರಿಯಲಾರನಾದುದರಿಂದ ಅವನು ನಿರ್ಲಜ್ಜನೆನ್ನಲಡ್ಡಿಯಿಲ್ಲ. ಆದ್ದರಿಂದ ಪ್ರತಿ ಜೀವಿಯೂ

---

ವೈಷಯಿಕವಾದ ಮಾನಸಿಕ ಪ್ರವೃತ್ತಿಯು ಉದಯಿಸಿದಾಗ ಅದು ಮನಸ್ಥಿತಿಯನ್ನು ಪೀಡಿಸುತ್ತದೆ: ಅಪಮಾರ್ಗಕ್ಕೊಯ್ಯುತ್ತದೆ. ಆದ್ದರಿಂದ ಮಾನವ ಚಿತ್ತರೋಧವನ್ನು ಮಾಡಿ ಅದನ್ನು ಸ್ವವಶದಲ್ಲಿಟ್ಟುಕೊಳ್ಳಬೇಕು ಎಂದು ವಿವರಿಸಿದ್ದಾರೆ.

* ಯದಸಾಧ್ಯಂ ತಪೋನಿಷ್ಠೈಃ ಮುನಿಭಿರ್ವೀತಮತ್ಸರೈಃ ।
ತತ್ಪದಂ ಪ್ರಾಪ್ಯತೇ ಧೀರೈಃ ಚಿತ್ತಪ್ರಸರಬನ್ಧಕೈಃ ॥ ೨೫ ॥

ಅನನ್ತಜನ್ಮಜಾನೇಕಕರ್ಮಬನ್ಧಸ್ಥಿತಿರ್ದೃಢಾ ।
ಭಾವಶುದ್ಧಿಃ ಪ್ರಪನ್ನಸ್ಯ ಮುನೇಃ ಪ್ರಕ್ಷೀಯತೇ ಕ್ಷಣಾತ್ ॥ ೨೬ ॥

---

ಮನೋನಿಗ್ರಹವನ್ನು ಮಾಡಿಯೇ ತೀರಬೇಕೆಂಬುದನ್ನು ಈ ಕಾರಿಕೆಯು ಮೂಲಕ ಆಚಾರ್ಯರು ಮನಮುಟ್ಟುವಂತೆ ವಿವರಿಸಿದ್ದಾರೆ. ||೨೪||

ಚಿತ್ತನಿಗ್ರಹ ಫಲವನ್ನಿಂತು ಶ್ರೀ ಶುಭಚಂದ್ರರು ಹೃದಯಂಗಮವಾಗಿ ವಿವರಿಸುತ್ತಾರೆ—

"ಯದಸಾಧ್ಯಂ" ಇತ್ಯಾದಿಯಾಗಿ. ಮನನಶೀಲರೇ ಮುನಿಗಳು ಅದರಿಂದ ಅವರು ಮಾತ್ಸರ್ಯವನ್ನು ಉತ್ಸಾರಣಮಾಡಿರುವವರು. ಇವರು ಕಾಯಕ್ಲೇಶ-ಮನಃಕ್ಲೇಶ ರೂಪವಾದ ಕಠಿಣತಪೋನಿಷ್ಠರು. ಇಂತಹವರಿಗೆ ಸಾಧಿಸಲು ಸಾಧ್ಯವಿಲ್ಲದ ಉತ್ತಮ ಸ್ಥಾನವನ್ನು ಧೀರನಾದ ಮನೋನಿಗ್ರಹಿಯು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ. ಆದ್ದರಿಂದ ಪ್ರತಿಜೀವಿಯೂ ಆತ್ಯಂತಿಕವಾದ ದುಃಖನಿವೃತ್ತಿಸಾಧಕವಾದ ಆತ ಕಲ್ಯಾಣಕ್ಕೆ ಮೂಲವಾದ ಮನೋನಿಗ್ರಹವನ್ನು ಮಾಡಬೇಕೆಂಬುದು ಆಚಾರ್ಯ ಭಾವ. ||೨೫

ಮನೋನಿಗ್ರಹದಿಂದ ಉಂಟಾಗುವ ಭಾವಶುದ್ಧಿಯ ಫಲವನ್ನಿಂತು ಆಚಾರ್ಯರು ವರ್ಣಿಸುತ್ತಾರೆ–

"ಅನನ್ತಜನ್ಮಜೇತ್ಯಾದಿಯಾಗಿ. ಜೀವಿಜಾತದ ಬೆನ್ನು ಹತ್ತಿದ ಬೇತಾಳನೇಕರ್ಮ. ಈ ಕರ್ಮವು ಆಯಾಯಾ ಜೀವಿಯ ನಾನಾ ಪೂರ್ವಜನ್ಮಾರ್ಜಿತವಾಗಿ ಬಂದಂತಹ

---

* ಪತಂಜಲಿಯೂ ಕೂಡ—

'ತಜ್ಜಯಾತ್ಪ್ರಜ್ಞಾಲೋಕಃ'
[ಪಾತಂಜಲ ಯೋಗ ಸೂತ್ರ-ವಿಭೂತಿಪಾದ, ಸೂ-೫ ]

ಮನೋಜಯದಿಂದ ಅಲೌಕಿಕವಾದ ಜ್ಞಾನಶಕ್ತಿಯು ಬೆಳಗುತ್ತದೆ. ಅದರಿಂದ ಅನೇಕಪ್ರಕಾರವಾದ ವಿಭೂತಿಗಳು ಸಿದ್ಧಿಸುತ್ತವೆ. ಕೊನೆಯಲ್ಲಿ ವಿವೇಕ ಖ್ಯಾತಿ ರೂಪವಾದ ಕೈವಲ್ಯ (ಮುಕ್ತಿ) ಉಂಟಾಗುತ್ತದೆ; ಎಂದು ವಿವರಿಸಿದ್ದಾರೆ.

* ಯಸ್ಯ ಚಿತ್ತಂ ಸ್ಥಿರೀಭೂತಂ ಪ್ರಸನ್ನಂ ಜ್ಞಾನವಾಸಿತಮ್ ।
ಸಿದ್ಧಮೇವ ಮುನೇಸ್ತಸ್ಯ ಸಾಧ್ಯಂ ಕಿಂ ಕಾಯದಂಡನೈಃ ॥ ೨೭ ॥

---

ದೊಡ್ಡ ಗಂಟು. ಈ ಕಗ್ಗಂಟು ಅವನನ್ನು ಬಂಧಿಸಿರುತ್ತದೆ. ಅದರಿಂದ ಬಿಡುಗಡೆ ಅಸಾಧ್ಯ. ಆದರೆ ಯಾವಾತ ಮನೋನಿಗ್ರಹಿಯಾಗಿ ವಿಷಯಾಂತರಸಂಸರ್ಗದಿಂದ ಕೂಡಿದ ಮನಸ್ಸನ್ನು ಅನ್ತರ್ಮುಖಿಯಾಗಿಸುತ್ತಾನೆಯೋ ಆಗಲೀಗ ಆ ಮನಸಿನ ಭಾವ ಪರಿಶುದ್ಧವಾಗುತ್ತದೆ. ಯಾವಾಗ ಭಾವಶುದ್ಧಿಯೊದಗುತ್ತದೆಯೋ ಆಗಲೆ ಆಯಾಯಾ ಜೀವಿಯು ಕರ್ಮಬಂಧದಿಂದ ಬಿಡುಗಡೆ ಹೊಂದುತ್ತಾನೆ. ಅನುಪದವೇ ಆತ್ಮೋಪಾಸನಪರನಾಗಿ ಮನನಶೀಲನೆನಿಸಿ ಆತ್ಮೋಪಾಸನದ್ವಾರಾ ಕೈವಲ್ಯವನ್ನು ಪಡೆಯಲು ಪ್ರಯತ್ನಿಸುತ್ತಾನೆ.

ಆದ್ದರಿಂದ ಪ್ರತಿಜೀವಿಯೂ ಮನೋನಿಗ್ರಹದಿಂದ ಭಾವಶುದ್ಧಿಯನ್ನು ಪಡೆದು ತನ್ಮೂಲಕ ಕರ್ಮಬಂಧದಿಂದ ಬಿಡುಗಡೆ ಹೊಂದಿ ಆತ್ಮೋಪಾಸನಾ ನಿರತನಾಗಿ ಮುಕ್ತಿವನಿತಾಕರಗ್ರಹವನ್ನು ಮಾಡಿ ಸ್ವಾತ್ಮಮಂಗಳವನ್ನು ಪಡೆಯಬೇಕೆಂದುಆಚಾರ್ಯರ ಆಂತರ್ಯಭಾವವಾಗಿದೆ. ॥೨೬॥

"ಮನಸ್ಸಂರೋಧಯುಕ್ತನಿಗೆ ಸರ್ವಸಿದ್ಧಿ ಯುಕ್ತಂ;" ಎಂಬುದನ್ನು ಹೃದಯಂಗಮವಾಗಿ ಆಚಾರ್ಯರಿಂತು ವರ್ಣಿಸುತ್ತಾರೆ–

ಯಸ್ಯ ಚಿತ್ತಂ ಇತ್ಯಾದಿಯಾಗಿ. ಮನನಶೀಲನಾದ ಮುನಿಯ ಮನಸ್ಸು ನಿಗಹೀತವಾಗಿ ಪ್ರಸನ್ನವಾಗಿ, ರಾಗಾದಿಕಾಲುಷ್ಯಹೀನನಾಗಿ ಸದ್‌ಜ್ಞಾನವಾಸನಾವಾಸಿ ತಾಂತಃಕರಣವುಳ್ಳದ್ದಾಗಿ ಆಗುತ್ತದೆಯೋ ಅಂತಹ ಪರಮರ್ಷಿಗೆ ಆತ್ಮಸ್ವರೂಪಪ್ರಾಪಿರೂಪ ಸಕಲಕಾರ್ಯಗಳು ಕರತಲಾಮಲಕದಂತೆ ಸಿದ್ಧವೇ ಆದಾಗ ಆತನಿಗೆ ದೇಹ ದಂಡನಾದಿಗಳಿಂದ ಪ್ರಯೋಜನವೇ ಇಲ್ಲ; ಎಂದು ತಾತ್ಪರ್ಯ. ॥೨೭॥

---

* ಬುದ್ಧಿ ಅಥವಾ ಚಿತ್ತ ಪರಿಣಾಮಶೀಲ, ಜಡ, ಭೋಗ್ಯ ಮಾರ್ಗದರ್ಶಿ ಹಾಗೂ ಚಂಚಲ. ಪುರುಷ ಅಪರಿಣಾಮಿಯಾದ ಚೈತನ್ಯವುಳ್ಳವ; ವಿಷಯಭೋಕ್ತಾ ಮತ್ತೆ ಅಸಂಗಿ. ಆದ್ದರಿಂದ ಇವೆರಡೂ ಬೇರೆಬೇರೆಯಾದ್ದರಿಂದ ಒಂದರಲ್ಲೊಂದು ಕೂಡಲಾರದು. ಆದ್ದರಿಂದ ಜಡವಾದ ಚಿತ್ತದಲ್ಲಿ ಚೈತನ್ಯಯುಕ್ತನಾದ ಪುರುಷ ಪ್ರತಿಬಿಂಬಿಸಿದಾಗ ಸುಖದುಃಖಾದಿಗಳು ಉತ್ಪನ್ನವಾಗುತ್ತವೆ. ಈ ವೃತ್ತಿ ಮಿಶ್ರಿತ. ಕಾರಣ: ಚಿತ್ತದಲ್ಲಿ– ಧರ್ಮ, ಸುಖ ದುಃಖ, ಮೋಹ ಇವೇ ಮುಂತಾದುವುಗಳು ಪ್ರತಿಬಿಂಬಿಸಿ

+ತಪಃಶ್ರುತಯಮಜ್ಞಾನ-ತನುಕ್ಲೇಶಾದಿಸಂಶ್ರಯಮ್ ।
ಅನಿಯನ್ತ್ರಿತಚಿತ್ತಸ್ಯ ಸ್ಯಾನ್ಮುನೇಸ್ತುಷಖಣ್ಡನಮ್ ॥ ॥೨೮॥

---

ಮುನಿಯಾದವನಿಗೂ ಮನೋನಿಗ್ರಹವಿಲ್ಲದಿದ್ದರೆ– ಅವನ ಅನುಷ್ಠಾನಗಳೆಲ್ಲಾ ವ್ಯರ್ಥವಾಗುತ್ತೆಂದು ಉದಾಹರಣಪೂರ್ವಕವಾಗಿ ಎಚ್ಚರಿಸುತ್ತಾರೆ–

ತಪಶ್ಶ್ರುತಮಯೇತ್ಯಾದಿ. ಆತ್ಯಂತಿಕವಾದ ಗುರಿಯ ಸಾಧನೆಗಾಗಿ ಶರೀರವನ್ನು, ಮನವನ್ನು ತನ್ನ ಅನುಷ್ಠಾನಗಳಿಂದ ತಲ್ಲಣಗೊಳಿಸುವುದೇ ತಪಸ್ಸು. ಕಿವಿಯಿಂದ ಕಿವಿಗೆ ಹರಿದು ಬಂದ ಪರಂಪರಾಗತವಾದ ತತ್ವವಿಚಾರವೇ ಶ್ರುತ. ಆ ಶ್ರುತಾನುಷ್ಠಾನದಲ್ಲಿ ಹೇಸಿಗೆಗೊಳ್ಳದೆ ಅದನ್ನು ಸಮ್ಯಕ್ ಆಚರಿಸುವುದೇ ವ್ರತ. ಈ ತಪ-ಶ್ರುತಗಳನ್ನು ಅನುಸರಿಸಿ ವ್ರತಧಾರಿಯಾಗಿ ತತ್ತ್ವಜ್ಞಾನವನ್ನು ಹೆಚ್ಚಿಸಿಕೊಳ್ಳುವುದೇ ಜ್ಞಾನ. ಇವೆಲ್ಲವನ್ನು ನಡವಳಿಕೆಯಲ್ಲಿ ಅಳವಡಿಸಿಕೊಳ್ಳಲು ಶಾರೀ

---

ಚೈತನ್ಯಶಾಲಿಯಾದ ಪುರುಷನಿಂದ ಅಧ್ಯಾರೋಪಿತವಾಗುವುದೇ ಆಗಿದೆ. ಇದರ ಅಭೇದ ಪ್ರತೀತಿಯೇ ಭೋಗ. ಒಟ್ಟನಲಿ ಹೇಳುವುದಾದರೆ– ಸುಖ-ದುಃಖಾದಿಗಳ ಭೋಗ ಚಿತ್ತದಲ್ಲಿ ಉಂಟಾಗುತ್ತವೆ. ಆದರೆ ಪುರುಷ ಅಜ್ಞಾನದಿಂದ ತನ್ನನ್ನು ಸುಖಿ ವಾ ದುಃಖಿ ಎಂದು ಭಾವಿಸುತ್ತಾನೆ. ಹೀಗೆ ತಿಳಿಯುವುದೇ ಭೋಗ. ಸ್ವಚ್ಛ ಜಲದಲ್ಲಿ ಚಂದ್ರನ ಪ್ರತಿಬಿಂಬ ಕಾಣುವುದೇ ವಿನಹ ವಾಸ್ತವಿಕವಾಗಿ ಚಂದ್ರ ಅಲ್ಲಿಲ್ಲವಲ್ಲವೆ ? ಅಂತೆಯೇ ಭೋಗವು ಚಿತ್ತದ ಮೇಲೆ ಪರಿಣಾಮ ಉಂಟುಮಾಡುವುದಕ್ಕೆ ವಾಸ್ತವಿಕವಾಗಿ ಚಿತ್ತವೇ ಕಾರಣ. ಮತ್ತೇನೆಂದರೆ– ಈ ಪ್ರತಿಬಿಂಬದಿಂದ ನಿರ್ವಿಕಾರಿಯಾದ ಆತ್ಮನಲ್ಲಿ ಸುಖ-ದುಃಖಾದಿಗಳ ಆರೋಪರೂಪಭೋಗವಾಗಿ ಕಾಣುತ್ತದೆ ಈ ಮೋಹದ ಬಲೆಯಿಂದ ಹೊರಬಂದು ಜೀವಿಯಾದವನು ಸ್ವಾರ್ಥ ಪ್ರತ್ಯಯದಿಂದ ಸಂಯಮಿಯಾದದ್ದೇ ಆದರೆ ಆತ್ಮಜ್ಞಾನವು ಉಂಟಾಗಿ ಮುಕ್ತಿ ಸಿದ್ಧಿಯನ್ನು ಆತ ಪಡೆಯುತ್ತಾನೆ– ಎಂದು ತಾತ್ಪರ್ಯ.

+ ಶ್ರೀ ಮಾಘಣಂದಿಗಳು ತಮ್ಮ ಪದಾರ್ಥಸಾರದ ಸಂಯಮ ಮಾರ್ಗಣೆಯಲ್ಲಿ ತಪಸ್ಸನ್ನೀಂತು ವಿವರಿಸಿದ್ದಾರೆ–

ಭೇದಾಭೇದರತ್ನತ್ರಯಂಗಳಂ ಪ್ರಕಟಂ ಮಾಡಲು ಕರ್ಮಕ್ಷಯಾರ್ಥಂ ಮಾರ್ಗಕೆ ವಿರೋಧಮಾಗದಾಶೀಂದ್ರಿಯಮನೋನಿರೋಧಮಂ ತಪಮೆಂಬುದು

ಏಕೈವ ಹಿ ಮನಶ್ಶುದ್ಧಿಃ ಲೋಕಾಗ್ರಪಥದೀಪಿಕಾ ।
ಸ್ಖಲಿತಂ ಬಹುಭಿಸ್ತತ್ರ ತಾಮನಾಸಾದ್ಯ ನಿರ್ಮಲಾಮ್ ॥೨೯॥

---

ರಕವಾಗಿ, ಮಾನಸಿಕವಾಗಿ ಪ್ರಯುತ್ನಿಸುವುದೇ ತನುಕ್ಲೇಶ. ಇವೆಲ್ಲವೂ ಕೂಡ ಅನಿಯನ್ತ್ರಿತಚಿತ್ತನಾದ ಮುನಿಗೆ ತೌಡಿನರಾಶಿಯಂತೆ ನಿಷ್ಪ್ರಯೋಜಕವಾಗುತ್ತದೆ. ಆದ್ದರಿಂದ ಮುನಿಯೂಕೂಡ ಸ್ವಾತ್ಮಮಂಗಳಾರ್ಥವಾಗಿ ಮನಸ್ಸಂತೋಷವನ್ನು ಸಾಧಿಸಿಯೇ ತೀರಬೇಕೆಂಬುದು ಆಚಾರ್ಯಶುಭಚಂದ್ರರ ಆಂತರಭಾವ. ॥೨೮॥

ಮನಶ್ಶುದ್ಧಿಯಿಂದ ಪರಮೋತ್ಕೃಷ್ಟಫಲಸಾಧನತ್ವ ತದಭಾವದಿಂದ ಆಗುವ ಉತ್ಕೃಷ್ಟಫಲಚ್ಯುತಿತ್ವ- ಇವುಗಳನ್ನು ಶುಭಚಂದ್ರರು ಈ ಕಾರಿಕೆಯಲ್ಲಿ ವರ್ಣಿಸುತ್ತಾರೆ—

ಏಕೈವ ಹಿ ಇತ್ಯಾದಿಯಾಗಿ. ಮನಸ್ಸು ಸ್ವಯಂಪ್ರಕಾಶಿಯಾದ ದೀಪವಿದ್ದಂತೆ. ಆದರೆ ದೀಪಕ್ಕೆಮರೆಯಾಗಿವಸ್ತ್ವಂತರವಿದ್ದಾಗಲ ಪ್ರಕಾಶ ಮರೆಯಾಗುವುದು ಸಹಜ. ಹಾಗೆಯೇ ಮನಸ್ಸು ಶುದ್ಧವಾದದ್ದೇ ಆದರೆ ಅದು ಮಾನವನನ್ನು ದೈವತ್ವಕ್ಕೇರಿಸುವ ಹಾಗೂ ಲೋಕದ ತುಟ್ಟತುದಿಗೇರಿಸುವ ಮುಕ್ತಿಸಾಮ್ರಾಜ್ಯಕ್ಕೇರಿಸುವ ದಾರಿ ದೀಪವಾದೀತು. ಆದ್ದರಿಂದಲೇ ಎಷ್ಟೋ ವಿರಾಗಿಗಳು ವಿಷಯವಿಮುಖರಾಗಿದ್ದಾಗ್ಯೂ ಮನಸ್ಸಿನ ಪರಿಶುಧ್ಯತೆಯ ವಿಷಯದಲ್ಲಿ ಎಚ್ಚರಿಕೆಯಿಲ್ಲದೆ ಅಡ್ಡದಾರಿ ಹಿಡಿದು ಆತ್ಮಾನಂದವನ್ನು ತರುವ ಮುಕ್ತಿಸಾಮ್ರಾಜ್ಯವನ್ನು ಹೊಂದಲಾರದೆ ವಂಚಿತರಾಗಿದ್ದಾರೆ.

---

ಅದುವುಂ ಬಾಹ್ಯಾಭ್ಯಂತರಭೇದದಿನಿತ್ತೆರಮ್. ಅನಶನ-ಅವಮೌದರ್ಯ-ವೃತ್ತಿಪರಿಸಂಖ್ಯಾನ-ರಸಪರಿತ್ಯಾಗ-ವಿವಿಕ್ತಶಯನ-ಆಸನ-ಕಾಯಕ್ಲೇಶ ಎಂಬಿವಾಱುಂ ಬಾಹ್ಯತಪಂಗಳು; ಪ್ರಾಯಶ್ಚಿತ್ತ-ವಿನಯ-ವೈಯಾವೃತ್ಯ-ಸ್ವಾಧ್ಯಾಯ-ವ್ಯುತ್ಸರ್ಗ-ಧ್ಯಾನಂ ಎಂಬಿವಾಱುಂ ಆಭ್ಯಂತರತಪಂ; ಇವೆಲ್ಲಂಕೂಡಿ ತಪಂ ಪನಿತ್ತೆರನಕ್ಕುಮ್.

ಮಾಘಣಂದಿಗಳ ಪದಾರ್ಥಸಾರ– ಸಂಯಮಮಾರ್ಗಣೆ,
ಪ್ರಕಾ. ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ ಮೈಸೂರು,

+ ಶ್ರುತಜ್ಞಾನಾದಿ ವಿಷಯಗಳ ವಿವರಕ್ಕೆ— ಮಾಘಣಂದಿಗಳ ಪದಾರ್ಥಸಾರದ ಜ್ಞಾನಮಾರ್ಗಣೆ (೨೨ನೇ ಪರಿಚ್ಛೇಧ) ನೋಡಿರಿ. ಮಾ. ಗಂ, ಮೈಸೂರು.
ಪ್ರಕಾ. ಕ. ಅ. ಸಂ. ಮೈ. ವಿ.ವಿ

ಅಸನ್ತೋಽಪಿ ಗುಣಾಃ ಸನ್ತಿ ಯಸ್ಯಾಂ ಸತಾಂ ಶರೀರಿಣಾಮ್ ।
ಸನ್ತೋಽಪಿ ಯಾಂ ವಿನಾ ಯಾನ್ತಿ ಸಾಮನಶ್ಶುದ್ಧಿಃ ಶಸ್ಯತೇ ॥೩೦॥

*ಅಪಿ ಲೋಕತ್ರಯೈಶ್ವರ್ಯಂ ಸರ್ವಾಕ್ಷಪ್ರೀಣನಕ್ಷಮಮ್ ।
ಭಜನ್ತ್ಯಚಿನ್ತ್ಯವೀರ್ಯೋಽಯಂ ಚಿತ್ತದೈತ್ಯೋ ನಿರಂಕುಶಃ ॥೩೧॥

---

ಆದ್ದರಿಂದ ವಿವೇಕಿಯಾದ ತ್ಯಾಗಿಯು ವಿಷಯವೈಮುಖ್ಯತೆಯನ್ನು ಮಾತ್ರ ಪಡೆದರೆ ಸಾಲದು. ಮನಸ್ಸಿನ ಪಾರಿಶುದ್ಧ್ಯತೆಯನ್ನೂ ಪಡೆಯಬೇಕೆಂಬುದು ಈ ಕಾರಿಕೆಯ ಅಂತರಾರ್ಥವಾಗಿದೆ. ॥೨೯॥

ಮನಶ್ಶುದ್ಧಿಯ ಔತ್ಕೃಷ್ಟ್ಯ ಸ್ವರೂಪವನ್ನಿಂತು ಆಚಾರ್ಯಶ್ರೀಗಳು ಬಣ್ಣಿಸುತ್ತಾರೆ-

ಅಸನ್ತೋಽಪಿತ್ಯಾದಿಯಾಗಿ. ಯಾವನ ಮನಸ್ಸು ಪರಿಶುದ್ಧವಾಗಿರುತ್ತದೆಯೋ ಅವನಲ್ಲಿ ಇಲ್ಲದ ಇರುವ ಗುಣಗಳೂ ಅಸ್ತಿತ್ವವನ್ನು ಪಡೆಯುತ್ತವೆ. ಯಾವಾತನಿಗೆ ಹೀಗಿಲ್ಲವೋ ಆತನ ವಿದ್ಯಮಾನಗುಣಗಳೇ ತಮ್ಮ ಅಸ್ತಿತ್ವವನ್ನು ಹೊರಗೆಡಹುವವು; ಎಂದರೆ ಮನಶ್ಶುದ್ಧಿಯು ಪ್ರಶಂಸೆಗೆ ಕಾರಣವಾಗುತ್ತವೆ; ಎಂಬುದು ಈ ಕಾರಿಕೆಯ ಅಂತರಾರ್ಥ

ನಿರಂಕುಶವಾದ ಚಿತ್ತ ಅನೇಕ ಕರ್ಮಬಂಧಕ್ಕೆ ತುತ್ತಾಗುವುದನ್ನು ಆಚಾರ್ಯರು ರಸವತ್ತಾಗಿ ಈ ಕಾರಿಕೆಯಲ್ಲಿ ವರ್ಣಿಸುತ್ತಾರೆ

'ಅಪಿಲೋಕತ್ರಯೈಶ್ವರ್ಯಂ" ಇತ್ಯಾದಿಯಾಗಿ ಮನಸ್ಸು ಎಲ್ಲಾ ಇಂದ್ರಿಯಗಳ ದಾಹವನ್ನು ಏಕಾಂಗ ಸಾಹಸಿಯಾಗಿ ತಣಿಸುವ ಶಕ್ತಿಯುಳ್ಳ ಮಹಾರಾಕ್ಷಸನಿ

---

ವಾಲ್ಮೀಕಿಮಹರ್ಷಿಯೂ "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" (ಶ್ರೀರಾಮಾಯಣ)ಎಂದರೆ- ಮಾನವನ ಬಂಧಮೋಕ್ಷಗಳಿಗೆ ಮನವೇ ಕಾರಣ. ತಥಾಹಿ ಮನಸ್ಸು ಶುದ್ಧವಾಗಿದ್ದಾಗ ಅದು ಆತ್ಮವಂಗಳದ ಪರಮೋಚ್ಚಸ್ಥಾನವನ್ನು ಹೊಂದಿಸಲು ಸಾಧನವಾದೀತು. ಅದಕ್ಕೆ ಕಶ್ಮಲ ಆವರಿಸಿದಾಗ ಸಾಂಸಾರಿಕ ಬಂಧನಕ್ಕೆ ಅದೇ ಕಾರಣವಾದೀತು ಎಂಬುದನ್ನು ಸ್ಪಷ್ಟಪಡಿಸಿದ್ದಾನೆ.

# ಚಂದ್ರಪ್ರಭಾ ಟ್ರಸ್ಟ್
## ಜಿನವಾಣಿ ಕಾರ್ಯಾಲಯ

ನಂ ೬೩. ಡಿ. ಬನುಮಯ್ಯರಸ್ತೆ, ಮೈಸೂರು.

ಜಿನವಾಣಿ REG. NO. K.R.N.N. 17

೧೩) ಎ. ಸಿ. ಎ. ದೇವೇಂದ್ರಪ್ಪನವರು, ಮೈಸೂರು

೧೪) ಪಾರ್ಶ್ವನಾಥಯ್ಯನವರು, ಬೆಂಗಳೂರು

೧೫) ಬಿ ಜೆ. ಸುರೇಂದ್ರಕುಮಾರ್,

೧೬) ಎಂ. ಕೆ. ಅನಂತಯ್ಯನವರು, ವೈನಾಡು

೧೭) ಶ್ರೀಮತಿ ಚಂದ್ರಮತಿ ಅಮ್ಮನವರು, ವೈನಾಡು

೧೮) ಪಿ. ಡಿ. ಚಂದ್ರಪ್ರಭ, ರಾಡಿಕೆರೆ

೧೯) ಎಸ್. ಎಸ್. ಡಿ. ನಾಗರಾಜಯ್ಯನವರು, ಶ್ರವಳಬೆಳಗೊಳ

೨೦) ಶ್ರೀ ಚಂದ್ರಪ್ರಭ ಕರಿಂಗುತ್ತಿ

To

BOOK POST

**ಜಿನವಾಣಿಕಾರ್ಯಾಲಯ**

ನಂ.67. ಡಿ. ಬನುಮಯ್ಯ ರಸ್ತೆ, ಮೈಸೂರು-೫೭೦೦೦೧



The Jinavani, the monthly Kannada Magazine is Edited an Published by Sri M.C. Padmanabhasharma & Printed by B.V. Alahiyamanavalan, Propritor, Sri Vijayalakshmi Press, 355, D. subbiah Road MYSOR 1

